'ಧರ್ಮಾನ್ನ ಪ್ರಮದಿತವ್ಯಮ್'

# ಮನುಸ್ಮೃತಿಸಾರ

ಎಸ್. ಕೆ. ನರಸಿಂಹಮೂರ್ತಿ, ಎಂ.ಎಸ್‌ಸಿ.

ಪ್ರಕಾಶಕರು :
ಪ್ರಭಾ ಮುದ್ರಣಾಲಯ, ಬಸವನಗುಡಿ, ಬೆಂಗಳೂರು–4

# ಮನುಸ್ಮೃತಿಸಾರ

ಎನ್. ಕೆ. ನರಸಿಂಹಮೂರ್ತಿ, ಎಂ.ಎಸ್‌ಸಿ.

‘ ಧರ್ಮಾನ್ನ ಪ್ರಮದಿತವ್ಯಮ್ ’

ಪ್ರಕಾಶಕರು :
ಪ್ರಭಾ ಮುದ್ರಣಾಲಯ
22–A, ಡಾ॥ ಡಿ. ವಿ. ಗುಂಡಪ್ಪ ರಸ್ತೆ
ಬಸವನಗುಡಿ, ಬೆಂಗಳೂರು–೪

# ಪ್ರಸ್ತಾವನೆ

ಹಿಂದೊಮ್ಮೆ ಅಷ್ಟಾದಶಸ್ಮೃತಿಗಳನ್ನೊಳಗೊಂಡ ಗ್ರಂಥವನ್ನು ಅವಲೋಕಿಸಿದಮೇಲೆ, ಮನುಸ್ಮೃತಿಯತ್ತ ನನ್ನ ಗಮನವು ತಿರುಗಿತು. ಅನೇಕಬಾರಿ ಅದನ್ನು ಓದಿ, ಅದರಲ್ಲಿ ಸಾರ್ವದೇಶಿಕವಾಗಿ ಮತ್ತು ಸಾರ್ವಕಾಲಿಕವಾಗಿ ಅನ್ವಯಿಸುವ ಅನೇಕ ಧರ್ಮಗಳು ಸಂಗ್ರಹಿಸಲ್ಪಟ್ಟಿರುವುದನ್ನು ಮನಗಂಡೆನು. ನನ್ನ ಮನಸ್ಸನ್ನು ಸೆಳೆದ ವಿಷಯಗಳನ್ನು ಕನ್ನಡದಲ್ಲಿ ಬರೆದು ನನ್ನ ದೇಶಬಾಂಧವರಿಗೂ ತಿಳಿಸಬೇಕೆನ್ನಿಸಿತು. ನಿರ್ಣಯಸಾಗರ ಮುದ್ರಣಾಲಯದಲ್ಲಿ ಮುದ್ರಿತವಾದ ಗ್ರಂಥವನ್ನೇ ಮೂಲವಾಗಿಟ್ಟುಕೊಂಡು ಅದರಲ್ಲಿ 2,800ಕ್ಕಿಂತ ಹೆಚ್ಚಾಗಿ ಇರುವ ಶ್ಲೋಕಗಳ ಮುಖ್ಯಾಭಿಪ್ರಾಯವನ್ನು ಆದಷ್ಟುಮಟ್ಟಿಗೆ 630 ಶ್ಲೋಕಗಳಲ್ಲಿ ಸಂಕ್ಷೇಪಮಾಡಿ ಯಥಾಮತಿ ಹೇಳುವ ಸಾಹಸವನ್ನು ಈಗ ಮಾಡಿದ್ದೇನೆ. ಸಹಜವಾಗಿಯೇ ಕಷ್ಟಸಾಧ್ಯವಾದ ಈ ಕಾರ್ಯದಲ್ಲಿ ನಾನೆಷ್ಟು ಕೃತಕೃತ್ಯನಾಗಿದ್ದೇನೆಯೋ ಹೇಳಲಾರೆ. ಮುಖ್ಯವಾದ ವಿಷಯಗಳನ್ನು ತಿಳಿಸಿದ್ದೇನೆಂದು ಮಾತ್ರ ನಂಬಿದ್ದೇನೆ; ಆದರೆ ಬಿಟ್ಟಿರುವ ವಿಷಯಗಳೆಲ್ಲ ಅಮುಖ್ಯವಲ್ಲ. ಉದಾಹರಣೆಗೆ, ಪ್ರಾಯಶ್ಚಿತ್ತವೆಂಬ ವಿಷಯದಲ್ಲಿ ಒಂದೆರಡು ಶ್ಲೋಕಗಳನ್ನು ಮಾತ್ರ ಆರಿಸಿದ್ದೇನೆ. ಅವು ದಿಕ್ಸೂಚಿಗಳಂತಿವೆಯೇ ಅಲ್ಲದೆ, ಎಲ್ಲ ಪ್ರಾಯಶ್ಚಿತ್ತಗಳನ್ನೂ ಇಲ್ಲಿ ವಿವರಿಸುವ ಉದ್ದೇಶವಿಲ್ಲ.

ಈ ಭಾಷಾಂತರಕ್ಕಾಗಿ ಕುಲ್ಲೂಕಭಟ್ಟನ ವ್ಯಾಖ್ಯಾನವನ್ನೇ ಮುಖ್ಯವಾಗಿ ಅವಲಂಬಿಸಿದ್ದೇನೆ. ಆದರೂ ಸಂದೇಹ ನಿವಾರಣೆಗಾಗಿ, ಮಹಾಮಹೋಪಾಧ್ಯಾಯ ಗಂಗಾನಾಥ ಝಾ, ಬ್ಯೂಲರ್ ಮುಂತಾದವರ ಆಂಗ್ಲ ಭಾಷಾಂತರಗಳನ್ನೂ, ಬಿಹಾರ ಸರ್ಕಾರದಿಂದ ಪ್ರಕಾಶಿತವಾದ ಹಿಂದೀ ಭಾಷಾಂತರವನ್ನೂ ನೋಡಿದ್ದೇನೆ. ಸ್ವತಂತ್ರವಾಗಿ ನನಗೆ ತೋರಿಬಂದ ಕೆಲವು ವಿಷಯಗಳನ್ನು ಅಲ್ಲಲ್ಲಿ ಟಿಪ್ಪಣಿಗಳ ರೂಪದಿಂದ ಕಂಸಗಳಲ್ಲಿ ಕೊಟ್ಟಿದ್ದೇನೆ. ಬರೇ ಮನುಸ್ಮೃತಿಯನ್ನು ಸಂಗ್ರಹಿಸುವ ಉದ್ದೇಶವಿದ್ದುದರಿಂದ, ತುಲನಾತ್ಮಕದೃಷ್ಟಿಯಿಂದ ಇಲ್ಲಿ ಇತರ ಸ್ಮೃತಿಗಳ ವಿಷಯಗಳನ್ನು ತಿಳಿಸಿಲ್ಲ.

ಧರ್ಮಸೂತ್ರಗಳು ಮತ್ತು ಸ್ಮೃತಿಗಳಿಂದ ನಮ್ಮ ದೇಶದ ಭೂಪ್ರದೇಶಗಳು, ಇಲ್ಲಿನ ಬಗೆಬಗೆಯ ಸಸ್ಯಗಳು ಮತ್ತು ಪ್ರಾಣಿಗಳು—ಇವುಗಳ

ವರ್ಣನೆಯನ್ನೂ ಆಯಾಕಾಲದ ಸಮಾಜದ ಪರಿಸ್ಥಿತಿಯನ್ನೂ ಅರಿಯಬಹುದು. ಸಮಾಜದ ವ್ಯವಸ್ಥೆಗಾಗಿ ನಮ್ಮ ದೇಶದಲ್ಲಿ ಬ್ರಿಟಿಷ್ ಆಳರಸರು ಕಾನೂನುಗಳನ್ನು ರಚಿಸಬೇಕಾದಾಗ 'ಇಂಡಿಯನ್ ಪೀನಲ್ ಕೋಡ್' ಎಂಬ ಗ್ರಂಥಕ್ಕೆ ಮನುಧರ್ಮಶಾಸ್ತ್ರವನ್ನೇ ಮುಖ್ಯವಾದ ಪ್ರಮಾಣವನ್ನಾಗಿ ಅಂಗೀಕರಿಸಿದರು. ಇದು ಅನೇಕ ಮಹತ್ವದ ವಿಷಯಗಳನ್ನು ಒಳಗೊಂಡಿದ್ದರೂ ಈ ಧರ್ಮಶಾಸ್ತ್ರಗ್ರಂಥಗಳ ವಿಷಯದಲ್ಲಿ ಸಾಮಾನ್ಯಜನರಿಗೆ ಆಸಕ್ತಿ ಹುಟ್ಟಲಿಲ್ಲ. ವಿದ್ವಾಂಸರಲ್ಲಿಯೂ ವೇದಾಂತ, ತರ್ಕ, ವ್ಯಾಕರಣಗಳನ್ನು ಅಭ್ಯಾಸಮಾಡುವಷ್ಟು ಜನ ಶ್ರುತಿ, ಸ್ಮೃತಿಗಳ ಅಧ್ಯಯನಮಾಡುವುದಿಲ್ಲ. ಆದರೂ ಅವು ಇತರ ಶಾಸ್ತ್ರಗಳಿಗೆಲ್ಲ ಮೂಲಪ್ರಮಾಣಗಳೆಂದು ನಂಬುತ್ತಾರೆ. ಪಾಶ್ಚಾತ್ಯ ವಿದ್ವಾಂಸರಾದ ಬ್ಯೂಲರ್, ಜಾಲಿ ಮೊದಲಾದವರು ಈ ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿ ಗ್ರಂಥಗಳನ್ನು ತಮ್ಮ ಭಾಷೆಗೂ ತರ್ಜುಮೆ ಮಾಡಿ ಪ್ರಕಟಿಸಿ ನಮ್ಮ ಜನರಿಗೆ ಮಹೋಪಕಾರಮಾಡಿದ್ದಾರೆ. ಕಾಣೆ, ಬಾಲಕೃಷ್ಣ ಘೋಷ್ ಮುಂತಾದ ನಮ್ಮ ದೇಶದ ಪಂಡಿತರೂ ಇತ್ತೀಚಿಗೆ ಧರ್ಮಶಾಸ್ತ್ರಗ್ರಂಥಗಳ ಶುದ್ಧವಾದ ಪ್ರತಿಗಳನ್ನು ಸಿದ್ಧಪಡಿಸುವುದು, ನಮ್ಮ ದೃಷ್ಟಿಯಿಂದ ವಿಷಯಗಳನ್ನು ವಿಮರ್ಶಿಸುವುದು ಮುಂತಾದ ರೀತಿಯಲ್ಲಿ ಶ್ರಮಿಸಿದ್ದಾರೆ.

ಆಪಸ್ತಂಬಾದಿ ಧರ್ಮಸೂತ್ರಗಳು ಮತ್ತು ಸ್ಮೃತಿಗಳು ಕ್ರಿಸ್ತ ಶಕಕ್ಕೆ ಮೊದಲೇ ಇದ್ದುವೆಂದು ಇತಿಹಾಸಜ್ಞರ ಮತ. ಧರ್ಮಸೂತ್ರಗಳು ಮೊದಲು ರಚಿತವಾದವೆಂದೂ, ಆಮೇಲೆ ಛಂದೋಬದ್ಧವಾದ ಪದ್ಯಗಳಲ್ಲಿ ಸ್ಮೃತಿಗಳು ರಚಿತವಾದವೆಂದೂ ಅವರು ಹೇಳುತ್ತಾರೆ. ಕ್ರಿಸ್ತ ಪೂರ್ವ ಎರಡನೇ ಶತಮಾನದಿಂದ ಕ್ರಿಸ್ತ ಶಕದ ಎರಡನೇ ಶತಮಾನದೊಳಗೇ ಈ ಮನುಸ್ಮೃತಿ ರಚಿತವಾಗಿರಬೇಕೆಂದು ಬ್ಯೂಲರ್ ಅಭಿಪ್ರಾಯಪಡುತ್ತಾರೆ. ಮೂಲಗ್ರಂಥವಾದ ಮಾನವಧರ್ಮಸೂತ್ರಗಳೆಂಬ ಗ್ರಂಥದಿಂದ ಬಹುಕಾಲದ ಮೇಲೆ ಇದನ್ನು ಉದ್ಧರಿಸಿರಬೇಕೆಂದು ಅನೇಕರು ಹೇಳುತ್ತಾರೆ. ಮನು ಹೇಳಿದುದನ್ನು ಕೇಳಿ ತಿಳಿದುಕೊಂಡು, ಭೃಗುವು ಶ್ರೋತೃಗಳಾದ ಋಷಿಗಳಿಗೆ ಇದನ್ನು ಹೇಳಿದನು ಎಂದು ಮನುಸ್ಮೃತಿಯ ಮೊದಲನೆಯ ಅಧ್ಯಾಯದಿಂದ ಗೊತ್ತಾಗುತ್ತದೆ.

ಈ ಗ್ರಂಥದಿಂದ ನಮ್ಮ ದೇಶದ ನಾಗರಿಕತೆ ಎರಡು ಸಾವಿರ ವರ್ಷಗಳಿಗಿಂತ ಮೊದಲೇ ಎಷ್ಟು ಅಭಿವೃದ್ಧಿಯನ್ನು ಪಡೆದಿತ್ತು ಎಂಬುದನ್ನು ಮನಗಾಣಬಹುದು. ಆಗಿನ ಸಮಾಜವು ಸಮೃದ್ಧವೂ ಸುವ್ಯವಸ್ಥಿತವೂ ಆಗಿದ್ದಿತು. ಅನೇಕ ಜನರು ತಮ್ಮ ಜಾತಿಯ ನಿಮಿತ್ತವಾಗಿ ಬಗೆಬಗೆಯ ಕಸಬುಗಳನ್ನು ಆಶ್ರಯಿಸಿ ಸುಖವಾಗಿ ಬಾಳುತ್ತಿದ್ದರು.

**ಸರ್ವೇಷಾಂ ಬ್ರಾಹ್ಮಣೋ ವಿದ್ಯಾದ್ವೃತ್ತ್ಯುಪಾಯಾನ್ಯಥಾವಿಧಿ ।**
**ಪ್ರಬ್ರೂಯಾದಿತರೇಭ್ಯಶ್ಚ ಸ್ವಯಂ ಚೈವ ತಥಾ ಭವೇತ್ ॥** X (2)

ಎಂಬ ಶ್ಲೋಕದಿಂದ ಬ್ರಾಹ್ಮಣನು ಎಲ್ಲ ವರ್ಣದವರ ಜೀವನೋಪಾಯಗಳನ್ನೂ ತಾನು ವಿಧಿವತ್ತಾಗಿ ತಿಳಿದು, ತನ್ನ ನಿಯಮಗಳನ್ನು ತಾನು ಅನುಸರಿಸುತ್ತಾ, ಇತರರಿಗೆ ಆವರವರ ವಿಹಿತ ಜೀವನೋಪಾಯಗಳ ಬಗೆಗೆ ತಿಳಿವಳಿಕೆಕೊಡಬೇಕೆಂದು ವಿಧಿಸಿದೆ. ಜನರು ತಮ್ಮ ಬಳಕೆಯಲ್ಲಿರುವ ತಾಮ್ರ, ಕಬ್ಬಿಣ, ಹಿತ್ತಾಳೆ, ತವರ, ಸೀಸ ಮುಂತಾದ ಪಾತ್ರೆಗಳನ್ನು ಉಪ್ಪು, ಹುಣಿಸೆಹಣ್ಣು, ನೀರು, ಬೂದಿ ಮುಂತಾದುವುಗಳಿಂದ ಯಥಾರ್ಹವಾಗಿ ಶುದ್ಧಿಮಾಡಿಕೊಳ್ಳಬೇಕು ಎಂದು ಹೇಳಿರುವುದರಿಂದ (V–೨೪), ಎರಡುಸಾವಿರ ವರ್ಷಗಳಿಗೂ ಹಿಂದೆಯೇ ಇಲ್ಲಿನ ಜನರಿಗೆ ಆ ಲೋಹಗಳ ಪರಿಚಯವಿದ್ದಿತೆಂದೂ, ಅದುರುಗಳನ್ನು ಅರಿಸಿ ಲೋಹಗಳನ್ನು ಬೇರ್ಪಡಿಸಿ ಬಳಸಿಕೊಳ್ಳಲು ಬೇಕಾದ ರಸಾಯನಶಾಸ್ತ್ರದ ಜ್ಞಾನವಿದ್ದಿತೆಂದೂ ಗೊತ್ತಾಗುವುದು. ಆಹಾರಕ್ಕಾಗಿ ವಿಹಿತ ಮತ್ತು ನಿಷಿದ್ಧಗಳಾದ ಬಗೆಬಗೆಯ ಪಶು, ಪಕ್ಷಿ, ಮತ್ಸ್ಯಗಳ ಹೆಸರುಗಳನ್ನು ಹೇಳಿರುವುದರಿಂದ ಆ ಕಾಲದ ಜನರಿಗೆ ಅನೇಕ ಪ್ರಾಣಿಗಳ ಪರಿಚಯವಿದ್ದಿತೆಂದೂ ತಿಳಿದುಬರುವುದು. ಅನೇಕ ಬಗೆಯ ವಿವಾಹ ಪದ್ಧತಿಗಳನ್ನೂ, ಮಿಶ್ರಸಂತಾನಗಳ ಉತ್ಪತ್ತಿಯನ್ನೂ, ಮ್ಲೇಚ್ಛದೇಶ ಮುಂತಾದುವನ್ನೂ ತಿಳಿಸಿರುವುದರಿಂದ ಆಗಿನ ಸಮಾಜದ ಪರಿಸ್ಥಿತಿಯನ್ನು ಅರಿತುಕೊಳ್ಳಬಹುದು. ಈ ಗ್ರಂಥದಲ್ಲಿ ಮಾಂಸಾಹಾರದ ವಿಷಯವು ವಿಶೇಷವಾಗಿ ಬರುತ್ತದೆ. ಹಿಂದೆ ಆಪತ್ಕಾಲದಲ್ಲಿ ಮಾಂಸವನ್ನು ತಿಂದರೂ ದೋಷಭಾಗಿಗಳಾಗದ ಋಷಿಗಳ ಹೆಸರನ್ನು ಹೇಳಿದೆ. ಮಾಂಸವನ್ನು ಯಜ್ಞಕ್ಕಾಗಿ, ದೇವಪಿತೃಗಳ ತೃಪ್ತಿಗಾಗಿ ಮತ್ತು ಅತಿಥಿಸತ್ಕಾರಕ್ಕಾಗಿ ಮಾತ್ರ ಉಪಯೋಗಿಸಬೇಕೆಂದು ಹೇಳಿದೆ. ಮಾಂಸಾಹಾರವನ್ನು ಸರ್ವಥಾ

ನಿಷೇಧಿಸಿಲ್ಲ. 'ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ (V-೧೨') ಎಂಬ ಶ್ಲೋಕದಿಂದ, ಮಾಂಸಾಹಾರವು ಎಲ್ಲರಿಗೂ ಅನುಗುಣ ವಾದುದು ; ಆದರೆ ಅದು ಪ್ರಾಣಿಹಿಂಸೆಯನ್ನೊಳಗೊಂಡಿರುವುದರಿಂದ ಅದನ್ನು ಬಿಟ್ಟರೆ ಫಲ ಹೆಚ್ಚು, ಎಂದು ಹೇಳಿದೆ. ಆ ಕಾಲದವರೆಗೆ ತಡೆಯಿಲ್ಲದೆ ನಡೆದುಬರುತ್ತಿದ್ದ ಮಾಂಸಾಹಾರವನ್ನು ನಿಲ್ಲಿಸಿ ಶಾಕಾಹಾರದಿಂದ ಮನುಷ್ಯನ ಸಾತ್ವಿಕತೆಯನ್ನು ಹೆಚ್ಚಿಸುವ ಅಹಿಂಸಾಮನೋವೃತ್ತಿಯನ್ನು ಇಲ್ಲಿ ಕಾಣ ಬಹುದು. ಹೀಗೆಯೇ ವಿಮರ್ಶೆಮಾಡಿ ಆಗಿನ ಆರ್ಥಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳನ್ನು ಈ ಗ್ರಂಥದಿಂದ ತಿಳಿದುಕೊಳ್ಳಬಹುದು. ಇಷ್ಟು ವಿಶದವಾಗಿ ತಮ್ಮ ಕಾಲದ ಸಾಮಾಜಿಕ, ವೈಜ್ಞಾನಿಕ, ಆರ್ಥಿಕ, ರಾಜಕೀಯ ಪ್ರಗತಿಗಳನ್ನು ನಿರೂಪಿಸುವ ಗ್ರಂಥಗಳು ಬೇರೆ ಯಾವ ದೇಶದ ಪ್ರಾಚೀನಸಾಹಿತ್ಯದಲ್ಲಿಯೂ ಸಿಗುವುದಿಲ್ಲ. ನಮ್ಮ ಗತವೈಭವವನ್ನು ಪ್ರಶಂಸೆ ಮಾಡಿದಮೇಲೆ ಈಗ ನಮಗೆ ಪ್ರಪಂಚದ ವಿಜ್ಞಾನಿಗಳಲ್ಲಿ ಬಹು ಕೆಳಮಟ್ಟದ ಸ್ಥಾನವಿದೆ ಎಂದು ವಿಷಾದದಿಂದ ಹೇಳಬೇಕಾಗಿದೆ. ನವಭಾರತದ ಮುಂದಿನ ಪೀಳಿಗೆಯವರು ಈ ಕೊರತೆಯನ್ನು ನೀಗಿಸಿ, ವಿಜ್ಞಾನದ ಮುನ್ನಡೆಯಲ್ಲಿ ಆಸಕ್ತಿಯಿಂದ ಭಾಗವಹಿಸಿ. ದೇಶಕ್ಕೆ ಪುನಃ ಮನ್ನಣೆಯನ್ನು ತರುವರೆಂದು ಆಶಿಸೋಣ.

ಸ್ವಾಮಿ ವಿವೇಕಾನಂದರು ಮನುಸ್ಮೃತಿಯನ್ನು ಅನುಪಮವಾದ ಶ್ರೇಷ್ಠಗ್ರಂಥವೆಂದು ಹೇಳಿ, ತಮ್ಮ ಅನೇಕ ಉಪನ್ಯಾಸಗಳಲ್ಲಿ, "ಅತಿ ನೀಚ ನಿಂದಲೂ ಒಳ್ಳೆಯ ವಿಷಯಗಳನ್ನು ಶ್ರದ್ಧೆಯಿಂದ ಕಲಿ (II-೬೫)" ಎಂದು ಮನು ಹೇಳಿರುವುದನ್ನು ಪದೇ ಪದೇ ಸಾರಿ ಹೇಳಿದ್ದಾರೆ. "ಒಂದು ಕಾಲದ, ಒಂದು ಯುಗದ ಆಚಾರ ವ್ಯವಹಾರಗಳು ಮತ್ತೊಂದು ಯುಗಕ್ಕೆ ಅನ್ವಯಿಸು ವುದಿಲ್ಲ. ಆಗಾಗ ಮಹರ್ಷಿಗಳು ಜನಿಸಿ ಆಯಾ ದೇಶಗಳಿಗೆ ಉಪಯೋಗ ವಾಗುವಂತಹ ನವನವ ಆಚಾರ ವ್ಯವಹಾರಗಳನ್ನು ಜಾರಿಗೆ ತರುವರು. ಸ್ವತಂತ್ರವಾಗಿ ನಿಮಗೆ ಸಾಧ್ಯವಾದಷ್ಟನ್ನು ಜೀರ್ಣಿಸಿಕೊಳ್ಳಿ. ಎಲ್ಲ ದೇಶ ಗಳಿಂದಲೂ ಕಲಿತುಕೊಳ್ಳಿ. ನಿಮಗೆ ಯಾವುದು ಉಪಯೋಗವಾಗುವುದೋ ಅದನ್ನು ತೆಗೆದುಕೊಳ್ಳಿ. ಪ್ರತಿಯೊಂದರಲ್ಲಿಯೂ ಮುಖ್ಯವಾದುದು ಯಾವುದು, ಅಮುಖ್ಯವಾದುದು ಯಾವುದು ಎಂಬುದನ್ನು ನಾವು ಅರಿಯಬೇಕು.

ಮುಖ್ಯವಾದುವು ಎಲ್ಲ ಕಾಲಕ್ಕೂ ಅನ್ವಯಿಸುವುವು. ಅಮುಖ್ಯವಾದುವು ಕೆಲವು ಕಾಲಕ್ಕೆ ಅಥವಾ ದೇಶಕ್ಕೆ ಮಾತ್ರ ಅನ್ವಯಿಸುವುವು; ಅನಂತರ ಅವು ಬದಲಾಯಿಸದಿದ್ದರೆ ಅಪಾಯವೇ ಸಿದ್ಧ. ಯಾವುದನ್ನೂ ನಿಂದಿಸ ಬೇಡಿ. ಯಾವುದು ಈಗ ಪಾಪದಂತೆ ಕಾಣುತ್ತದೆಯೋ ಅದು ಹಿಂದೆ ಒಂದಾನೊಂದು ಕಾಲದಲ್ಲಿ ಉಪಯೋಗವಾಗಿತ್ತು. ಈಗ ಅದನ್ನು ತೆಗೆಯ ಬೇಕಾದರೆ, ದೂಷಿಸಿಯೇ ಆ ಕೆಲಸ ಮಾಡಬೇಕಾಗಿಲ್ಲ. ನಮ್ಮಲ್ಲಿ ಹಲವು ಆಧುನಿಕರು ಸಮಾಲೋಚಿಸುವಂತೆ, ಧರ್ಮ, ಜಾತಿ ಮುಂತಾದುವುಗಳನ್ನೆಲ್ಲ ಕೆಲವು ದುಷ್ಟರು ಮತ್ತು ಕಪಟಿಗಳು ಹಣದಾಸೆಯಿಂದ ಸೃಷ್ಟಿಮಾಡಲಿಲ್ಲ; ಜೀವಿಗಳ ಸ್ವಾಭಾವಿಕ ಆವಶ್ಯಕತೆಯನ್ನು ಅನುಸರಿಸಿ ಅವು ಹುಟ್ಟಿವೆ. ವಿಭಿನ್ನ ಜನರ ತೃಪ್ತಿಗಾಗಿಯೇ ಅವು ಇವೆ; ಅವನ್ನು ವಿರೋಧಿಸಬೇಕಾಗಿಲ್ಲ; ಎಂದು ಅವುಗಳ ಆವಶ್ಯಕತೆ ಇರುವುದಿಲ್ಲವೊ, ಅಂದು ಅವು ತಾವಾಗಿಯೇ ಮಾಯವಾಗಿಬಿಡುವುವು" ಎಂದು ಅವರು ಹೇಳಿದ್ದಾರೆ. ಇವು ವಿಚಾರಪರರು ಸಮಾಲೋಚನೆಮಾಡಬೇಕಾದ ವಿಷಯಗಳು.

ಸಮಾಜವು ಸುಸ್ಥಿರವಾಗಿ ನಿಲ್ಲಬೇಕಾದರೆ, ಧರ್ಮದ ಅಡಿಗಲ್ಲು ಇರಬೇಕು. "ಆಚಾರಃ ಪರಮೋ ಧರ್ಮಃ" ಎಂದು ಧರ್ಮವನ್ನು ಬರೇ ಬೋಧಿಸುತ್ತಿರುವುದು ಮಾತ್ರವೇ ಅಲ್ಲದೆ, ಅದನ್ನು ಆಚರಣೆಯಲ್ಲಿಯೂ ಇಟ್ಟುಕೊಳ್ಳಬೇಕೆಂದು ನಮ್ಮ ಹಿರಿಯರು ಹೇಳಿದರು; ಈ ಧರ್ಮಕ್ಕೆ ವೇದವೇ ಮೂಲ ಎಂದೂ ನಂಬಿದರು. ನಮ್ಮಂತೆಯೇ ಯಹೂದಿಗಳೂ ತಮ್ಮ ಪ್ರಾಚೀನ ಗ್ರಂಥವಾದ ಟೆಸ್ಟಮೆಂಟಿನಲ್ಲಿ ಹೇಳಿರುವುದನ್ನೇ ಧರ್ಮಕ್ಕೆ ಪ್ರಮಾಣವಾಗಿ ಸ್ವೀಕರಿಸಿದರು. ಗ್ರೀಕ್ ಜನಾಂಗದ ಪ್ರತಿಭಾಶಾಲಿಗಳಾದ ಸಾಕ್ರೆಟೀಸ್, ಪ್ಲೇಟೋ, ಅರಿಸ್ಟಾಟಲ್ ಮುಂತಾದವರು ಧರ್ಮದ ಸ್ವರೂಪ ವನ್ನು ಕೂಲಂಕಷವಾಗಿ ವಿಚಾರಮಾಡಿ ಹೇಳಿದ್ದರೂ, ವೇದಶಾಸ್ತ್ರಗಳಲ್ಲಿ ನಾವು ಶ್ರದ್ಧೆಯಿಟ್ಟಿರುವಂತೆ ಆ ಜನರು ತಮ್ಮ ವಿದ್ವಾಂಸರ ನುಡಿಗಳಲ್ಲಿ ಶ್ರದ್ಧಾಭಕ್ತಿಗಳನ್ನು ಇಡದಿದ್ದುದರಿಂದಲೇ ಆ ಜನಾಂಗದ ಸಂಸ್ಕೃತಿ ಗ್ರೀಸಿನಲ್ಲಿ ಮಾಯವಾಗಿಹೋಯಿತು; ನಮ್ಮ ಮತ್ತು ಯಹೂದಿ ಜನರಲ್ಲಿ ಪುರಾತನ ಸಂಸ್ಕೃತಿ ಇನ್ನೂ ಉಳಿದೇ ಇದೆ.

ಇತ್ತೀಚೆಗೆ ನಮ್ಮ ದೇಶದಲ್ಲಿಯೂ ಧರ್ಮಶ್ರದ್ಧೆ ನಷ್ಟವಾಗುತ್ತಿರು

ವುದನ್ನು ಕಾಣಬಹುದು. ಧರ್ಮವೆಂದರೇ ಮೂಗುಮುರಿಯುತ್ತಿರುವ ಜನ ಹೆಚ್ಚುತ್ತಿದ್ದಾರೆ. ಧರ್ಮವೂ ಕೆಲವರಿಗೆ ಒಂದು ವೃತ್ತಿಯೋ, ಉಪವೃತ್ತಿಯೋ ಆಗಿ ಉಳಿದಿದೆ. "ನಮ್ಮ ಧರ್ಮ ಅಡಿಗೆಮನೆಯೊಳಗೆ ಮಾತ್ರವೇ ಇದೆ" ಎಂದು ಸುಶಿಕ್ಷಿತರೂ ಘೋಷಿಸುತ್ತಿದ್ದಾರೆ. ಲೋಕಾಚಾರವೇ ಧರ್ಮವೆಂದು ಅನೇಕರಿಗೆ ಇರುವ ಭ್ರಾಂತಿಯೇ ಇದಕ್ಕೆ ಕಾರಣ. ಮನುಸ್ಮೃತಿ ಬಳಕೆಗೆ ಬಂದ ಕಾಲದಲ್ಲಿ ವರ್ಣಾಶ್ರಮದ ಕಟ್ಟುಪಾಡುಗಳು ಬಿಗಿಯಾಗಿದ್ದವು ಮತ್ತು ಅವನ್ನು ಬಿಗಿಯಾಗಿ ಇಟ್ಟುಕೊಳ್ಳುವುದೇ ಧರ್ಮಶಾಸ್ತ್ರಗ್ರಂಥಗಳ ಉದ್ದೇಶವೂ ಆಗಿತ್ತೆಂದು ತೋರುವುದು. "ಈಗ ಕ್ಷತ್ರಿಯರು ಬ್ರಾಹ್ಮಣರ ಸಂಪರ್ಕವನ್ನು ಕಳೆದುಕೊಂಡು, ತಮ್ಮ ವಿಹಿತ ಸಂಸ್ಕಾರಗಳನ್ನೇ ಬಿಟ್ಟುಬಿಡುತ್ತಿರುವುದರಿಂದ ಅವರು ಶೂದ್ರರೇ ಆಗುತ್ತಿದ್ದಾರೆ (X–೧೦)" ಎಂದು ಮನುಸ್ಮೃತಿಯಲ್ಲಿಯೇ ಹೇಳಿದೆ. "ಬ್ರಾಹ್ಮಣರ ಹಿರಿಮೆಯು ಅವರಿಂದಲೇ ನಿರ್ಮಿತವಾಗಿ ಪ್ರಚಾರಕ್ಕೆ ಬಂದು ದೇಶಕ್ಕೆ ಅಪಾರ ಹಾನಿಯಾಗಿದೆ" ಎಂದು ಸಾರುತ್ತಿದ್ದ ಬ್ರಾಹ್ಮಣ ದ್ವೇಷಿಗಳನ್ನು ಉದ್ದೇಶಿಸಿ ಮಾತನಾಡುತ್ತಾ ಸ್ವಾಮಿ ವಿವೇಕಾನಂದರು, "'ತಲೆಯೇ ಇಲ್ಲ, ತಲೆನೋವು ಬಂದಿದೆ' ಎಂಬ ಬಂಗಾಳಿ ಗಾದೆಯಂತಿದೆ, ನೀವು ವರ್ಣಾಶ್ರಮಗಳನ್ನು ಕುರಿತು ಮಾತನಾಡುತ್ತಿರುವುದು. ನಾಲ್ಕು ವರ್ಣಗಳಲ್ಲಿ ಕೇವಲ ಬ್ರಾಹ್ಮಣ, ಶೂದ್ರರನ್ನು ಮಾತ್ರ ಈಗ ನಾವು ನೋಡುತ್ತಿದ್ದೇವೆ; ಕ್ಷತ್ರಿಯ, ವೈಶ್ಯರು ಎಲ್ಲಿ?" ಎಂದಿದ್ದಾರೆ.

ಭರತಖಂಡದಲ್ಲಿ ಮಾನವಕೋಟಿಯ ಆದರ್ಶ, ಬ್ರಾಹ್ಮಣ. ಧರ್ಮಕೋಶದ ರಕ್ಷಣೆಗಾಗಿಯೇ ಬ್ರಾಹ್ಮಣನು ಸರ್ವಪ್ರಾಣಿಗಳಲ್ಲಿ ಶ್ರೇಷ್ಠನಾಗಿ ಹುಟ್ಟಿರುತ್ತಾನೆ ಎಂದು ಮನುಮತ (I–೨೦). ಆದರೆ, "ಬ್ರಾಹ್ಮಣನಿಗೆ ಈ ಉಚ್ಚಸ್ಥಾನ ಸಲ್ಲದು; ಇತರರಿಗೆ ವಿಧಿಸಿರುವ ದೈಹಿಕ ಶಿಕ್ಷೆಗಳನ್ನು ಅವನ ಅಪರಾಧಗಳಿಗೆ ವಿಧಿಸದೆ ಇರುವುದು ಪಕ್ಷಪಾತ; ಲೋಕದಲ್ಲಿ ಎಲ್ಲರಿಗೂ ಉತ್ತಮವಾದ ವಿದ್ಯೆಯನ್ನು ಕಲಿಯಲು ಅವಕಾಶ ಕೊಡದೆ, ಬ್ರಾಹ್ಮಣನು ದ್ರೋಹಮಾಡಿದ್ದಾನೆ; ಅವನ ಅಪಚಾರಗಳನ್ನು ಅಲ್ಲಗಳೆದು, ಹಿಂದೂಡಿ, ಮಾನವರಿಗೆಲ್ಲ ಸಮಾನಸ್ಥಾನವನ್ನು ಕೊಡಿಸುವುದಕ್ಕಾಗಿಯೇ ಬುದ್ಧ, ಬಸವಣ್ಣ ಮುಂತಾದ ಸುಧಾರಕರು ಹುಟ್ಟಿಕೊಂಡರು; ಮನುಸ್ಮೃತಿಯು ಅಡಿಗಡಿಗೆ ಬ್ರಾಹ್ಮಣನ ಹಿರಿಮೆಯನ್ನು ಕೊಂಡಾಡುತ್ತಿರುವುದರಿಂದ, ಈಗಿನ

ಜನಸಾಮಾನ್ಯರಿಗೆ ಅದು ಅಗ್ರಾಹ್ಯ” ಎಂದು ಕೆಲವರು ಪ್ರಚಾರ ಮಾಡುತ್ತಿದ್ದಾರೆ.

ಈ ವಾದ ಸತ್ಯದಿಂದ ದೂರವಾದುದು. ಸರ್ವರಿಂದಲೂ ಉಪಾದೇಯ ವಾಗಿದೆ ಎಂಬ ಕಾರಣದಿಂದಲೇ ಆಶುತೋಷ ಮುಖರ್ಜಿಯವರು ಪಂಡಿತ ಗಂಗಾನಾಥ ಝಾರವರನ್ನು ಮನುಸ್ಮೃತಿಯನ್ನು ವಿಶೇಷ ಟಿಪ್ಪಣಿಗಳೊಡನೆ ಪ್ರಕಟಿಸಬೇಕೆಂದು ಪ್ರೋತ್ಸಾಹಿಸಿದರು. ಹಿಂದಿನ ಕಾಲದಲ್ಲಿ ಮನು ಆದರ್ಶ ಧರ್ಮಶಾಸ್ತ್ರವನ್ನು ಎಲ್ಲರ ಹಿತಕ್ಕಾಗಿ ಕಲ್ಪಿಸಿಕೊಟ್ಟನೆಂದು ಜನ ನಂಬಿರುವುದ ರಿಂದಲೇ ನಮ್ಮ ಸ್ವಾತಂತ್ರ್ಯ ಬಂದಮೇಲೆ ನಮ್ಮ ಶಾಸನ ನಿಯಮಾವಳಿಯ ಕರಡನ್ನು ಸಿದ್ಧಪಡಿಸಿಕೊಟ್ಟ ಅಂಬೇಡ್ಕರ್ ಎಂಬ ಅಂತ್ಯಜ ವಿದ್ವಾಂಸರನ್ನು “ಆಧುನಿಕ ಮನು” ಎಂದು ಕರೆದು ಹಿರಿಯರು ಗೌರವಿಸಿದುದು. “ಮನುರ್ವೈ ಯತ್ಕಿಂಚಿದವದತ್ತದ್ಭೇಷಜಂ ಭೇಷಜತಾಯಾಃ (ಛಾಂದೋಗ್ಯಬ್ರಾಹ್ಮಣ)” ಎಂದು ಹಿಂದಿನ ಹಿರಿಯರೂ ಸಾರಿದ್ದರು. **ಈ ಕಾಲಕ್ಕೆ ಕೆಲವು ನಿಯಮಗಳು ಅನ್ವಯಿಸುವುದಿಲ್ಲವೆಂಬ ಕಾರಣಕ್ಕಾಗಿ ಸಾವಿರಾರು ವರ್ಷಗಳ ಹಿಂದೆ ಪ್ರಚಾರದಲ್ಲಿದ್ದ ಧರ್ಮಶಾಸ್ತ್ರಗಳನ್ನು ನಿಂದಿಸಬಾರದೆಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.** (ಅವರು ಬ್ರಾಹ್ಮಣರಲ್ಲ.)

ವಾಸ್ತವವಾಗಿ ನೋಡಿದರೆ ಬ್ರಾಹ್ಮಣನು ಆದರ್ಶಪುರುಷ. ಅವನಿಗಾಗಿ ವಿಧಿಸಿರುವ ನಿಯಮಗಳನ್ನು ಪಾಲಿಸಿಕೊಳ್ಳುವುದು ಬಹುಕಷ್ಟ. ಸರ್ವಜನರ ಹಿತವನ್ನು ಕೋರುತ್ತಾ, ತಾನು ಮಾತ್ರ ಸ್ನಾನ, ಸಂಧ್ಯಾವಂದನೆ, ಜಪ, ತಪ, ಯಜನಯಾಜನಾದಿ ಷಟ್ಕರ್ಮಗಳು, ಅನೇಕ ಬಗೆಯ ವ್ರತೋಪ ವಾಸಗಳು—ಇವನ್ನು ಮಾಡಿ ತನ್ನ ದೇಹವನ್ನು ದಂಡಿಸುತ್ತಾ, ಸದಾ ಜ್ಞಾನಾರ್ಜನೆಯಲ್ಲಿ ಕಾಲ ಕಳೆದು, ತಾನು ಪಡೆದ ಜ್ಞಾನವನ್ನು ಲೋಕ ಕಲ್ಯಾಣಕ್ಕಾಗಿ ಎಲ್ಲರಿಗೂ ಪಾತ್ರವರಿತು ದಾನಮಾಡುತ್ತಾ ಮುಮುಕ್ಷು ವಾಗಿರುವ ಬ್ರಾಹ್ಮಣನು ಆದರ್ಶಪುರಷನಲ್ಲವೇ? ಇಂತಹ ಕಾರ್ಯ ಗಳಲ್ಲಿಯೇ ನಿರತರಾಗಿ, ಐಹಿಕ ಸುಖಲೋಲುಪರಾಗಿರದೆ ಕುಗ್ರಾಮ ಗಳಲ್ಲಿಯೋ ವನಾಂತರಗಳಲ್ಲಿಯೋ ವಾಸಮಾಡುತ್ತಾ, ರಾಜಾಶ್ರಯಕ್ಕೆ ಮನಸೋಲದ ಮಹನೀಯರನ್ನೇ ಋಷಿಗಳೆನ್ನುತ್ತಿದ್ದರು. ಅವರನ್ನು ಇತರ ಮೂರು ವರ್ಣದವರೂ ತಾವಾಗಿಯೇ ಗೌರವಿಸುತ್ತಿದ್ದರಲ್ಲದೆ, ತಮ್ಮನ್ನು

ಎಲ್ಲರೂ ಗೌರವಿಸಿ ದಕ್ಷಿಣೆ ಕೊಡಬೇಕೆಂದು ಆ ಬ್ರಾಹ್ಮಣರೇ ಪುಸ್ತಕಗಳನ್ನು ಬರೆದುಕೊಂಡು ಇತರರಿಗೆ ವಿಧಿಸಿದುದರಿಂದ ಅಲ್ಲವಲ್ಲ !

ಸ್ವಾಮಿ ವಿವೇಕಾನಂದರೇ ಎಪ್ಪತ್ತು ವರ್ಷಗಳಿಗೂ ಹಿಂದೆ, 'ಈಗ ಕ್ಷತ್ರಿಯರೂ ವೈಶ್ಯರೂ ಎಲ್ಲಿದ್ದಾರೆ?' ಎಂದು ಕೇಳಿದರು. ಮುಂದುವರೆದು, 'ಈಗ ಬ್ರಾಹ್ಮಣರು ಎಲ್ಲಿದ್ದಾರೆ?' ಎಂದು ಕೇಳಬಹುದಾದ ಕಾಲವೂ ಸಮೀಪಿಸುತ್ತಿದೆ. ತಮಗೆ ವಿಧಿಸಲ್ಪಟ್ಟ ಸಂಸ್ಕಾರಗಳನ್ನು ಪಡೆಯದೆ, ವಿಹಿತ ಕರ್ಮಾನುಷ್ಠಾನವನ್ನು ಮಾಡದೆ, ಜ್ಞಾನಾರ್ಜನೆಗಾಗಿಯೇ ತನುಮನ ಗಳನ್ನು ಮೀಸಲಾಗಿಡದೆ, ಲಂಚಕೋರತನ, ಕಾಳಸಂತೆ ವ್ಯಾಪಾರ, ಕೂಟ ಸಾಕ್ಷ್ಯದಿಂದ ಗಳಿಕೆ, ಗ್ರಾಮದ ಜನರಲ್ಲಿ ಜಗಳವೆಬ್ಬಿಸಿ ಅವರ ಅಜ್ಞಾನದಿಂದ ಲಾಭ ಸಂಪಾದನೆ ಮುಂತಾದುವುಗಳಲ್ಲಿಯೇ ನುರಿತು ನಿರತರಾದವರನ್ನು ಬ್ರಾಹ್ಮಣರೆಂದು ಹೇಗೆ ಕರೆಯಬಹುದು? ಈ ಗ್ರಂಥದ ಕೊನೆಯಲ್ಲಿ, "ಬ್ರಹ್ಮಚರ್ಯಾದಿ ವ್ರತಗಳನ್ನು ಬಿಟ್ಟು, ಮಂತ್ರಗಳನ್ನು ಕಲಿಯದೆ, ತಮ್ಮ ಜಾತಿಯ ಹೆಸರನ್ನು ಮಾತ್ರ ಹೇಳಿಕೊಂಡು ಜೀವಿಸುವ ಸಾವಿರಮಂದಿ ಬ್ರಾಹ್ಮಣರು ಒಂದು ಕಡೆ ಕೂಡಿದ್ದರೂ ಅದು ಸಭೆಯೆನಿಸಿಕೊಳ್ಳಲಾರದು (XII–೩೩)" ಎಂದು ಮನುಮತವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ವಾಸ್ತವವಾದ ಬ್ರಾಹ್ಮಣ್ಯಕ್ಕೆ ಈಗಲೂ ಗೌರವವಿರುವುದು ಎಲ್ಲರ ಅನುಭವ ದಲ್ಲಿಯೂ ಇದೆ.

ಈ ಸಂದರ್ಭದಲ್ಲಿ, "ಬ್ರಾಹ್ಮಣನು ತಾನು ತಿಳಿದುದನ್ನು ಎಲ್ಲರೂ ತಿಳಿಯುವುದಕ್ಕೆ ಅವಕಾಶವನ್ನು ಕೊಡದೆ, ತನ್ನ ಸ್ಥಾನವನ್ನು ಕಾಯ್ದು ಕೊಂಡಿದ್ದಾನೆ" ಎಂಬ ಆಪಾದನೆಯ ಬಗೆಗೆ ಒಂದೆರಡು ಮಾತುಗಳನ್ನು ಹೇಳಬೇಕೆನಿಸುತ್ತದೆ. ಎಲ್ಲರಿಗೂ ಎಲ್ಲ ವಿಷಯಗಳಲ್ಲಿಯೂ ಏಕರೀತಿಯಾದ ರುಚಿಯಿರುವುದಿಲ್ಲವೆಂಬುದು ನಿರ್ವಿವಾದ. ಶಾಸ್ತ್ರಗಳ ಮಾತಿರಲಿ, ಜನಪ್ರಿಯ ವಾದ ನಾಟಕಗಳನ್ನಾದರೂ ಎಲ್ಲರೂ ಓದಿ ಆನಂದಪಡಲು ಸಾಧ್ಯವೇ? ಕಿವಿಗೆ ಇಂಪಾದ ಸಂಗೀತವನ್ನು ಉಪವನಗಳಲ್ಲಿ ಧ್ವನಿವರ್ಧಕಗಳ ಮೂಲಕ ಪ್ರಸಾರಮಾಡಿದರೂ ಎಷ್ಟುಜನ ಆಸಕ್ತಿಯಿಂದ ಅದನ್ನು ಕೇಳುತ್ತಾರೆ? ಪ್ರಚಾರಕ್ಕಾಗಿ ಚಲನಚಿತ್ರಗಳ ಬಿಟ್ಟಿ ಪ್ರದರ್ಶನಗಳನ್ನು ರಸ್ತೆಯ ಮಗ್ಗುಲಲ್ಲೇ ಏರ್ಪಡಿಸಿದ್ದರೂ ಸಾವಿರಾರು ಜನರು ಉದಾಸೀನಭಾವದಿಂದ ಆ ಕಡೆಗೆ

ತಿರುಗದೆಯೇ ಮುಂದೆ ಹೋಗುವುದಿಲ್ಲವೇ ? ಅಷ್ಟೇಕೆ, ಏನನ್ನು ಬೇಕಾದರೂ ಓದಿ ಕಲಿಯಲು 'ಅಧಿಕಾರಿ'ಗಳಾದ ಬ್ರಾಹ್ಮಣರಲ್ಲಿ ಎಷ್ಟುಮಂದಿ ವ್ಯಾಕರಣ ವನ್ನು ಓದುತ್ತಾರೆ? ಅಲಂಕಾರ, ಜ್ಯೌತಿಷ, ಮೀಮಾಂಸಾ, ನಿರುಕ್ತ ಮುಂತಾದ ವಿಭಾಗಗಳಲ್ಲಿ ಪರಿಣತರಾದಂಥವರು ವಿದ್ವಾಂಸರಾದ ಬ್ರಾಹ್ಮಣ ರಲ್ಲಿ ತಾನೇ ಶೇಕಡಾ ಎಷ್ಟು ಮಂದಿ ಇದ್ದಾರೆ?

ಅವರವರ ಪ್ರಕೃತಿಗಳಿಗೆ ಅನುಸಾರವಾಗಿ ಕೆಲವರಿಗೆ ವಿದ್ಯೆಯಲ್ಲಿ ಆಸಕ್ತಿಯಿರಬಹುದು; ಕೆಲವರಿಗೆ ಪರಾಕ್ರಮ ಪ್ರದರ್ಶನದಲ್ಲಿಯೂ, ಮತ್ತೆ ಕೆಲವರಿಗೆ ಕೃಷಿ ವಾಣಿಜ್ಯಾದಿಗಳಲ್ಲಿಯೂ ವಿಶೇಷ ಆಸಕ್ತಿಯಿರಬಹುದು. ಬಡಗಿಯ ಮಗನಿಗೆ ಮನೆಯ ವಾತಾವರಣದ ಪ್ರಭಾವದಿಂದ ಕುಲಕಸುಬಿ ನಲ್ಲಿ ಚಿಕ್ಕಂದಿನಿಂದಲೇ ವಿಶೇಷಾಸಕ್ತಿಯಿರುವುದು ಪ್ರಪಂಚದ ಎಲ್ಲ ಭಾಗ ಗಳಲ್ಲಿಯೂ ಕಂಡುಬರುತ್ತದೆ. ಹೀಗೆ "ಗುಣಕರ್ಮವಿಭಾಗಶಃ" ಎಂಬಂತೆ ಯಾವುವೋ ಕಾರಣಗಳಿಂದ ಯಾವುದೋ ಅಜ್ಞಾತವಾದ ಹಿಂದಿನ ಕಾಲ ದಲ್ಲಿ, ಜನರಲ್ಲಿ ತಾನಾಗಿಯೇ ವರ್ಣವ್ಯವಸ್ಥೆ ಏರ್ಪಟ್ಟು ಸರ್ವಮಾನ್ಯವಾಗಿ ದ್ದಿರಬೇಕು. ಮೊದಮೊದಲು ಗುಣಕರ್ಮಾದಿಗಳ ವ್ಯತ್ಯಾಸಗಳಿಂದಲೂ ಮಿಶ್ರ ಸಂತಾನಗಳಿಂದಲೂ ವರ್ಣವಿಹಿತಧರ್ಮಗಳು ಅಷ್ಟು ಬಿಗಿಯಾದ ಚೌಕಟ್ಟಿನಲ್ಲಿರದೆ, ಜನರು ವರ್ಣಾಂತರಗಳನ್ನು ಆಗಾಗ ಪಡೆಯುತ್ತಿದ್ದಿರ ಬೇಕು. ಅನೇಕ ಕ್ಷತ್ರಿಯರು ಸುಲಭವಾಗಿ ಬ್ರಾಹ್ಮಣರಾದುದರ ಉಲ್ಲೇಖ ಪುರಾಣಗಳಲ್ಲಿದೆ. ಇದಕ್ಕಾಗಿಯೇ "ಮನುವೂ ಬ್ರಾಹ್ಮಣನು ತನ್ನ ಕರ್ಮ ಗಳಿಂದ ಶೂದ್ರತ್ವವನ್ನು ಹೊಂದಬಹುದು; ಶೂದ್ರನೂ ಬ್ರಾಹ್ಮಣ್ಯವನ್ನು ಪಡೆಯುಬಹುದು (X–೧೫)" ಎಂದು ಹೇಳಿದ್ದಾನೆ. ಆದರೆ ಕಾರಣಾಂತರ ಗಳಿಂದ ವರ್ಣಗಳು ಆನುವಂಶಿಕಗಳಾಗಿ, ಆಯಾ ವರ್ಣಗಳ ಹಿರಿಯರು ತಮ್ಮ ವರ್ಣಸಂತಾನಗಳ ಶುದ್ಧಿಯನ್ನು ಅಪೇಕ್ಷಿಸಿ, ಸಾಂಕರ್ಯವನ್ನು ದೂರೀಕರಿಸುವುದಕ್ಕಾಗಿ ನಿಯಮಗಳನ್ನು ಬಿಗಿಮಾಡಿಕೊಂಡಿರಬೇಕು. ಮ್ಲೇಚ್ಛರಾದ ಯವನ, ಪಾರಸೀಕ, ಹೂಣ, ಶಕರು ಹಿಂದೂಸ್ಥಾನಕ್ಕೆ ನುಗ್ಗಿಬಂದು ಇಲ್ಲಿಯೇ ನೆಲೆಸಿ, ಇಲ್ಲಿನ ಜನರೊಡನೆ ವಿವಾಹ ಸಂಪರ್ಕವನ್ನೂ ಬೆಳೆಸಿಕೊಂಡು, ಕ್ರಿಸ್ತಪೂರ್ವ ಶತಮಾನಗಳಲ್ಲಿಯೇ ಹಿಂದೂಗಳಲ್ಲಿ ಬೆರೆತು ಹೋಗುತ್ತಿದ್ದುದರಿಂದ, ಮೇಲಿನ ಮೂರು ವರ್ಣದವರನ್ನು ಶುದ್ಧರಾಗಿರಿಸಲು

ಪ್ರಯತ್ನ ನಡೆದು, ಅವರಿಗೆ ಮಾತ್ರ ದ್ವಿಜತ್ವವನ್ನು ಒದಗಿಸಿ, ಉಳಿದವರನ್ನೆಲ್ಲ ದಸ್ಯುಗಳು, ದಾಸರು, ಶೂದ್ರರು ಎಂದು ಕರೆದು ಅವರಿಗೆ ವೇದ ಮಂತ್ರಗಳನ್ನು ಹೇಳಿಕೊಡದೆ ಅವರನ್ನು ಕೀಳೆಂದು ಭಾವಿಸಲಾಯಿತು.

ಜ್ಞಾನಕರ್ಮಗಳಿಗೆ 'ಅಧಿಕಾರಿ'ಗಳನ್ನು ವಿಂಗಡಿಸಿದುದು ತಪ್ಪೆಂದು ಭಾವಿಸುವುದಾದರೆ, ಆ ಅಧಿಕಾರವನ್ನು ನಿರಾಕರಿಸಿದ ಬೌದ್ಧರ ಗತಿ ಏನಾಯಿತು? ಅವರಿಗೆ ವೇದಶಾಸ್ತ್ರಗಳ ನೆಲೆಯಿರಲಿಲ್ಲ. ಬುದ್ಧನು ಆದರ್ಶ ಪುರುಷನಾಗಿದ್ದುದು ಸತ್ಯ; ಅದಕ್ಕಾಗಿಯೇ ಬ್ರಾಹ್ಮಣರೂ ಅವನನ್ನು ವಿಷ್ಣುವಿನ ಅವತಾರವೆಂದು ಒಪ್ಪಿಕೊಂಡರು. ಆದರೆ ಪಾತ್ರಾಪಾತ್ರ ವಿಚಾರ ಮಾಡದೆ ಅವನ ತತ್ತ್ವಗಳನ್ನು ಬರ್ಬರ, ಹೂಣ, ಶಕಾದಿ ರೂಕ್ಷ ಜನರಿಗೆ ಬೋಧಿಸಿದುದರ ಪರಿಣಾಮವಾಗಿ, ಬುದ್ಧನ ನಾನಾ ಬಗೆಯ ಅನುಯಾಯಿಗಳಲ್ಲಿ ಅನೈಕ್ಯತೆ, ಅನಾಚಾರಗಳು ತಲೆದೋರಿ, ಗೆದ್ದಲುಹುಳುಗಳಂತೆ ಅವು ಆ ಧರ್ಮವನ್ನೇ ಕೊರೆದು ಉರುಳಿಸಿಬಿಟ್ಟವು. ಅದಕ್ಕೆ ಭಾರತಭೂಮಿಯಲ್ಲಿ ನೆಲೆಯೇ ಇಲ್ಲವಾಯಿತು. ಅದಕ್ಕಾಗಿಯೇ ಮನುವು ಧರ್ಮಕ್ಕೆ ವೇದವೇ ಮೂಲವೆಂದೂ ಧರ್ಮಮೂಲವಲ್ಲದ ಸ್ಮೃತಿಶಾಸ್ತ್ರಗಳು ಹುಟ್ಟಿಕೊಂಡರೆ ಅವು ಸತ್ತುಹೋಗುವುವೆಂದೂ ಹೇಳಿದನು (XII–೩೫, ೩೬).

ಈಗಿನ ವಿದ್ಯಾಭ್ಯಾಸದಲ್ಲಿಯೂ ವಿಶ್ವವಿದ್ಯಾನಿಲಯಗಳ ಹೊಸ್ತಿಲನ್ನು ವಿದ್ಯಾರ್ಥಿಯಾಗಿ ಮೆಟ್ಟಬೇಕಾದವನಿಗೆ 'ಅಧಿಕಾರ'ವಿರಬೇಕು. ಅವನು ಹಿಂದಿನ ಪರೀಕ್ಷೆಯಲ್ಲಿ ಇಷ್ಟಕ್ಕೆ ಕಡಿಮೆಯಿಲ್ಲದೆಯೇ ಗುಣಾಂಕಗಳನ್ನು ಪಡೆದಿರಬೇಕೆಂಬ ನಿರ್ಬಂಧವಿದೆ. ಅಷ್ಟೇಕೆ, ವಿದ್ಯಾರ್ಥಿಯು ಪದವೀಧರನಾದ ಮೇಲೆಯೂ ಅವನ ನಡವಳಿಕೆಯು ವಿಶ್ವವಿದ್ಯಾನಿಲಯಗಳಲ್ಲಿ ಕಲಿತವನಿಗಿರಬೇಕಾದ ರೀತಿನೀತಿಗಳಿಗೆ ವಿರುದ್ಧವಾಗಿದ್ದರೆ, ಅವನ ಪದವಿಯನ್ನು ರದ್ದುಗೊಳಿಸಲೂ (ಅವನಿಗೆ ಬಹಿಷ್ಕಾರ ಹಾಕಲೂ) ಅವಕಾಶವುಂಟು. ಸಂಗೀತ ವಿದ್ವಾಂಸನಾಗಲಿ, ವರ್ಣಕಲಾನಿಪುಣನಾದ ಚಿತ್ರಗಾರನಾಗಲಿ, ತನ್ನ ಶಿಷ್ಯರನ್ನು ಆರಿಸಿಕೊಳ್ಳುವುದರಲ್ಲಿ ತನ್ನದೇ ಆದ ನಿಯಮಗಳನ್ನು ಇಟ್ಟುಕೊಂಡಿರುತ್ತಾನೆ. ಏಕೆಂದರೆ, ವಿದ್ಯೆಯನ್ನು ಎಲ್ಲರಿಗೂ ಕಲಿಸುವುದು ಸಾಧ್ಯವಿಲ್ಲ. ಗುರುಶಿಷ್ಯರ ಭಾವನೆ ಪವಿತ್ರವಾದುದು; ಆದುದರಿಂದಲೇ ನಮ್ಮ ದೇಶದಲ್ಲಿ ಗುರುವನ್ನು ತಂದೆಯಂತೆಯೇ ಭಾವಿಸಿ ಗೌರವಿಸುವ ಆಚಾರವಿದೆ.

ಈಗಿನ ಕಾಲದಲ್ಲಿ ವಿಶೇಷ ಪ್ರಸಿದ್ಧವೂ ಪ್ರಜಾಹಿತವೂ ಆದ ಸಂಶೋಧನೆಗಳನ್ನು ಮಾಡುವ ವಿಜ್ಞಾನಿಗಳಿಗೂ, ಜನಸಾಮಾನ್ಯರ ಅಂತಃಕರಣವನ್ನು ಹೊಗಬಲ್ಲ ಸಂದೇಶವನ್ನು ಕೊಡಬಲ್ಲ ವರಕವಿಗಳಿಗೂ, ಗಾಯನ ನರ್ತನಾದಿ ಕಲೆಗಳಿಂದ ಲಕ್ಷೋಪಲಕ್ಷ ಪ್ರತ್ಯಕ್ಷಪರೋಕ್ಷ ಭಾವಜೀವಿಗಳಿಗೆ ಆನಂದವನ್ನು ಕೊಡುವ ಕಲಾವಿದರಿಗೂ ರಾಷ್ಟ್ರಪ್ರಶಸ್ತಿ, ಮಾಸಾಶನವೇತನ ಮುಂತಾದ ಸನ್ಮಾನಗಳನ್ನು ಮಾಡುತ್ತಿಲ್ಲವೇ ? ಇಂತಹ ಗೌರವವನ್ನು ಪ್ರಜಾನಾಯಕರಾದ ಕ್ಷತ್ರಿಯ ವೀರರಿಂದ ಹಿಂದೆ ಪಡೆದವರು ಬ್ರಾಹ್ಮಣರು. ಆದಕ್ಕಾಗಿ ಅವರ ಸಂತತಿಯವರನ್ನು ಇಂದು ದೂಷಿಸುವುದೂ ದ್ವೇಷಿಸುವುದೂ ಅಯುಕ್ತವಾದುದು. ಅಳಿದುಹೋಗುತ್ತಿರುವ ಬ್ರಾಹ್ಮಣ ಸಂಸ್ಕೃತಿಯಲ್ಲಿ ಅಲ್ಲಲ್ಲಿ ಅಪೂರ್ವವಾಗಿ ಕಾಣಬರುವ ಪ್ರತಿನಿಧಿಗಳನ್ನು ಗೌರವಿಸಿ, ಅವರ ಸಂಸ್ಕೃತಿಯು ಮತ್ತೆ ಪ್ರಬುದ್ಧಮಾನವಾಗುವಂತೆ ಮಾಡ ಬೇಕಾದುದು ಎಲ್ಲರ ಕರ್ತವ್ಯ. ರಾಜ್ಯದಲ್ಲಿ ಹುಲಿ, ಸಿಂಹ ಮುಂತಾದ ವನ್ಯಪ್ರಾಣಿಗಳನ್ನು ಗೊತ್ತುಗುರಿಯಿಲ್ಲದೆ ಬೇಟೆಯಾಡಿ ಕೊಲ್ಲುತ್ತಿರುವಾಗ, ಅವು ಇಲ್ಲಿ ನಿರ್ನಾಮವಾಗುವ ಪರಿಸ್ಥಿತಿಯೊದಗಿದೆ ಎಂದು ವಿಜ್ಞಾನಿಗಳು ಮರುಗುತ್ತಿದ್ದಾರೆ. ಇಂತಹ ಸನ್ನಿವೇಶದಲ್ಲಿ ಬ್ರಾಹ್ಮಣರನ್ನು ವೈಯಕ್ತಿಕ ವಾಗಿಯಾಗಲಿ ಸಾಮೂಹಿಕವಾಗಿಯಾಗಲಿ ನಿಂದಿಸುತ್ತಾ ಅವರನ್ನು ನಿಶ್ಶೇಷ ರಾಗುವಂತೆ ಮಾಡದೆ, ಅವರು ದೇಶಕ್ಕೆ ಕೊಟ್ಟಿರುವ ನಿಧಿಗಳನ್ನು ಕಾಪಾಡಿ ಕೊಂಡು ಮುಂದೆ ಸಾಗುವುದು ಮುಂದಾಳುಗಳ ಕರ್ತವ್ಯ. ಈ ದೃಷ್ಟಿಯಿಂದ ಮನುಸ್ಮೃತಿಯು ಸರ್ವೋಪಾದೇಯವಾದುದೇ ಹೊರತು ಹೇಯವಲ್ಲ.

ಹಲವು ಲೋಕಾಚಾರಗಳು ನಮ್ಮಲ್ಲಿವೆ. ಇಷ್ಟು ದೊಡ್ಡ ದೇಶದಲ್ಲಿ ಉತ್ತರ ಭಾಗದಲ್ಲಿರುವವರು ತಿನ್ನುವ ಆಹಾರ, ಧರಿಸುವ ಉಡುಪುಗಳೇ ಬೇರೆ ; ದಕ್ಷಿಣ ಭಾಗದ ಜನರ ಆಹಾರ, ಉಡುಪುಗಳೇ ಬೇರೆ. ಇದಕ್ಕಾಗಿ ಕಚ್ಚಾಡಬೇಕಾಗಿಲ್ಲ. ಬ್ರಾಹ್ಮಣರಲ್ಲಿ ಶಾಕಾಹಾರಿಗಳೂ ಇದ್ದಾರೆ, ಮತ್ಸ್ಯ ಮಾಂಸಗಳನ್ನು ತಿನ್ನುವವರೂ ಇದ್ದಾರೆ ; ಸೋದರಮಾವನ ಮಗಳನ್ನು ಮದುವೆಯಾಗುವುದು ನಿಷಿದ್ಧವೆನ್ನುವವರೂ ಇದ್ದಾರೆ, ಅಂತಹ ಮದುವೆ ನಮ್ಮ ಜನ್ಮಸಿದ್ಧ ಹಕ್ಕು ಎನ್ನುವವರೂ ಇದ್ದಾರೆ. ಹೀಗೆಯೇ ಈ ದೇಶದಲ್ಲಿ ಸಂಸ್ಕೃತ, ಪ್ರಾಕೃತ, ದ್ರಾವಿಡಗಳ ಮಿಶ್ರಣ, ಅಪಭ್ರಂಶ ಮುಂತಾದ ಕಾರಣ

ಗಳಿಂದ ಬೇರೆ ಬೇರೆ ಮಾತುಗಳನ್ನು ಆಡುವವರೂ ಇದ್ದಾರೆ. ಇವರೆಲ್ಲ ಪರಸ್ಪರ ದ್ವೇಷವನ್ನು ಮಾಡಬೇಕಾಗಿಲ್ಲ. ಈ ಎಲ್ಲ ಹಿಂದೂ ಜನರಿಗೂ ಮನುಸ್ಮೃತಿಯು ಒಪ್ಪಿತವಾದ ಧರ್ಮಶಾಸ್ತ್ರಗ್ರಂಥ. ಕಾಲದೇಶಗಳಿಗೆ ಅನುಗುಣವಾಗಿ ಅವರವರಿಗೆ ಸಾಧ್ಯವಾದಷ್ಟು ಉತ್ತಮ ಕರ್ಮಗಳನ್ನು ಮಾಡುತ್ತಾ ಒಗ್ಗಟ್ಟಿನಿಂದ ಬಾಳಿ, ದೇಶವನ್ನು ಉನ್ನತಸ್ಥಿತಿಗೆ ತರಲು ಎಲ್ಲರೂ ಪ್ರಯತ್ನಪಡಬೇಕು. ಇದನ್ನೇ "ಸಹ ನಾವವತು, ಸಹ ನೌ ಭುನಕ್ತು, ಸಹ ವೀರ್ಯಂ ಕರವಾವಹೈ, ತೇಜಸ್ವಿನಾವಧೀತಮಸ್ತು, ಮಾ ವಿದ್ವಿಷಾವಹೈ", "ಸಂಗಚ್ಛಧ್ವಂ ಸಂವದಧ್ವಂ ಸಂ ವೋ ಮನಾಂಸಿ ಜಾನತಾಮ್" ಎಂದು ಮುಂತಾಗಿ ಸರ್ವರ ಹಿತವನ್ನೂ ಐಕ್ಯವನ್ನೂ ಬಯಸುವ ವೇದವಾಕ್ಯಗಳು ತಿಳಿಸುವುವು.

ಈ ಪುಸ್ತಕವನ್ನು ಬರೆಯಲು ನನ್ನನ್ನು ಪ್ರೋತ್ಸಾಹಿಸಿದುದಲ್ಲದೆ ಇದರ ಸುಂದರವಾದ ಮುದ್ರಣ, ಪ್ರಕಟನದ ಶ್ರಮವನ್ನೆಲ್ಲ ಉತ್ಸಾಹದಿಂದ ವಹಿಸಿರುವ ಪ್ರಭಾ ಮುದ್ರಣಾಲಯದ ಒಡೆಯರಾದ ನನ್ನ ತರುಣಮಿತ್ರ ಶ್ರೀಮಾನ್ ಡಿ. ಎಸ್. ಕೃಷ್ಣಾಚಾರ್ಯ, ಎಂ.ಎಸ್‌ಸಿ. ಯವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕ್ಷಾಮ್ಯಂತು ಕೃಪಯಾ ಸಂತೋ ಯದತ್ರ ಸ್ಖಲಿತಂ ಮಯಾ ।
ಬಾಲಃ ಪ್ರೋತ್ಸಹಮಾನೋಽಪಿ ಸ್ಖಲನ್ನೇವ ಹಿ ಗಚ್ಛತಿ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಧಾರವಾಡ
ಮೇ 1968

ಎನ್. ಕೆ. ನರಸಿಂಹಮೂರ್ತಿ

# ಎರಡನೆಯ ಮುದ್ರಣ

ಉತ್ತಮ ವಿಮರ್ಶೆಗಳನ್ನು ಪಡೆದ ಈ ಗ್ರಂಥದ ಮೊದಲನೆಯ ಮುದ್ರಣದ ಪ್ರತಿಗಳು ಕೆಲವು ವರ್ಷಗಳ ಹಿಂದೆಯೇ ಮುಗಿದುಹೋದರೂ ಕಾಗದದ ಬೆಲೆ, ಮುದ್ರಣದ ವೆಚ್ಚಗಳನ್ನು ಗಮನಿಸಿ ಎರಡನೆಯ ಮುದ್ರಣ ವನ್ನು ಇದುವರೆಗೆ ಮುಂದೂಡಲಾಯಿತು. ಆದರೆ ಇದಕ್ಕಾಗಿ ಬರುತ್ತಿದ್ದ ಬೇಡಿಕೆಗಳನ್ನು ಮನ್ನಿಸಿ ಈಗ ಹೊಸ ಆವೃತ್ತಿಯನ್ನು ಕೈಗೊಳ್ಳಲಾಗಿದೆ.

ಈಗ ಗ್ರಂಥವಿಸ್ತಾರವನ್ನು ವಿಶೇಷವಾಗಿ ಮಾಡದೆ ಉಪಯುಕ್ತವಾದ ಮತ್ತೆ ಕೆಲವು ವಿಷಯಗಳನ್ನೂ ಅಲ್ಲಲ್ಲಿ ಯಾಜ್ಞವಲ್ಕ್ಯ ಹಾಗೂ ಕೌಟಿಲ್ಯರ ಮತಗಳನ್ನೂ ಸೇರಿಸಿದ್ದೇನೆ. 'ಮನುಸ್ಮೃತಿಯ ಪ್ರತಿಗಳನ್ನು ಸುಡುತ್ತೇವೆ' ಎಂದು ಪಣತೊಟ್ಟವರು ಇತ್ತೀಚೆಗೆ ತಲೆದೋರುತ್ತಿದ್ದಾರೆ. ಅವರೆಲ್ಲ 'ಈಗಿನ ಕಾಲಕ್ಕೆ ಪೂರ್ಣವಾಗಿ ಅನ್ವಯಿಸದಿರುವ ವಿಷಯಗಳನ್ನು ಈ ಸ್ಮೃತಿ ಒಳ ಗೊಂಡಿದೆ' ಎಂಬ ಕಾರಣದಿಂದಲೇ ಉದ್ವಿಗ್ನರಾಗಿದ್ದಾರೆ. ಸಾರ್ವಕಾಲಿಕ ಹಾಗು ಸಾರ್ವದೇಶಿಕ ನೀತಿನಿಯಮಗಳನ್ನು ವಿಶೇಷವಾಗಿ ಈ ಗ್ರಂಥ ಬೋಧಿಸುತ್ತಿದೆಯೆಂಬುದನ್ನು ಅವರು ಪ್ರಯತ್ನಪೂರ್ವಕವಾಗಿ ಮರೆತಿದ್ದಾರೆ. ನಮ್ಮ ತಂದೆ ಮೃತನಾದಮೇಲೆ ಆತನ ಎಲ್ಲ ಬಟ್ಟೆಗಳನ್ನೂ ಉಡುತ್ತಾ ನಾವು ತಿರುಗುತ್ತಿರಬೇಕೆಂದಲ್ಲ; ಆದರೆ ಆತ ಉಪಯೋಗಿಸಿದ ಶಾಲು ಹೊಚ್ಚಹೊಸ ದಾಗಿದ್ದು, ಸುಂದರವಾಗಿದ್ದು, ಪ್ರಯೋಜನ ಉಳ್ಳದುದೂ ಆಗಿದ್ದರೆ ಅದನ್ನೂ ಆತನ ಮೃತದೇಹದೊಂದಿಗೆ ಸುಡಬಹುದೇ ? ಅದರ ಮೇಲಿನ ಧೂಳು ಕೊಡವಿ ಅದನ್ನು ನಮ್ಮ ಹಿತಕ್ಕಾಗಿ ಬಳಸಿಕೊಳ್ಳಬಾರದೇ ?

ಭಾರತದ ಹಿರಿಮೆಯನ್ನು ನಾನಾ ದೇಶದ ಜನರು ಶತಮಾನಗಳಿಂದ ಹೊಗಳುತ್ತಾ ಬಂದಿದ್ದಾರೆ. ನಮ್ಮ ರೂಪ, ದೇಹದಾರ್ಢ್ಯ, ಯುದ್ಧಕೌಶಲ, ಮುಂತಾದುವುಗಳಿಗಾಗಿಯೇ ಎಲ್ಲರೂ ನಮ್ಮ ಪ್ರಶಂಸೆ ಮಾಡಿಲ್ಲ. ನಮ್ಮ ಪ್ರಾಚೀನ ಸಂಸ್ಕೃತಿ ಉತ್ತಮವಾಗಿದ್ದಿತೆಂದು ಇತರರು ಅದನ್ನು ಆದರಿಸಿದರು, ಅನುಕರಿಸಿದರು. ಇಂದಿಗೂ ಪ್ರಾಚೀನ ಭಾರತೀಯ ಸಂಸ್ಕೃತಿಯ ಅವಶೇಷ ಗಳನ್ನು ಯವದ್ವೀಪಗಳಿಂದ ಮಧ್ಯಪ್ರಾಚ್ಯ ಏಷ್ಯಾದೇಶಗಳವರೆಗೆ ಉಳಿಸಿ ಕೊಂಡಿರುವುದನ್ನು ನೋಡಿ ನಾವು ಹೆಮ್ಮೆಪಡಬಹುದು.

ಸಾವಿರಾರು ವರ್ಷಗಳ ವಿಧರ್ಮೀಯರ ಆಡಳಿತದಿಂದ ಕಳೆಗುಂದದೆ ವಿರಾಜಮಾನವಾಗಿದ್ದ ನಮ್ಮ ಸಂಸ್ಕೃತಿ ನಮಗೆ ಸ್ವರಾಜ್ಯ ದೊರೆತಿರುವ ಇತ್ತೀಚಿನ ಮೂರು ದಶಕಗಳೊಳಗೇ ನಷ್ಟವಾಗುತ್ತಿರುವುದು ಶೋಚನೀಯ. 'ಆಚಾರದಿಂದ ಆಯುಸ್ಸು ಹೆಚ್ಚುವುದು, ಉತ್ತಮ ಸಂತಾನ ಹುಟ್ಟುವುದು, ದೇಹದ ಅಲಕ್ಷಣಗಳು ದೂರವಾಗುವುವು' ಎಂದು ಹೇಳಿದ ಮನು ಈಗ ಅನಾದರಕ್ಕೆ ಪಾತ್ರನಾಗಿದ್ದಾನೆ. ಅವೇಳೆಯಲ್ಲಿ, ಅನಿಯತವಾಗಿ ಅಭಕ್ಷ್ಯ ಭಕ್ಷಣ ಮಾಡಿ ಆರೋಗ್ಯವನ್ನು ಕಳೆದುಕೊಂಡು ಆಸ್ಪತ್ರೆಗಳಿಗೆ ಯಾತ್ರೆ ಮಾಡುತ್ತಿರುವ ಅನಾಚಾರಿಗಳು ನಮ್ಮ ಕಣ್ಣಿಗೆ ಬೀಳುವುದೇ ಇಲ್ಲವೇ ?

ಒಂದು ಕಾಲದ ನೀತಿ ಸಾವಿರಾರು ವರ್ಷ ಕಳೆದಮೇಲೆ ಸಲ್ಲುವುದಿಲ್ಲ ವೆಂಬ ಕಾರಣಕ್ಕಾಗಿ, ಮೊದಲು ನೀತಿ ಹೇಳಿದವನನ್ನು ಈಗ ನಿಂದಿಸುವುದು ನ್ಯಾಯವೇ ? ಹಿಂದೆ ಗ್ರಂಥಗಳನ್ನು ರಚಿಸಿದವರು ಬ್ರಾಹ್ಮಣರೆಂಬ ಕಾರಣದಿಂದ ಇಂದಿನ ಪ್ರತಿಯೊಬ್ಬ ಬ್ರಾಹ್ಮಣನನ್ನೂ ಬಹಿಷ್ಕರಿಸಿ ಅವನ ಹಿತವಾದವನ್ನು ಅಲ್ಲಗಳೆಯುವುದು ಸಮಾಜಕ್ಕೆ ಅನುಕೂಲವೇ ? ಈಗ ಹೊಸ ನೀತಿ ಹುಟ್ಟಿರುವುದಕ್ಕೂ ಕೆಲವು ಬ್ರಾಹ್ಮಣರು ಕಾರಣರಾಗಿರಬಹುದಲ್ಲವೇ ? ಬ್ರಾಹ್ಮಣಧರ್ಮಗಳೆನಿಸಿಕೊಂಡಿರುವ ಯಜ್ಞ, ದಾನ, ತಪಸ್ಸು, ವೇದಾಧ್ಯಯನಗಳಲ್ಲಿ ಒಂದನ್ನಾದರೂ ಅನುಷ್ಠಾನದಲ್ಲಿ ಇಟ್ಟುಕೊಂಡಿರುವವರು (ಈಗಿನ ಬ್ರಾಹ್ಮಣರಲ್ಲಿ) ಲಕ್ಷಕ್ಕೊಬ್ಬನಾದರೂ ಇದ್ದಾನೆಯೇ ?

ಹಿಂದಿನ ಸಂಸ್ಕೃತಿಯ ತಿರುಳನ್ನು ಗಮನಿಸಿ, ಕೊಳೆಯನ್ನು ರಘಾಡಿಸಿ ಒರೆಸಿ ಕಳೆದು, ನಮ್ಮ ಜೀವನವನ್ನು ಹದಗೊಳಿಸಿಕೊಳ್ಳಬೇಕಾದುದು ನಮ್ಮ ಕರ್ತವ್ಯ. ನಾವೆಲ್ಲ ಉತ್ತಮ ಮಟ್ಟಕ್ಕೆ ಏರಬೇಕೇ ಹೊರತು ಸ್ಪರ್ಧೆಯಿಂದ ದುರಾಚಾರವನ್ನು ಕೈಗೊಂಡು ಹೀನಸ್ಥಿತಿಗೆ ಇಳಿಯಬಾರದು.

ಬ್ರಾಹ್ಮಣ್ಯ ಶ್ರೇಷ್ಠವೆಂದು ಅರಿತ ವಿಶ್ವಾಮಿತ್ರ ಅತಿ ಸಾಹಸದಿಂದ ಬ್ರಹ್ಮರ್ಷಿಯಾದನು. ಧರ್ಮದ ಹಿನ್ನೆಲೆಯನ್ನು ಚೆನ್ನಾಗಿ ಅರಿತು ನಿರ್ಭಯವಾಗಿ ಸಭೆಯಲ್ಲಿ ನೀತಿಯನ್ನು ಸಾರುತ್ತಿದ್ದ ವಿದುರನ ಮಾತಿಗೆ ಬ್ರಾಹ್ಮಣರಾದ ದ್ರೋಣಾದಿಗಳೂ, ಕ್ಷತ್ರಿಯರಾದ ಭೀಷ್ಮಾದಿಗಳೂ ಮನ್ನಣೆ ಕೊಟ್ಟರು.

ತನ್ನ ತಂದೆ ಯಾರೆಂದು ನಿರ್ಧರಿಸಲಾಗದಿದ್ದ ಬಾಲಕನು ಸತ್ಯವನ್ನೇ ಪುನಃ ಪುನಃ ಹೇಳಿದುದರಿಂದ ತಾಯಿಯ ಹೆಸರನ್ನು ಅನುಸರಿಸಿ ಅವನಿಗೆ

'ಸತ್ಯಕಾಮ ಜಾಬಾಲ'ನೆಂದೇ ಹೆಸರಿಟ್ಟು, ಅವನನ್ನು ಬ್ರಾಹ್ಮಣನೆಂದು ಭಾವಿಸಿ ಆಚಾರ್ಯ ಗೌತಮನು ವೇದವಿದ್ಯೆಯನ್ನು ಕಲಿಸಿದನು. ತನ್ನ ದುರಾಚಾರ, ದುಷ್ಟವಿವಾಹಗಳಿಂದ ಬ್ರಾಹ್ಮಣನು ಶೂದ್ರನಾಗಬಹುದೆಂದೂ, ಅದಕ್ಕೆ ವಿರುದ್ಧವಾಗಿ ಸದಾಚಾರ, ಸತ್ಸಂಪರ್ಕಗಳನ್ನು ಪಡೆದ ಶೂದ್ರನೂ ಬ್ರಾಹ್ಮಣನಾಗಬಹುದೆಂದೂ ಮನುವೇ ಹೇಳಿದ್ದಾನೆ. ಇದರಿಂದ ಈ ಗ್ರಂಥ ಯಾರಿಗಾದರೂ ಮೋಸಮಾಡಲು ಬರೆದುದಲ್ಲ. ಸರ್ವಜನರ ಹಿತಕ್ಕಾಗಿ—ಸರ್ವೋದಯಕ್ಕಾಗಿಯೇ—ಬರೆಯಲ್ಪಟ್ಟಿದೆ, ಎಂದು ನಿರ್ಧರಿಸಬಹುದು.

ಬೆಂಗಳೂರು
ಮೇ 1975

**ಎನ್. ಕೆ. ನರಸಿಂಹಮೂರ್ತಿ**

# ವಿಷಯಸೂಚೀ



ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾ
ಗ್ರಂಥಿಭ್ಯೋ ಧಾರಿಣೋ ವರಾಃ ।
ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾ
ಜ್ಞಾನಿಭ್ಯೋ ವ್ಯವಸಾಯಿನಃ ॥

XII–103

(ಧರ್ಮದ) ವಿಷಯವನ್ನು ಸ್ವಲ್ಪಮಾತ್ರ ತಿಳಿದವರಿಗಿಂತ ಗ್ರಂಥವನ್ನು ಓದಿಕೊಂಡವರು ಉತ್ತಮರು; ಗ್ರಂಥವನ್ನು (ಬರೇ) ಓದಿ ಮರೆತವರಿಗಿಂತ, ಅರ್ಥವನ್ನು ತಿಳಿದುಕೊಳ್ಳುವವರು ಮೇಲು; ಬರೇ ಅರ್ಥವನ್ನು ತಿಳಿದವರಿಗಿಂತ (ಯಥಾರ್ಥ) ಜ್ಞಾನವನ್ನು ಪಡೆದವರು ಮೇಲು; ಜ್ಞಾನವನ್ನು ಮಾತ್ರವೇ ಹೊಂದಿರುವವರಿಗಿಂತ (ಧರ್ಮವನ್ನು) ಆಚರಿಸುವವರು ಉತ್ತಮರು.

ಶ್ರೀ ಗುರುಭ್ಯೋ ನಮಃ

# ಮನುಸ್ಮೃತಿಸಾರ

## I ಅಧ್ಯಾಯ

## ಪ್ರಜಾಸೃಷ್ಟಿ

**ಮನುಮೇಕಾಗ್ರಮಾಸೀನಮಭಿಗಮ್ಯ ಮಹರ್ಷಯಃ ।**
**ಪ್ರತಿಪೂಜ್ಯ ಯಥಾನ್ಯಾಯಮಿದಂ ವಚನಮಬ್ರುವನ್ ॥ ೧**

ವಿಷಯಾಂತರಗಳಲ್ಲಿ ಆಸಕ್ತಿಹೊಂದದೆ ಏಕಾಗ್ರಚಿತ್ತನಾಗಿ ಕುಳಿತಿದ್ದ ಮನುವನ್ನು ಸಮೀಪಿಸಿ, ಆತನನ್ನು ಅಭಿವಂದಿಸಿ, ಪ್ರಶ್ನೆಯನ್ನು ಕೇಳುವ ಯುಕ್ತರೀತಿಯನ್ನು ಅನುಸರಿಸಿ, ಮಹರ್ಷಿಗಳು ಮುಂದೆ ಹೇಳುವಂತೆ ಮಾತನಾಡಿದರು.

('ನಾಪೃಷ್ಟಃ ಕಸ್ಯಚಿದ್ಬ್ರೂಯಾತ್ ನ ಚಾನ್ಯಾಯೇನ ಪೃಚ್ಛತಃ' ಎಂದರೆ, 'ತಾನಾಗಿ ಪ್ರಶ್ನೆ ಕೇಳದ ಯಾರಿಗೂ ಹೇಳಬಾರದು; ನ್ಯಾಯರೀತಿಯನ್ನು ಬಿಟ್ಟು ಕೇಳುವವನಿಗೂ ಹೇಳಬಾರದು' ಎಂಬ ನಿಯಮವನ್ನು ಅನುಸರಿಸಿ, ಮಹರ್ಷಿಗಳು ಮನುವನ್ನು ಕುರಿತು ಪ್ರಶ್ನೆಮಾಡಿದರು.)

**ಭಗವನ್ ಸರ್ವವರ್ಣಾನಾಂ ಯಥಾವದನುಪೂರ್ವಶಃ ।**
**ಅಂತರಪ್ರಭವಾಣಾಂ ಚ ಧರ್ಮಾನ್ನೋ ವಕ್ತುಮರ್ಹಸಿ ॥ ೨**

ಪೂಜ್ಯರೇ! ನಾಲ್ಕು ವರ್ಣದ ಜನರಿಗೂ ಮತ್ತು ಆ ವರ್ಣಗಳ ಸಂಪರ್ಕಗಳಿಂದ ಹುಟ್ಟಿದ ಮಿಶ್ರಜಾತಿಯವರಿಗೂ ಅನ್ವಯಿಸುವಂತಹ (ಜಾತಕರ್ಮ, ನಾಮಕರಣ ಮುಂತಾದ ಸಂಸ್ಕಾರಗಳನ್ನೊಳಗೊಂಡ) ಧರ್ಮಗಳನ್ನು ಕ್ರಮವಾಗಿ ನಮಗೆ ತಿಳಿಸಿ.

(ಇಲ್ಲಿ ತಿಳಿಸುವ ಧರ್ಮಗಳು ಬ್ರಾಹ್ಮಣಾದಿ ಶುದ್ಧವರ್ಣದವರಿಗೂ, ಸೂತ, ಅಂಬಷ್ಠಾದಿ ಅವಾಂತರ ಮಿಶ್ರಜಾತಿಯವರಿಗೂ ಅನ್ವಯಿಸುವಂತೆ ಇರುವುವು ಎಂದು ಅಭಿಪ್ರಾಯ.)

**ಸ ತೈಃ ಪೃಷ್ಟಸ್ತಥಾ ಸಮ್ಯಗಮಿತೌಜಾ ಮಹಾತ್ಮಭಿಃ ।**
**ಪ್ರತ್ಯುವಾಚಾರ್ಚ್ಯ ತಾನ್ಸರ್ವಾನ್ ಮಹರ್ಷೀನ್ ಶ್ರೂಯತಾಮಿತಿ ॥**

ಮಹಾತ್ಮರಾದ ಋಷಿಗಳಿಂದ ಹಾಗೆ ಕೇಳಲ್ಪಟ್ಟು, ಅಪರಿಮಿತವಾದ ಸಾಮರ್ಥ್ಯವುಳ್ಳ ಮನು ಅವರನ್ನೆಲ್ಲ ಗೌರವಿಸಿ, "ಋಷಿಗಳೇ, ಕೇಳಿರಿ" ಎಂದು (ಮುಂದೆ ಹೇಳುವಂತೆ) ಪ್ರತ್ಯುತ್ತರಕೊಟ್ಟನು.

**ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಮ್ ।**
**ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥** ೪

(ಧರ್ಮವನ್ನು ಉಪದೇಶಮಾಡಲು ಹೊರಟ ಮನು, ಧರ್ಮಸ್ವರೂಪವನ್ನು ತಿಳಿಸಲು ಆವಶ್ಯಕಾಂಗವೆಂದು ಭಾವಿಸಿ ಮೊದಲು ವಿರಾಟ್‌ಸ್ವರೂಪನಾದ ಪರಮಾತ್ಮನಿಂದ ಈ ಚರಾಚರಾತ್ಮಕ ಪ್ರಪಂಚದ ಸೃಷ್ಟಿ ಹೇಗಾಯಿತೆಂಬುದನ್ನು ಮುಂದೆ ತಿಳಿಸುತ್ತಾನೆ.)

(ಬಹುಕಾಲದ ಹಿಂದೆ—ಪ್ರಳಯವಾದಮೇಲೆ, ಮತ್ತೆ ಸೃಷ್ಟಿಯಾಗುವುದಕ್ಕೆ ಮೊದಲು) ಈ ಜಗತ್ತು ಅಂಧಕಾರದಲ್ಲಿ ಮುಳುಗಿದ್ದು, ಅಭಿವ್ಯಕ್ತಿಯನ್ನು ಹೊಂದಿರಲಿಲ್ಲ. ಪ್ರತ್ಯಕ್ಷಕ್ಕೆ ಗೋಚರವಲ್ಲದೆ ತಿಳಿಯಲು ಸಾಧ್ಯವಿಲ್ಲದೆಯೂ, ವಿಶೇಷಗುಣಗಳಿಲ್ಲದೆ ಗುರುತಿಸಲು ಆಗದೆಯೂ, ಸ್ಪಷ್ಟವಾದ ಮಾತುಗಳಿಲ್ಲದುದರಿಂದ ತರ್ಕದಿಂದ ಸಾಧ್ಯವಲ್ಲದೆಯೂ, ಆದುದರಿಂದ ಹೀಗೆಯೇ ಸರಿ ಎಂದು ತಿಳಿದುಕೊಳ್ಳಲು ಆಗದೆಯೂ, ತನ್ನ ಯಾವ ಕಾರ್ಯವನ್ನೂ ಮಾಡಿಕೊಳ್ಳಲಾಗದಿದ್ದುದರಿಂದ ಎಲ್ಲೆಡೆಯಲ್ಲಿಯೂ ನಿದ್ರಾವಶವಾಗಿದ್ದಂತೆಯೂ ಇದ್ದಿತು. (ಇದು ಮೂಲಪ್ರಕೃತಿಯ ವರ್ಣನೆ.)

**ತತಃ ಸ್ವಯಂಭೂರ್ಭಗವಾನವ್ಯಕ್ತೋ ವ್ಯಂಜಯನ್ನಿದಮ್ ।**
**ಮಹಾಭೂತಾದಿ ವೃತ್ತೌಜಾಃ ಪ್ರಾದುರಾಸೀತ್ತಮೋನುದಃ ॥** ೫

ಪ್ರಳಯಕಾಲ ಮುಗಿದಮೇಲೆ, ಪರಾಪೇಕ್ಷೆ ಇಲ್ಲದೆ ತಾನೇತಾನಾಗಿ ಶರೀರಧರಿಸಿದ ಪರಮಾತ್ಮನು, ತಾನು ಇತರರಿಗೆ ಅಗೋಚರನಾಗಿ, ಜಗತ್ತನ್ನು ಆವರಿಸಿದ ಅಂಧಕಾರವನ್ನು ದೂರಮಾಡುತ್ತಾ, ಅಪರಿಮಿತ ಸಾಮರ್ಥ್ಯವುಳ್ಳವನಾದುದರಿಂದ ಆಕಾಶಾದಿ ಮಹಾಭೂತಗಳನ್ನು ವ್ಯಕ್ತಗೊಳಿಸುತ್ತಾ ಪ್ರಕಾಶಿತನಾದನು.

(ಪರಮಾತ್ಮನು ಸ್ವಯಂಭೂ; ಆತನು ತಮೋಭೂತವಾದ ಮೂಲಪ್ರಕೃತಿಯನ್ನು ವಿಂಗಡಿಸಿ ಮಹದಾದಿ ತತ್ತ್ವಗಳನ್ನು ಪ್ರಕಾಶಗೊಳಿಸಿದನು.)

**ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।**
**ಅಪ ಏವ ಸಸರ್ಜಾದೌ ತಾಸು ಬೀಜಮವಾಸೃಜತ್ ॥ ೬**

ತನ್ನ ದೇಹದಿಂದ ನಾನಾಬಗೆಯ ಪ್ರಾಣಿಗಳನ್ನು ಸೃಷ್ಟಿಮಾಡಲು ಅಪೇಕ್ಷಿಸಿ, ಪರಮಾತ್ಮನು ಮೊದಲು ನೀರನ್ನು ಸೃಷ್ಟಿಮಾಡಿದನು; ಆಮೇಲೆ ಅಲ್ಲಿ (ಶಕ್ತಿರೂಪವಾದ) ಬೀಜವನ್ನು ನೆಟ್ಟನು.

**ತದಂಡಮಭವದ್ಧೈಮಂ ಸಹಸ್ರಾಂಶುಸಮಪ್ರಭಮ್ ।**
**ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥ ೭**

ಆ ಬೀಜವು ಸಹಸ್ರಾರು ಸೂರ್ಯರ ತೇಜಸ್ಸನ್ನು ಹೊಂದಿ ಸುವರ್ಣಮಯವಾದ ಮೊಟ್ಟೆಯಾಯಿತು. ಅದರೊಳಗೆ ಸರ್ವಲೋಕಗಳಿಗೂ ಪಿತಾಮಹನೆನಿಸಿಕೊಂಡ ಬ್ರಹ್ಮನಾಗಿ ತಾನೇ ಹುಟ್ಟಿದನು. (ಬ್ರಹ್ಮನಿಗೆ ಹಿರಣ್ಯಗರ್ಭನೆಂದೂ ಹೆಸರಿದೆ.)

(ಬ್ರಹ್ಮನು ಆ ಬ್ರಹ್ಮಾಂಡದಲ್ಲಿ ತನ್ನ ಮಾನದ ಒಂದು ಸಂವತ್ಸರದವರೆಗೆ ಇದ್ದು, ಧ್ಯಾನಮಾಡಿ ಅದನ್ನು ಇಬ್ಭಾಗಮಾಡಿದನು. ಆ ಚೂರುಗಳಿಂದ ಸ್ವರ್ಗ, ಭೂಮಿಗಳನ್ನೂ, ನಡುವೆ ಆಕಾಶ, ಎಂಟು ದಿಕ್ಕುಗಳು, ಸಮುದ್ರಗಳು ಇವನ್ನೂ ನಿರ್ಮಿಸಿದನು. ಆಮೇಲೆ ಮನಸ್ಸು, ಅಹಂಕಾರ ಮೊದಲಾದುವನ್ನು ಸೃಷ್ಟಿಮಾಡಿದನು.)

**ಲೋಕಾನಾಂ ತು ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ ।**
**ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥ ೮**

ಲೋಕಗಳನ್ನು ವಿಸ್ತರಿಸುವುದಕ್ಕಾಗಿ ಬ್ರಹ್ಮನು ತನ್ನ ಮುಖ, ಬಾಹುಗಳು, ತೊಡೆಗಳು ಮತ್ತು ಪಾದಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದ ಜನರನ್ನು ಸೃಷ್ಟಿಮಾಡಿದನು.

(ಈ ಸೃಷ್ಟಿಯಲ್ಲಿ ಒಂದೊಂದು ವರ್ಣದ ಮೂಲಪುರುಷರನ್ನು—ಅಥವಾ ಮೂಲದಂಪತಿಗಳನ್ನು—ಸೃಷ್ಟಿಮಾಡಿದನೆಂತಲೂ, ಮುಂದೆ ಅವರ ಸಂತಾನಗಳಿಂದ ವರ್ಣಗಳು ಬೆಳೆದವೆಂತಲೂ ಭಾವಿಸಬೇಕೆಂದು ಕೆಲವರ ಮತ.)

*

**ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।**
**ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ಪ್ರಭುಃ ॥ ೯**

ಬ್ರಹ್ಮನು ತನ್ನ ದೇಹವನ್ನೇ ಇಬ್ಭಾಗಮಾಡಿ, ಅರ್ಧದಿಂದ ಪುರುಷನೂ ಉಳಿದರ್ಧದಿಂದ ನಾರಿಯೂ ಆದನು. ಆ ನಾರಿಯಲ್ಲಿ ಪ್ರಭುವು ವಿರಾಟ್‌ಪುರುಷನನ್ನು ಸೃಷ್ಟಿಮಾಡಿದನು.

**ತಪಸ್ತಪ್ತ್ವಾಽಸೃಜದ್ಯಂ ತು ಸ ಸ್ವಯಂ ಪುರುಷೋ ವಿರಾಟ್ ।**
**ತಂ ಮಾಂ ವಿತ್ತಾಸ್ಯ ಸರ್ವಸ್ಯ ಸ್ರಷ್ಟಾರಂ ದ್ವಿಜಸತ್ತಮಾಃ ॥ ೧೦**

ತಪಸ್ಸುಮಾಡಿ ಆ ವಿರಾಟ್‌ಪುರುಷನು ಯಾರನ್ನು ಮೊದಲು ಸೃಷ್ಟಿ ಮಾಡಿದನೋ ಆ ನನ್ನನ್ನು, ಈ ಇತರ ಪ್ರಜೆಗಳನ್ನು ಸೃಷ್ಟಿಮಾಡಿದವನೆಂದು ತಿಳಿಯಿರಿ.

**ಅಹಂ ಪ್ರಜಾಃ ಸಿಸೃಕ್ಷುಸ್ತು ತಪಸ್ತಪ್ತ್ವಾ ಸುದುಶ್ಚರಮ್ ।**
**ಪತೀನ್ ಪ್ರಜಾನಾಮಸೃಜಂ ಮಹರ್ಷೀನಾದಿತೋ ದಶ ॥ ೧೧**

**ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಮ್ ।**
**ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ॥ ೧೨**

ಪ್ರಜೆಗಳನ್ನು ಸೃಷ್ಟಿಮಾಡಬೇಕೆಂದು ಅಪೇಕ್ಷಿಸಿ, ನಾನು ಕಷ್ಟಸಾಧ್ಯವಾದ ತಪಸ್ಸನ್ನು ಆಚರಿಸಿ, ಪ್ರಜೆಗಳಿಗೆ ಮೂಲರಾದ ಹತ್ತು ಜನ ಮಹರ್ಷಿಗಳನ್ನು ಮೊದಲು ಸೃಷ್ಟಿಮಾಡಿದೆ. ಅವರ ಹೆಸರುಗಳು ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ್, ವಸಿಷ್ಠ, ಭೃಗು, ನಾರದ.

**ಏತೇ ಮನೂಂಸ್ತು ಸಪ್ತಾನ್ಯಾನಸೃಜನ್ಭೂರಿತೇಜಸಃ ।**
**ದೇವಾನ್ದೇವನಿಕಾಯಾಂಶ್ಚ ಮಹರ್ಷೀಂಶ್ಚಾಮಿತೌಜಸಃ ॥ ೧೩**

**ಯಕ್ಷರಕ್ಷಃಪಿಶಾಚಾಂಶ್ಚ ಗಂಧರ್ವಾಪ್ಸರಸೋಽಸುರಾನ್ ।**
**ನಾಗಾನ್ ಸರ್ಪಾನ್ ಸುಪರ್ಣಾಂಶ್ಚ ಪಿತೄಣಾಂ ಚ ಪೃಥಗ್ಗಣಾನ್॥**

**ಕಿನ್ನರಾನ್ವಾನರಾನ್ಮತ್ಸ್ಯಾನ್ ವಿವಿಧಾಂಶ್ಚ ವಿಹಂಗಮಾನ್ ।**
**ಪಶೂನ್ಮೃಗಾನ್ಮನುಷ್ಯಾಂಶ್ಚ ವ್ಯಾಳಾಂಶ್ಚೋಭಯತೋದತಃ ॥ ೧೫**

ಈ ಮಹರ್ಷಿಗಳು ಮಹಾತಪಸ್ವಿಗಳಾಗಿ ಆಮೇಲೆ ಏಳು ಜನ ಮನುಗಳನ್ನೂ, ನಾನಾದೇವತೆಗಳನ್ನೂ, ದೇವನಿವಾಸಗಳಾದ ಸ್ವರ್ಗಾದಿಗಳನ್ನೂ, ಮಹಾಸಮರ್ಥರಾದ ಋಷಿಗಳನ್ನೂ, ಯಕ್ಷರಾಕ್ಷಸಪಿಶಾಚಾಸುರ ಗಂಧರ್ವಾಪ್ಸರಸರನ್ನೂ, ನಾಗ, ಗರುಡ, ಪಿತೃಗಣಗಳು, ಕಿನ್ನರರು, ವಾನರರು, ವಿವಿಧ ಪಕ್ಷಿಗಳು, ಪಶುಗಳು, ಮೃಗಗಳು, ಮನುಷ್ಯರು, ಮೇಲೆ ಮತ್ತು ಕೆಳಗೆ ಎರಡು ಸಾಲು ಹಲ್ಲುಗಳುಳ್ಳ (ಸಿಂಹ ವ್ಯಾಘ್ರಾದಿ) ಕ್ರೂರಮೃಗಗಳು— ಇವನ್ನೆಲ್ಲ ಸೃಷ್ಟಿಮಾಡಿದರು.

**ಏವಮೇತೈರಿದಂ ಸರ್ವಂ ಮನ್ನಿಯೋಗಾನ್ಮಹಾತ್ಮಭಿಃ ।**
**ಯಥಾಕರ್ಮ ತಪೋಯೋಗಾತ್ಸೃಷ್ಟಂ ಸ್ಥಾವರಜಂಗಮಮ್ ॥ ೧೬**

ಈ ರೀತಿ ಆ ಮಹಾತ್ಮರು ತಮ್ಮ ತಪೋಬಲದಿಂದ, ನನ್ನ ಅಪ್ಪಣೆಯಂತೆ, ಆಯಾ ಪ್ರಾಣಿಗಳ ಕರ್ಮಾನುಸಾರವಾಗಿ ಈ ಸ್ಥಾವರಜಂಗಮ ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದರು.

(ಕರ್ಮಾನುಸಾರವೆಂದು ಹೇಳಿರುವುದರಿಂದ ಪಶುಪಕ್ಷ್ಯಾದಿ ನಾನಾ ಯೋನಿಗಳಲ್ಲಿ ಹುಟ್ಟುವುದಕ್ಕೆ, ಮುಂಚೆ ಮಾಡಿದ ಕರ್ಮವೇ ಕಾರಣವೆಂದು ಹೇಳಿದಹಾಗಾಯಿತು. ಸತ್ಕರ್ಮ, ಅಸತ್ಕರ್ಮಗಳ ನಿರ್ಣಯವನ್ನು ಧರ್ಮ ಶಾಸ್ತ್ರವೇ ಮಾಡುವುದು. ಆದುದರಿಂದ ಧರ್ಮಶಾಸ್ತ್ರದ ಗ್ರಂಥದಲ್ಲಿ ಸೃಷ್ಟಿಯ ಕ್ರಮವನ್ನೆಲ್ಲ ಹೇಳಿದುದು ಉಚಿತವೆಂದು ಭಾವಿಸಬೇಕು. ಧರ್ಮಾಧರ್ಮಾನುಸಾರಿಯಾದ ಕರ್ಮಗಳನ್ನು ಮಾಡುವುದರಿಂದ ಉತ್ತಮಾಧಮ ಮಧ್ಯಮಗತಿಗಳಾಗುವುವೆಂದು ಗ್ರಂಥದ ಕೊನೆಯಲ್ಲಿಯೂ ಹೇಳಿದೆ.)

**ಏತದ್ವೋಽಯಂ ಭೃಗುಃ ಶಾಸ್ತ್ರಂ ಶ್ರಾವಯಿಷ್ಯತ್ಯಶೇಷತಃ ।**
**ಏತದ್ಧಿ ಮತ್ತೋಽಧಿಜಗೇ ಸರ್ವಮೇಷೋಽಖಿಲಂ ಮುನಿಃ ॥ ೧೭**

ಈ ಧರ್ಮಶಾಸ್ತ್ರವನ್ನು ಸಂಪೂರ್ಣವಾಗಿ ನನ್ನಿಂದ ಭೃಗು ಕಲಿತನು. ಆತನೇ ನಿಮಗೆ ಈಗ ಎಲ್ಲವನ್ನೂ ತಿಳಿಸುವನು.

**ತತಸ್ತಥಾ ಸ ತೇನೋಕ್ತೋ ಮಹರ್ಷಿರ್ಮನುನಾ ಭೃಗುಃ ।**
**ತಾನಬ್ರವೀದೃಷೀನ್ಸರ್ವಾನ್ ಪ್ರೀತಾತ್ಮಾ ಶ್ರೂಯತಾಮಿತಿ ॥ ೧೮**

ಅದೇ ರೀತಿಯಲ್ಲಿ ಮನುವಿನಿಂದ ಹೇಳಲ್ಪಟ್ಟ ಭೃಗುಮಹರ್ಷಿಯು ಸಂತುಷ್ಟಚಿತ್ತನಾಗಿ, "ಋಷಿಗಳೇ, ಕೇಳಿರಿ" ಎಂದು ಅವರೆಲ್ಲರಿಗೆ ಹೇಳ ತೊಡಗಿದನು.

**ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ ।**
**ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಃ ಸ್ಮೃತಾಃ॥ ೧೯**

ಈ ಸ್ಥಾವರಜಂಗಮ ಸೃಷ್ಟಿಯಲ್ಲಿ ಕೀಟಾದಿಪ್ರಾಣಿಗಳು (ಸ್ಥಾವರಗಳಿಗಿಂತ) ಉತ್ತಮ (ಅವಕ್ಕೆ ಆಗಾಗ ಸ್ವಲ್ಪ ಸುಖಾನುಭವವಾಗುವುದು). ಪ್ರಾಣಿಗಳಲ್ಲಿ ಬುದ್ಧಿಯಿಂದ ಜೀವಿಸುವ ಪಶ್ವಾದಿಗಳು ಉತ್ತಮ (ಅವಕ್ಕೆ ತಮ್ಮ ಆಹಾರ ಸಿಗುವ ಸ್ಥಳಕ್ಕಾಗಿ ಹಿಂದಕ್ಕೋ ಮುಂದಕ್ಕೋ ಚಲಿಸಬೇಕೆಂಬ ಬುದ್ಧಿಯಿರುವುದರಿಂದ). ಬುದ್ಧಿಜೀವಿಗಳಾದ ಪ್ರಾಣಿಗಳೊಳಗೆ ಮನುಷ್ಯನೇ ಉತ್ತಮ (ಅವನಿಗೆ ಇತರ ಎಲ್ಲ ಪ್ರಾಣಿಗಳಿಗಿಂತ ಹೆಚ್ಚಿನ ಜ್ಞಾನವಿರುವುದು). ಮನುಷ್ಯರಲ್ಲಿ ಬ್ರಾಹ್ಮಣನು ಶ್ರೇಷ್ಠನು (ಅವನು ಇಹದಲ್ಲಿ ಎಲ್ಲರಿಂದ ಪೂಜ್ಯನಾಗಿ, ಪರದಲ್ಲಿ ಸ್ವರ್ಗಮೋಕ್ಷಾದಿಗಳನ್ನು ಪಡೆಯುವ ಉತ್ಕೃಷ್ಟ ಜ್ಞಾನವನ್ನು ಹೊಂದಬಲ್ಲನು).

**ಬ್ರಾಹ್ಮಣೋ ಜಾಯಮಾನೋ ಹಿ ಪೃಥಿವ್ಯಾಮಧಿಜಾಯತೇ ।**
**ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ॥ ೨೦**

ಎಲ್ಲ ಪ್ರಾಣಿಗಳ ಧರ್ಮಸಮೂಹವನ್ನು ರಕ್ಷಿಸುವುದಕ್ಕೆ ಸಮರ್ಥನಾದ ಬ್ರಾಹ್ಮಣನು ಭೂಮಿಯಲ್ಲಿ ಹುಟ್ಟುವಾಗಲೇ ಶ್ರೇಷ್ಠನಾಗುವನು.

**ತಸ್ಯ ಕರ್ಮವಿವೇಕಾರ್ಥಂ ಶೇಷಾಣಾಮನುಪೂರ್ವಶಃ ।**
**ಸ್ವಾಯಂಭುವೋ ಮನುರ್ಧೀಮಾನಿದಂ ಶಾಸ್ತ್ರಮಕಲ್ಪಯತ್ ॥ ೨೧**

ಆ ಬ್ರಾಹ್ಮಣ ಮತ್ತು ಉಳಿದ ಮನುಷ್ಯರಿಗೋಸ್ಕರ, ಕ್ರಮವಾಗಿ ಅವರವರು ಮಾಡಬೇಕಾದ ಕರ್ಮಗಳ ನಿಷ್ಕೃಷ್ಟಜ್ಞಾನವನ್ನು ಪಡೆಯುವುದಕ್ಕಾಗಿ, ಸರ್ವಜ್ಞನಾದ ಸ್ವಾಯಂಭುವಮನುವು ಈ ಧರ್ಮಶಾಸ್ತ್ರವನ್ನು ಕಲ್ಪಿಸಿದನು.

**ಅಸ್ಮಿನ್ಧರ್ಮೋಽಖಿಲೇನೋಕ್ತೋ ಗುಣದೋಷೌ ಚ ಕರ್ಮಣಾಮ್**
**ಚತುರ್ಣಾಮಪಿ ವರ್ಣಾನಾಮಾಚಾರಶ್ಚೈವ ಶಾಶ್ವತಃ ॥ ೨೨**

ಇಲ್ಲಿ ಸಂಪೂರ್ಣವಾದ ಧರ್ಮವೂ, ಕರ್ಮಗಳ ಗುಣದೋಷಗಳೂ, ನಾಲ್ಕು ವರ್ಣದ ಜನರಿಗೆ ಪರಂಪರಾವಿಹಿತವಾಗಿ ಬಂದ ಆಚಾರವೂ ವಿಶದವಾಗಿ ಹೇಳಲ್ಪಟ್ಟಿವೆ.

**ಆಚಾರಃ ಪರಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವ ಚ ।**
**ತಸ್ಮಾದಸ್ಮಿನ್ ಸದಾ ಯುಕ್ತೋ ನಿತ್ಯಂ ಸ್ಯಾದಾತ್ಮವಾನ್ ದ್ವಿಜಃ ॥**

ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಆಚಾರವೇ ಶ್ರೇಷ್ಠ ಧರ್ಮ. ಆದುದರಿಂದ ಆತ್ಮವಂತನಾದ ದ್ವಿಜನು ಯಾವಾಗಲೂ ಸದಾಚಾರದಲ್ಲಿ ಪ್ರಯತ್ನಶೀಲನಾಗಿರಬೇಕು.

**ದೇಶಧರ್ಮಾನ್ ಜಾತಿಧರ್ಮಾನ್ ಕುಲಧರ್ಮಾಂಶ್ಚ ಶಾಶ್ವತಾನ್ ।**
**ಪಾಷಂಡಗಣಧರ್ಮಾಂಶ್ಚ ಶಾಸ್ತ್ರೇಽಸ್ಮಿನ್ನುಕ್ತವಾನ್ ಮನುಃ ॥ ೨೪**

ಆಯಾ ದೇಶಾನುಗುಣಗಳಾದ ಧರ್ಮಗಳು, ಆಯಾ ಜಾತಿಕುಲಾದಿಗಳಿಗೆ ಪರಂಪರಾಗತವಾಗಿ ಬಂದ ಧರ್ಮಗಳು, ವೇದಾದಿ ಆಗಮಗಳನ್ನು ಬಿಟ್ಟು ಶಾಸ್ತ್ರನಿಷಿದ್ಧವಾದ ಕರ್ಮಾಚರಣೆಯುಳ್ಳ ಪಾಷಂಡರೆನಿಸಿಕೊಳ್ಳುವ ಜನರ ಧರ್ಮಗಳು—ಇವನ್ನೆಲ್ಲ ಮನು ಈ ಶಾಸ್ತ್ರದಲ್ಲಿ ಹೇಳಿದ್ದಾನೆ.

## II ಅಧ್ಯಾಯ

# ಸಂಸ್ಕಾರಗಳು

**ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯಮದ್ವೇಷರಾಗಿಭಿಃ ।**
**ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಂ ನಿಬೋಧತ ॥ ೧**

ವೇದವಿದ್ಯೆಯನ್ನು ಗಳಿಸಿ, ರಾಗದ್ವೇಷಗಳಿಂದ ಯಾವಾಗಲೂ ದೂರವಾಗಿರುವ ಸಜ್ಜನರಿಂದ ಅನುಷ್ಠಾನಮಾಡಲ್ಪಟ್ಟು ಹೃದಯಕ್ಕೆ ಒಪ್ಪುವಂತಹ ಧರ್ಮವು ಯಾವುದೋ, ಅದನ್ನು ತಿಳಿಯಿರಿ.

**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**
**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥ ೨**

ಋಗಾದಿವೇದಗಳೆಲ್ಲ ಧರ್ಮಕ್ಕೆ ಮೂಲ ಅಥವಾ ಪ್ರಮಾಣ. ಹಾಗೆಯೇ ಮನು ಮೊದಲಾದ ವೇದಜ್ಞರ ಸ್ಮೃತಿಗಳೂ ಪ್ರಮಾಣ. ಬ್ರಹ್ಮಣ್ಯತೆ, ದೇವಪಿತೃಭಕ್ತಿ, ಸೌಮ್ಯತೆ, ಅನಸೂಯತೆ, ಕಾರುಣ್ಯ, ಪ್ರಶಾಂತತೆ ಮುಂತಾದ ಶೀಲಗಳು, ಸಜ್ಜನರ ಆಚಾರಗಳು ಮತ್ತು (ಸಂದೇಹವಿರುವ ವಿಷಯದಲ್ಲಿ) ಆತ್ಮತೃಪ್ತಿ—ಇವೆಲ್ಲ ಪ್ರಮಾಣಗಳು.

**ಶ್ರುತಿಸ್ಮೃತ್ಯುದಿತಂ ಧರ್ಮಮನುತಿಷ್ಠನ್ಹಿ ಮಾನವಃ ।**
**ಇಹ ಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಂ ಸುಖಮ್ ॥ ೩**

ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಧರ್ಮಗಳನ್ನು ಆಚರಿಸುವ ಮನುಷ್ಯನು ಈ ಲೋಕದಲ್ಲಿ ಕೀರ್ತಿಯನ್ನೂ, ಮರಣಾನಂತರ ಪರಲೋಕದಲ್ಲಿ ಉತ್ಕೃಷ್ಟಸುಖವನ್ನೂ ಪಡೆಯುತ್ತಾನೆ.

**ಶ್ರುತಿದ್ವೈಧಂ ತು ಯತ್ರ ಸ್ಯಾತ್ತತ್ರ ಧರ್ಮಾವುಭೌ ಸ್ಮೃತೌ ।**
**ಉಭಾವಪಿ ಹಿ ತೌ ಧರ್ಮೌ ಸಮ್ಯಗುಕ್ತೌ ಮನೀಷಿಭಿಃ ॥ ೪**

ಎರಡು ಶ್ರುತಿಗಳಿಗೆ ಪರಸ್ಪರ ವಿರೋಧಾಭಿಪ್ರಾಯವಿರುವಾಗ ಆ ಎರಡೂ ಸಮಾನಬಲವುಳ್ಳವುಗಳಾಗಿರುವುದರಿಂದ, ವಿಕಲ್ಪದಿಂದ ಎರಡೂ ಧರ್ಮಗಳೇ ಎಂದು ತಿಳಿದವರು ಹೇಳಿದ್ದಾರೆ.

(ಸೂರ್ಯನು ಹುಟ್ಟಿದಮೇಲೆ ಹೋಮಮಾಡಬೇಕು, ಸೂರ್ಯನು ಅನುದಿತನಾಗಿರುವಾಗಲೇ ಹೋಮಮಾಡಬೇಕು, ಎಂದು ಒಂದು ಹೋಮಕ್ಕಾಗಿ, ಪರಸ್ಪರ ವಿರುದ್ಧವಾದ ಕಾಲಗಳನ್ನು ಶ್ರುತಿಗಳು ವಿಧಿಸಿದರೆ, ಹೋಮಮಾಡಬೇಕೆಂಬುದೇ ಮುಖ್ಯತಾತ್ಪರ್ಯವಾಗುವುದು. ಸೂರ್ಯೋದಯಕ್ಕೆ ಮೊದಲೇ ಆಗಲಿ, ಆಮೇಲೆಯೇ ಆಗಲಿ ಹೋಮಮಾಡಬಹುದು ಎಂದು ಹೇಳಿದಹಾಗಾಯಿತು.)

**ಸರಸ್ವತೀದೃಷದ್ವತ್ಯೋರ್ದೇವನದ್ಯೋರ್ಯದಂತರಮ್ ।**
**ತಂ ದೇವನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥ ೫**

ದೇವನದಿಗಳಾದ ಸರಸ್ವತೀ ದೃಷದ್ವತೀಗಳ ನಡುವೆ ದೇವನಿರ್ಮಿತವಾದ ಪ್ರದೇಶವನ್ನು ಬ್ರಹ್ಮಾವರ್ತವೆಂದು ಕರೆಯುತ್ತಾರೆ.

(ದೇವನದೀ, ದೇವನಿರ್ಮಿತ ಎಂಬ ಶಬ್ದಗಳಿಂದ ಆ ಪ್ರದೇಶಕ್ಕೆ ಪ್ರಾಶಸ್ತ್ಯವನ್ನು ಸೂಚಿಸಲಾಗಿದೆ.)

**ಕುರುಕ್ಷೇತ್ರಂ ಚ ಮತ್ಸ್ಯಾಶ್ಚ ಪಂಚಾಲಾಃ ಶೂರಸೇನಕಾಃ ।**
**ಏಷ ಬ್ರಹ್ಮರ್ಷಿದೇಶೋ ವೈ ಬ್ರಹ್ಮಾವರ್ತಾದನಂತರಃ ॥ ೬**

ಕುರುಕ್ಷೇತ್ರ, ಮತ್ಸ್ಯದೇಶ, ಪಾಂಚಾಲರು ಆಳುತ್ತಿದ್ದ ಕಾನ್ಯಕುಬ್ಜ, ಶೂರಸೇನರು ಆಳುತ್ತಿದ್ದ ಮಗಧ, ಇವೆಲ್ಲ ಸೇರಿ ಬ್ರಹ್ಮರ್ಷಿದೇಶವಾಗುವುದು. ಇದು ಆರ್ಯಾವರ್ತಕ್ಕಿಂತ ಸದಾಚಾರದಲ್ಲಿ ಸ್ವಲ್ಪ ಕಡಿಮೆಯಾದುದು.

**ಹಿಮವದ್ವಿಂಧ್ಯಯೋರ್ಮಧ್ಯಂ ಯತ್ಪ್ರಾಗ್ವಿನಶನಾದಪಿ ।**
**ಪ್ರತ್ಯಗೇವ ಪ್ರಯಾಗಾಚ್ಚ ಮಧ್ಯದೇಶಃ ಪ್ರಕೀರ್ತಿತಃ ॥ ೭**

ಹಿಮವದ್ವಿಂಧ್ಯಪರ್ವತಗಳ ನಡುವೆ ಸರಸ್ವತೀ ನದಿಯು ಅದೃಶ್ಯವಾಗಿರುವ ಪ್ರದೇಶದ ಪೂರ್ವಕ್ಕೆ ಮತ್ತು ಪ್ರಯಾಗಕ್ಕೆ ಪಶ್ಚಿಮದಲ್ಲಿ ಇರುವುದು ಮಧ್ಯದೇಶವೆಂದು ಪ್ರಸಿದ್ಧವಾಗಿದೆ.

**ಆಸಮುದ್ರಾತ್ತು ವೈ ಪೂರ್ವಾದಾಸಮುದ್ರಾತ್ತು ಪಶ್ಚಿಮಾತ್ ।**
**ತಯೋರೇವಾಂತರಂ ಗಿರ್ಯೋರಾರ್ಯಾವರ್ತಂ ವಿದುರ್ಬುಧಾಃ ॥**

ಪೂರ್ವ ಪಶ್ಚಿಮ ಸಮುದ್ರಗಳವರೆಗೆ ಹಿಮವದ್ವಿಂಧ್ಯಪರ್ವತಗಳ ನಡುವೆ ಇರುವ ಪ್ರದೇಶವನ್ನು ವಿದ್ವಾಂಸರು ಆರ್ಯಾವರ್ತವೆಂದು ತಿಳಿಯುತ್ತಾರೆ.

(ಆರ್ಯರು ಇಲ್ಲಿ ಇರುವುದಲ್ಲದೆ, ಮತ್ತೆ ಮತ್ತೆ ಹುಟ್ಟುವುದರಿಂದ ಇದು ಆರ್ಯಾವರ್ತ.)

**ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ ।**
**ಸ ಜ್ಞೇಯೋ ಯಜ್ಞಿಯೋ ದೇಶೋ ಮ್ಲೇಚ್ಛದೇಶಸ್ತ್ವತಃಪರಃ ॥ ೯**

ಕೃಷ್ಣಸಾರವೆಂಬ ಜಿಂಕೆಯು ಎಲ್ಲಿ ಸ್ವಾಭಾವಿಕವಾಗಿ ಸಂಚರಿಸುತ್ತದೆಯೋ ಅದು ಯಜ್ಞಕ್ಕೆ ಯೋಗ್ಯವಾದ ಪ್ರದೇಶ; ಹಾಗಲ್ಲದಿರುವುದು ಮ್ಲೇಚ್ಛದೇಶ.

**ಏತಾನ್ದ್ವಿಜಾತಯೋ ದೇಶಾನ್ ಸಂಶ್ರಯೇರನ್ಪ್ರಯತ್ನತಃ ।**
**ಶೂದ್ರಸ್ತು ಯಸ್ಮಿನ್ಕಸ್ಮಿನ್ವಾ ನಿವಸೇದ್ವೃತ್ತಿಕರ್ಶಿತಃ ॥ ೧೦**

ದ್ವಿಜರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು (ಯಜ್ಞಮಾಡಿ ಅದೃಷ್ಟವಾದ ಫಲವನ್ನು ಪಡೆಯುವುದಕ್ಕಾಗಿ) ಪ್ರಯತ್ನಪಟ್ಟು ಈ ಮೇಲೆ ಹೇಳಿದ

ದೇಶಗಳಲ್ಲಿ ವಾಸಮಾಡಬೇಕು. ವೃತ್ತಿಯಿಂದ ಜೀವನೋಪಾಯಕ್ಕಾಗಿ ಶೂದ್ರನು ಎಲ್ಲಿಯಾದರೂ ಇರಬಹುದು.

**ಗಾರ್ಭೈರ್ಹೋಮೈರ್ಜಾತಕರ್ಮಚೌಡಮೌಂಜೀನಿಬಂಧನೈಃ ।**
**ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮಪಮೃಜ್ಯತೇ ॥ ೧೧**

ಗರ್ಭಶುದ್ಧಿಗಾಗಿ ಮಾಡುವ ಹೋಮಗಳು, ಜಾತಕರ್ಮ, ಚೂಡಾಕರ್ಮ (ಜುಟ್ಟು ಬಿಡಿಸುವುದು), ಉಪನಯನಗಳಿಂದ ಬೀಜಸಂಬಂಧವಾದ ಅಥವಾ ಗರ್ಭಸಂಬಂಧವಾದ ಪಾಪಗಳನ್ನು ದ್ವಿಜರು ಕಳೆದುಕೊಳ್ಳುತ್ತಾರೆ.

(ನಿಷಿದ್ಧರೀತಿಯ ವಿವಾಹಾದಿಗಳಿಂದ ಬೀಜದೋಷವೂ ಮಾತಾಪಿತೃಗಳ ಶರೀರದೋಷಗಳಿಂದ ಗರ್ಭದೋಷವೂ ಹುಟ್ಟುವುವು )

**ಸ್ವಾಧ್ಯಾಯೇನ ವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾ ಸುತೈಃ ।**
**ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ॥೧೨**

ವೇದಾಧ್ಯಯನ, ಮದ್ಯಮಾಂಸಾದಿ-ವರ್ಜನರೂಪವಾದ ವ್ರತಗಳು, ಪುತ್ರೋತ್ಪತ್ತಿ, ನಿತ್ಯನೈಮಿತ್ತಿಕ ಹೋಮಗಳು, ದೇವರ್ಷಿಪಿತೃತರ್ಪಣರೂಪವಾದ ಯಜ್ಞಗಳು, ಬ್ರಹ್ಮಯಜ್ಞ, ಜ್ಯೋತಿಷ್ಟೋಮಾದಿ ಯಜ್ಞಗಳು—ಇವುಗಳಿಂದ ಮನುಷ್ಯನ ಶರೀರವು ಬ್ರಹ್ಮಪ್ರಾಪ್ತಿಗೆ ಯೋಗ್ಯವಾದುದು ಆಗುವುದು.

**ಪ್ರಾಙ್ನಾಭಿವರ್ಧನಾತ್ಪುಂಸೋ ಜಾತಕರ್ಮ ವಿಧೀಯತೇ ।**
**ಮಂತ್ರವತ್ಪ್ರಾಶನಂ ಚಾಸ್ಯ ಹಿರಣ್ಯಮಧುಸರ್ಪಿಷಾಮ್ ॥ ೧೩**

ಮಗುವಿಗೆ ಹೊಕ್ಕಳಬಳ್ಳಿ ಕತ್ತರಿಸುವುದಕ್ಕೆ ಮೊದಲೇ ಜಾತಕರ್ಮವೆಂಬ ಸಂಸ್ಕಾರವನ್ನು ಮಾಡುತ್ತಾರೆ. ಆಗ ಅವರವರ ಗೃಹ್ಯಸೂತ್ರಗಳಲ್ಲಿ ಹೇಳಿರುವಂತೆ ಮಂತ್ರಪೂರ್ವಕವಾಗಿ ಬಂಗಾರದೊಡನೆ ಸ್ಪರ್ಶಹೊಂದಿದ ಜೇನುತುಪ್ಪ, ತುಪ್ಪಗಳನ್ನು ತಿನ್ನಿಸುತ್ತಾರೆ.

**ನಾಮಧೇಯಂ ದಶಮ್ಯಾಂ ತು ದ್ವಾದಶ್ಯಾಂ ವಾಸ್ಯ ಕಾರಯೇತ್ ।**
**ಪುಣ್ಯೇ ತಿಥೌ ಮುಹೂರ್ತೇ ವಾ ನಕ್ಷತ್ರೇ ವಾ ಗುಣಾನ್ವಿತೇ ॥ ೧೪**

ಹತ್ತನೆಯ ಅಥವಾ ಹನ್ನೆರಡನೆಯ ದಿನ ಮಗುವಿಗೆ ನಾಮಕರಣ ಮಾಡಬೇಕು. (ಹತ್ತು ದಿವಸಗಳವರೆಗೆ ಹುಟ್ಟಿದ ಮೈಲಿಗೆ ಇರುವುದರಿಂದ,

ಸ್ನಾನವಾದಮೇಲೆ ಹನ್ನೊಂದನೆಯ ದಿನ ಮಾಡಬೇಕೆಂದು ವ್ಯಾಖ್ಯಾನಕಾರರು ಹೇಳುತ್ತಾರೆ.) ಆ ಕಾಲದಲ್ಲಿ ಸಂಸ್ಕಾರಮಾಡಲು ಅನುಕೂಲವಾಗದಿದ್ದರೆ ಮುಂದೆ ಶುಭವಾದ ತಿಥಿ, ಮುಹೂರ್ತ ಅಥವಾ ನಕ್ಷತ್ರವನ್ನು ಜೋಯಿಸರಿಂದ ತಿಳಿದುಕೊಂಡು ಆಗ ನಾಮಕರಣಮಾಡಬೇಕು.

**ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಂ ಮನೋಹರಮ್ ।**
**ಮಂಗಲ್ಯಂ ದೀರ್ಘವರ್ಣಾಂತಮಾಶೀರ್ವಾದಾಭಿಧಾನವತ್ ॥ ೧೫**

ಸುಖವಾಗಿ ಉಚ್ಚಾರಮಾಡಲು ಅನುಕೂಲವಾದ, ಕ್ರೂರಾರ್ಥವಿಲ್ಲದ, ಅರ್ಥದಲ್ಲಿ ಸಂದೇಹಕ್ಕೆ ಆಸ್ಪದವಿಲ್ಲದೆ ಮನೋಹರವಾಗಿಯೂ ಮಂಗಳಕರವಾಗಿಯೂ ಕೊನೆಯಲ್ಲಿ ದೀರ್ಘಸ್ವರ ಬಂದು ಆಶೀರ್ವಾದಾರ್ಥಕವಾಗಿಯೂ ಇರುವ ಹೆಸರನ್ನು ಹೆಣ್ಣುಮಗುವಿಗೆ ಇಡಬೇಕು. (ಉದಾ : ಯಶೋದಾ.)

**ಚತುರ್ಥೇ ಮಾಸಿ ಕರ್ತವ್ಯಂ ಶಿಶೋರ್ನಿಷ್ಕ್ರಮಣಂ ಗೃಹಾತ್ ।**
**ಷಷ್ಠೇಽನ್ನಪ್ರಾಶನಂ ಮಾಸಿ ಯದ್ವೇಷ್ಟಂ ಮಂಗಲಂ ಕುಲೇ ॥ ೧೬**

ಮಗುವು ಹುಟ್ಟಿದ ಮನೆಯಿಂದ ಹೊರಗೆ ಬಂದು ಸೂರ್ಯಕಿರಣ ಸ್ಪರ್ಶವನ್ನು ಪಡೆಯುವುದಕ್ಕಾಗಿ ನಾಲ್ಕನೆಯ ತಿಂಗಳಲ್ಲಿ ನಿಷ್ಕ್ರಮಣ ಎಂಬ ಸಂಸ್ಕಾರವನ್ನು ಮಾಡಬೇಕು. (ಆಗ ಮಗು ಮತ್ತು ಅದರ ತಾಯಿ ಬಂಧುಗಳೊಡನೆ ಮನೆಯಿಂದ ಹೊರಟು, ದೇವಸ್ಥಾನಕ್ಕೆ ಹೋಗಿ, ದೇವರಿಗೆ ಪೂಜೆ, ಮಂಗಳಾರತಿಗಳನ್ನು ಮಾಡಿಸಿಕೊಂಡು ಬರುತ್ತಾರೆ.) ಆರನೆಯ ತಿಂಗಳಲ್ಲಿ (ಗಟ್ಟಿ ಆಹಾರವನ್ನು ಕೊಡಲು ಪ್ರಾರಂಭಿಸುವುದಕ್ಕಾಗಿ) ಅನ್ನಪ್ರಾಶನವೆಂಬ ಸಂಸ್ಕಾರವನ್ನು ಮಾಡುತ್ತಾರೆ. ಅವರವರ ಕುಲಾಚಾರದಂತೆ ಇಲ್ಲಿ ಹೇಳಿರುವ ಸಂಸ್ಕಾರಗಳ ಕ್ರಮ ಮತ್ತು ಕಾಲಗಳನ್ನು ಬದಲಾಯಿಸಿಕೊಳ್ಳುವುದುಂಟು.

**ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮೇವ ಧರ್ಮತಃ ।**
**ಪ್ರಥಮೇಽಬ್ದೇ ತೃತೀಯೇ ವಾ ಕರ್ತವ್ಯಂ ಶ್ರುತಿಚೋದನಾತ್ ॥ ೧೭**

ಎಲ್ಲ ದ್ವಿಜಾತಿಯವರಿಗೂ ಶ್ರುತಿಯ ಅಪ್ಪಣೆಯಂತೆ, ಧರ್ಮಸಾಧನೆಗಾಗಿ ಮೊದಲನೆಯ ವರ್ಷದಲ್ಲಿಯಾಗಲಿ, ಮೂರನೆಯ ವರ್ಷದಲ್ಲಿಯಾಗಲಿ ಚೌಲವೆಂಬ ಕರ್ಮವನ್ನು ಮಾಡಬೇಕು.

**ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಮ್ ।**
**ಗರ್ಭಾದೇಕಾದಶೇ ರಾಜ್ಞೋ ಗರ್ಭಾತ್ತು ದ್ವಾದಶೇ ವಿಶಃ ॥ ೧೮**

ಬ್ರಾಹ್ಮಣಕುಮಾರನಿಗೆ ಗರ್ಭಸ್ಥನಾದಂದಿನಿಂದ ಎಂಟನೆಯ ವರ್ಷದಲ್ಲಿ (ಅಂದರೆ, ಹುಟ್ಟಿದಮೇಲೆ ಏಳನೆಯ ವರ್ಷದಲ್ಲಿ) ಉಪನಯನಮಾಡಬೇಕು. ಕ್ಷತ್ರಿಯನಿಗೆ ಗರ್ಭದಿಂದ ಹನ್ನೊಂದನೆಯ ವಯಸ್ಸಿನಲ್ಲಿಯೂ ವೈಶ್ಯನಿಗೆ ಹನ್ನೆರಡನೆಯ ವಯಸ್ಸಿನಲ್ಲಿಯೂ ಉಪನಯನಮಾಡಬೇಕು.

**ಬ್ರಹ್ಮವರ್ಚಸಕಾಮಸ್ಯ ಕಾರ್ಯಂ ವಿಪ್ರಸ್ಯ ಪಂಚಮೇ ।**
**ರಾಜ್ಞೋ ಬಲಾರ್ಥಿನಃ ಷಷ್ಠೇ ವೈಶ್ಯಸ್ಯೇಹಾರ್ಥಿನೋಽಷ್ಟಮೇ ॥ ೧೯**

ಪ್ರಕೃಷ್ಟವಾದ ಬ್ರಹ್ಮತೇಜಸ್ಸು ಬರಲಿ, ಎಂದು ಬ್ರಾಹ್ಮಣಬಾಲಕನಿಗೆ ಐದನೆಯ ವರ್ಷದಲ್ಲಿ ಉಪನಯನಮಾಡಬಹುದು. ಶ್ರೇಷ್ಠ ಚತುರಂಗ ಬಲಶಾಲಿಯಾಗಲಿ, ಎಂದು ಕ್ಷತ್ರಿಯನಿಗೆ ಆರನೆಯ ವರ್ಷದಲ್ಲಿಯೂ, ವಿಶೇಷವಾಗಿ ಕೃಷಿ-ವಾಣಿಜ್ಯಾದಿಗಳಲ್ಲಿ ಪ್ರಗತಿಪಡೆಯಲಿ, ಎಂದು ವೈಶ್ಯನಿಗೆ ಎಂಟನೆಯ ವರ್ಷದಲ್ಲಿಯೂ ಉಪನಯನಮಾಡಬಹುದು.

**ಆಷೋಡಶಾದ್ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ ।**
**ಆದ್ವಾವಿಂಶಾತ್ ಕ್ಷತ್ರಬಂಧೋರಾಚತುರ್ವಿಂಶತೇರ್ವಿಶಃ ॥ ೨೦**

ಬ್ರಾಹ್ಮಣನಿಗೆ ಹದಿನಾರು ವರ್ಷ, ಕ್ಷತ್ರಿಯನಿಗೆ ಇಪ್ಪತ್ತೆರಡು ವರ್ಷ, ವೈಶ್ಯನಿಗೆ ಇಪ್ಪತ್ತನಾಲ್ಕು ವರ್ಷ ಮುಗಿಯುವವರೆಗೆ ಉಪನಯನಕಾಲ ಮೀರುವದಿಲ್ಲ.

(ಇವು ಮೊದಲು ಹೇಳಿದ ಕಾಲಗಳ ಎರಡರಷ್ಟು ಆಗಿವೆ. ಈ ಕಾಲಗಳು ಮೀರಿದಮೇಲೆ, ಪ್ರಾಯಶ್ಚಿತ್ತ ಮಾಡಿ ಉಪನಯನಮಾಡಬೇಕು. ಸಂಸ್ಕಾರ ವನ್ನು ಸರ್ವಥಾ ಬಿಡಬಾರದು.)

**ಅತ ಊರ್ಧ್ವಂ ತ್ರಯೋಽಪ್ಯೇತೇ ಯಥಾಕಾಲಮಸಂಸ್ಕೃತಾಃ ।**
**ಸಾವಿತ್ರೀಪತಿತಾ ವ್ರಾತ್ಯಾ ಭವಂತ್ಯಾರ್ಯವಿಗರ್ಹಿತಾಃ ॥ ೨೧**

ಕಾಲಮೀರಿದಮೇಲೆಯೂ ಉಪನಯನಸಂಸ್ಕಾರವನ್ನು ಹೊಂದದಿರುವ ಮೂರು ವರ್ಣದವರೂ ಗಾಯತ್ರೀ ಉಪದೇಶವನ್ನು ಪಡೆಯದೆ, ವ್ರಾತ್ಯ ರೆನಿಸಿಕೊಂಡು ಆರ್ಯರ ನಿಂದೆಗೆ ಗುರಿಯಾಗುತ್ತಾರೆ.

**ನೈತೈರಪೂತೈರ್ವಿಧಿವದಾಪದ್ಯಪಿ ಹಿ ಕರ್ಹಿಚಿತ್ ।**
**ಬ್ರಾಹ್ಮಾನ್ಯೌನಾಂಶ್ಚ ಸಂಬಂಧಾನ್ನಾಚರೇದ್ಬ್ರಾಹ್ಮಣಃ ಸಹ ॥ ೨೨**

ಹೀಗೆ ವ್ರಾತ್ಯರಾಗಿ ಪ್ರಾಯಶ್ಚಿತ್ತಮಾಡಿಕೊಳ್ಳದೆಯೇ ಉಳಿದಿರುವವರೊಡನೆ ಬ್ರಾಹ್ಮಣನು ತನ್ನ ಆಪತ್ಕಾಲದಲ್ಲಿಯೂ ಅಧ್ಯಾಪನ, ಕನ್ಯಾದಾನ ಮುಂತಾದ ಸಂಬಂಧಗಳನ್ನು ಇಟ್ಟುಕೊಳ್ಳಬಾರದು.

**ಪ್ರತಿಗೃಹ್ಯೇಪ್ಸಿತಂ ದಂಡಮುಪಸ್ಥಾಯ ಚ ಭಾಸ್ಕರಮ್ ।**
**ಪ್ರದಕ್ಷಿಣಂ ಪರೀತ್ಯಾಗ್ನಿಂ ಚರೇದ್ಭೈಕ್ಷಂ ಯಥಾವಿಧಿ ॥ ೨೩**

ತನ್ನ ವರ್ಣಕ್ಕೆ ಅನುಗುಣವಾಗಿ ಇಷ್ಟವಾದ ದಂಡವನ್ನು ಧರಿಸಿ, ಸೂರ್ಯನನ್ನು ಕುರಿತು ಪ್ರಾರ್ಥನೆಮಾಡಿ (ಸಂಧ್ಯಾವಂದನೆ, ಸೂರ್ಯೋಪಸ್ಥಾನ) ಅಗ್ನಿಕಾರ್ಯವನ್ನು ಮುಗಿಸಿ, ಬ್ರಹ್ಮಚಾರಿಯು ವಿಧಿಯನ್ನು ಅನುಸರಿಸಿ ಭಿಕ್ಷೆಯನ್ನು ಪಡೆಯಬೇಕು.

**ಮಾತರಂ ವಾ ಸ್ವಸಾರಂ ವಾ ಮಾತುರ್ವಾ ಭಗಿನೀಂ ನಿಜಾಮ್ ।**
**ಭಿಕ್ಷೇತ ಭಿಕ್ಷಾಂ ಪ್ರಥಮಂ ಯಾ ಚೈನಂ ನಾವಮಾನಯೇತ್ ॥ ೨೪**

ಮೊದಲ ಭಿಕ್ಷೆಗಾಗಿ ತಾಯಿಯನ್ನೋ, ಅಕ್ಕನನ್ನೋ, ತಾಯಿಯ ಸ್ವಂತ ಅಕ್ಕತಂಗಿಯರನ್ನೋ ಅಥವಾ ತನ್ನನ್ನು ಯಾರು ತಿರಸ್ಕರಿಸುವುದಿಲ್ಲವೋ ಅಂಥವರನ್ನೋ ಯಾಚಿಸಬೇಕು.

**ಸಮಾಹೃತ್ಯ ತು ತದ್ಭೈಕ್ಷಂ ಯಾವದರ್ಥಮಮಾಯಯಾ ।**
**ನಿವೇದ್ಯ ಗುರವೇಽಶ್ನೀಯಾದಾಚಮ್ಯ ಪ್ರಾಙ್ಮುಖಃ ಶುಚಿಃ ॥ ೨೫**

ಅನೇಕರಿಂದ ಭಿಕ್ಷೆಯನ್ನು ತಂದು, ತನಗೆ ತೃಪ್ತಿಯಾಗುವಷ್ಟನ್ನು ಮಾತ್ರ ಗುರುವಿಗೆ ತೋರಿಸಿ, ಆತನ ಅನುಜ್ಞೆಯನ್ನು ಪಡೆಯಬೇಕು. ಗುರುವು ತಾನೇ ತೆಗೆದುಕೊಳ್ಳಬಹುದೆಂಬ ಶಂಕೆಯಿಂದ ಕೆಳಗೆ ಒಳ್ಳೆಯ ಭಾಗವನ್ನಿಟ್ಟು, ಮೇಲೆ ಕದನ್ನವನ್ನು ಹಾಕಿ, ಮೋಸಮಾಡಿ ಗುರುವಿಗೆ ನಿವೇದನೆಮಾಡಬಾರದು. ಗುರುವಿನ ಅಪ್ಪಣೆ ಪಡೆದು ಶುಚಿರ್ಭೂತನಾಗಿ ಪೂರ್ವದಿಕ್ಕಿಗೆ ತಿರುಗಿ ಕುಳಿತು ಆಚಮನವನ್ನು ಮಾಡಿ, ಆಮೇಲೆ ಆ ಭಿಕ್ಷಾನ್ನವನ್ನು ತಿನ್ನಬೇಕು.

**ಪೂಜಯೇದಶನಂ ನಿತ್ಯಮದ್ಯಾಚ್ಚೈತದಕುತ್ಸಯನ್ ।**
**ದೃಷ್ಟ್ವಾ ಹೃಷ್ಯೇತ್ಪ್ರಸೀದೇಚ್ಚ ಪ್ರತಿನಂದೇಚ್ಚ ಸರ್ವಶಃ ॥ ೨೬**

ಅನ್ನವನ್ನು ಪ್ರತಿದಿನವೂ ಪೂಜಿಸಬೇಕು. (ಪ್ರಾಣಧಾರಣೆಗೆ ಅತ್ಯಾವಶ್ಯಕವಾದುದರಿಂದ ಅದನ್ನು ಮುಟ್ಟುವುದಕ್ಕೆ ಮೊದಲೇ ಭಗವಂತನನ್ನು ಧ್ಯಾನಿಸಬೇಕು.) ಅನ್ನವನ್ನು ನಿಂದಿಸದೆಯೇ ತಿನ್ನಬೇಕು. ಅನ್ನವನ್ನು ನೋಡಿದ ಕೂಡಲೆ, ಬೇರೆ ಕಾರಣಗಳಿಂದ ತನಗೊದಗಿದ ದುಃಖಗಳನ್ನು ಮರೆತು, ಹರ್ಷವನ್ನು ತಾಳಬೇಕು. ಎಲ್ಲವನ್ನೂ ನೋಡಿ ಸಂತೋಷದಿಂದ, 'ಭಗವಂತನೇ, ನಿತ್ಯವೂ ಇಷ್ಟುರವುಟ್ಟಿಗೆ ನನಗೆ ಅನ್ನ ಸಿಗಲಿ' ಎಂದು ಪ್ರಾರ್ಥಿಸಬೇಕು.

**ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಮ್ ।**
**ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥ ೨೭**

(ದೇಹಧಾರಣೆ ಪೋಷಣೆಗೆ ಆವಶ್ಯಕವಾದಷ್ಟಕ್ಕಿಂತ ಹೆಚ್ಚಾಗಿ) ಅತಿಭೋಜನಮಾಡುವುದರಿಂದ ಆರೋಗ್ಯ ಕೆಡುವುದು, ಮರಣವೂ ಸಂಭವಿಸಬಹುದು; ಯಜ್ಞಾದಿಕರ್ಮಗಳನ್ನು ಮಾಡುವ ಅವಕಾಶ ತಪ್ಪಿ ಸ್ವರ್ಗಾದಿ ಪುಣ್ಯಲೋಕಗಳನ್ನು ಕಳೆದುಕೊಳ್ಳಬಹುದು; ಈ ಲೋಕದ ಜನರಿಗೆ ಹಾಸ್ಯಾಸ್ಪದನಾಗಿ ಅವರಿಂದ ನಿಂದಿತನಾಗಬಹುದು. ಆದುದರಿಂದ ಅತಿಭೋಜನವನ್ನು ಬಿಡಬೇಕು.

**ಕೇಶಾಂತಃ ಷೋಡಶೇ ವರ್ಷೇ ಬ್ರಾಹ್ಮಣಸ್ಯ ವಿಧೀಯತೇ ।**
**ರಾಜನ್ಯಬಂಧೋರ್ದ್ವಾವಿಂಶೇ ವೈಶ್ಯಸ್ಯ ದ್ವ್ಯಧಿಕೇ ತತಃ ॥ ೨೮**

ಗೋದಾನವೆಂಬ ಕೇಶಖಂಡನ ಸಂಸ್ಕಾರವನ್ನು ಬ್ರಾಹ್ಮಣನಿಗೆ ಹದಿನಾರನೆಯ ವರ್ಷದಲ್ಲಿಯೂ, ಕ್ಷತ್ರಿಯನಿಗೆ ಇಪ್ಪತ್ತೆರಡನೆಯ ವಯಸ್ಸಿನಲ್ಲಿಯೂ, ವೈಶ್ಯನಿಗೆ ಇಪ್ಪತ್ತನಾಲ್ಕನೆಯ ವರ್ಷದಲ್ಲಿಯೂ ಮಾಡಬೇಕು.

(ಇವು ಉಪನಯನಕ್ಕಾಗಿ ಹೇಳಿದ ಪರಮಾವಧಿ ವಯಸ್ಸುಗಳು.)

**ಅಮಂತ್ರಿಕಾ ತು ಕಾರ್ಯೇಯಂ ಸ್ತ್ರೀಣಾಮಾವೃದಶೇಷತಃ ।**
**ಸಂಸ್ಕಾರಾರ್ಥಂ ಶರೀರಸ್ಯ ಯಥಾಕಾಲಂ ಯಥಾಕ್ರಮಮ್ ॥ ೨೯**

ಮೇಲೆ ಹೇಳಿದ ಜಾತಕರ್ಮಾದಿ ಕ್ರಿಯಾಕಲಾಪಗಳನ್ನೆಲ್ಲ ಹೆಣ್ಣು ಮಕ್ಕಳ ದೇಹಸಂಸ್ಕಾರಕ್ಕಾಗಿ, ಆಯಾಕಾಲಗಳಲ್ಲಿ ಕ್ರಮವಾಗಿಯೇ ಮಾಡ ತಕ್ಕದ್ದು. ಆದರೆ ಅವು ಅಮಂತ್ರಕವಾಗಿ ನಡೆಯಬೇಕು.

(ಮಂತ್ರವಿಲ್ಲದೆ ಜೇನುತುಪ್ಪ ತಿನ್ನಿಸುವುದು, ಹೆಸರಿಡುವುದು, ಅನ್ನಪ್ರಾಶನ, ಇತ್ಯಾದಿ.)

**ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ ।**
**ಪತಿಸೇವಾ ಗುರೌ ವಾಸೋ ಗೃಹಾರ್ಥೋಽಗ್ನಿಪರಿಕ್ರಿಯಾ ॥ ೩೦**

ವೈದಿಕಸಂಸ್ಕಾರವೆಂಬ ಉಪನಯನವು ಸ್ತ್ರೀಯರಿಗೆ ವಿವಾಹದಿಂದಲೇ ಆಗುವುದು. ಪತಿಸೇವೆಯೇ ಅವರಿಗೆ ಗುರುಕುಲವಾಸ; ಗೃಹಕೃತ್ಯವೇ (ಅಡಿಗೆ ಮುಂತಾದುವು) ಅವರಿಗೆ ಪ್ರಾತಃ ಮತ್ತು ಸಾಯಂಕಾಲದ ಅಗ್ನಿ ಕಾರ್ಯ. (ಹೀಗೆ ವಿವಾಹವು ಸ್ತ್ರೀಯರಿಗೆ ಉಪನಯನಸ್ಥಾನದಲ್ಲಿರುವುದ ರಿಂದ ಅವರಿಗೆ ಉಪನಯನ ಮಾಡಬೇಕಾಗಿಲ್ಲ.)

(ಉಪನಯನಸಂಸ್ಕಾರದಿಂದ ದ್ವಿಜತ್ವವನ್ನು ಪಡೆದವನ ಕರ್ಮವನ್ನು ಮುಂದೆ ಹೇಳಿದೆ.)

**ಉಪನೀಯ ಗುರುಃ ಶಿಷ್ಯಂ ಶಿಕ್ಷಯೇಚ್ಛೌಚಮಾದಿತಃ ।**
**ಆಚಾರಮಗ್ನಿಕಾರ್ಯಂ ಚ ಸಂಧ್ಯೋಪಾಸನಮೇವ ಚ ॥ ೩೧**

ಶಿಷ್ಯನ ಉಪನಯನವಾದಮೇಲೆ ಮೊದಲು ಶೌಚವನ್ನು, ಎಂದರೆ ಮಲಮೂತ್ರವಿಸರ್ಜನೆಯಿಂದ ಅಶುದ್ಧವಾದ ದೇಹವನ್ನು ಮಣ್ಣು ಮತ್ತು ನೀರಿನಿಂದ ಶುದ್ಧಿಮಾಡಿಕೊಳ್ಳುವ ರೀತಿಯನ್ನು ಗುರುವು ಕಲಿಸಬೇಕು. ಆಮೇಲೆ ಸ್ನಾನ-ಆಚಮನಾದಿ ಆಚಾರಗಳು, ಅಗ್ನಿಕಾರ್ಯ, ಸಂಧ್ಯಾವಂದನೆ ಮುಂತಾದ ಕರ್ಮಗಳನ್ನು ಅವನಿಗೆ ಕಲಿಸಬೇಕು.

**ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।**
**ಸಂಯಮೇ ಯತ್ನಮಾತಿಷ್ಠೇದ್ವಿದ್ವಾನ್ಯಂತೇವ ವಾಜಿನಾಮ್ ॥ ೩೨**

ತನಗೆ ಹಾನಿಯನ್ನು ಉಂಟುಮಾಡುವ ವಿಷಯೋಪಭೋಗಗಳಲ್ಲಿ ಸಂಚರಿಸುವ ಇಂದ್ರಿಯಗಳನ್ನು ತಡೆಹಿಡಿಯಲು, ವಿದ್ಯಾವಂತನಾದವನು ಕುದುರೆಗಳನ್ನು ವಶದಲ್ಲಿಟ್ಟುಕೊಳ್ಳುವ ಸಾರಥಿಯಂತೆ ಪ್ರಯತ್ನಮಾಡಬೇಕು.

**ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ ।**
**ಪಾಯೂಪಸ್ಥಂ ಹಸ್ತಪಾದಂ ವಾಕ್ಚೈವ ದಶಮೀ ಸ್ಮೃತಾ ॥** ೩೩
**ಬುದ್ಧೀಂದ್ರಿಯಾಣಿ ಪಂಚೈಷಾಂ ಶ್ರೋತ್ರಾದೀನ್ಯನುಪೂರ್ವಶಃ ।**
**ಕರ್ಮೇಂದ್ರಿಯಾಣಿ ಪಂಚೈಷಾಂ ಪಾಯ್ವಾದೀನಿ ಪ್ರಚಕ್ಷತೇ ॥** ೩೪

ಕಿವಿ, ಚರ್ಮ, ಕಣ್ಣುಗಳು, ನಾಲಗೆ, ಮೂಗು, ಈ ಐದು ಇಂದ್ರಿಯಗಳು ಒಂದು ಗುಂಪು. ಇವನ್ನು ಬುದ್ಧೀಂದ್ರಿಯಗಳೆಂದು ಕರೆಯುತ್ತಾರೆ (ಇವುಗಳ ಸಹಾಯದಿಂದ ಬಾಹ್ಯಪ್ರಪಂಚದ ಅರಿವು ಆಗುತ್ತದೆ). ಮಲಮೂತ್ರ ವಿಸರ್ಜನಾಂಗಗಳು, ಕೈಕಾಲುಗಳು ಮತ್ತು ವಾಕ್ (ಮಾತು), ಈ ಐದೂ ಕರ್ಮೇಂದ್ರಿಯಗಳು (ಪ್ರಾಣಿಯು ಚಲನಾದಿ ಕಾರ್ಯಗಳನ್ನು ಮಾಡಲು ಇವು ಸಹಕಾರಿಯಾಗಿವೆ).

**ಏಕಾದಶಂ ಮನೋ ಜ್ಞೇಯಂ ಸ್ವಗುಣೇನೋಭಯಾತ್ಮಕಮ್ ।**
**ಯಸ್ಮಿನ್ ಜಿತೇ ಜಿತಾವೇತೌ ಭವತಃ ಪಂಚಕೌ ಗಣೌ ॥** ೩೫

ಮನಸ್ಸೆಂಬ ಅಂತರಿಂದ್ರಿಯವು ಹನ್ನೊಂದನೆಯದು. ಇದು ಬುದ್ಧೀಂದ್ರಿಯ ಕರ್ಮೇಂದ್ರಿಯಗಳೆರಡರ ಗುಣಗಳನ್ನೂ ಉಳ್ಳದುದು. ಇದನ್ನು ಗೆದ್ದರೆ (ವಶದಲ್ಲಿಟ್ಟುಕೊಂಡರೆ), ಮೇಲೆ ಹೇಳಿದ ಐದೈದು ಇಂದ್ರಿಯಗಳ ಎರಡು ಗುಂಪುಗಳನ್ನೂ ಜಯಿಸಿದಂತೆಯೇ ಆಗುವುದು.

**ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಮ್ ।**
**ಸಂನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ನಿಯಚ್ಛತಿ ॥** ೩೬

ಇಂದ್ರಿಯಗಳಲ್ಲಿ ಆಸಕ್ತಿಹೊಂದುವುದರಿಂದ ದೃಷ್ಟಾದೃಷ್ಟದೋಷ ಗಳನ್ನು ಮನುಷ್ಯನು ಹೊಂದುತ್ತಾನೆ. ಅವುಗಳನ್ನೇ ಅಂಕೆಯಲ್ಲಿಟ್ಟು ಕೊಳ್ಳುವುದರಿಂದ ಮೋಕ್ಷಾದಿ ಪುರುಷಾರ್ಥಸಿದ್ಧಿಯನ್ನು ಪಡೆಯುತ್ತಾನೆ.

**ವಶೇ ಕೃತ್ವೇಂದ್ರಿಯಗ್ರಾಮಂ ಸಂಯಮ್ಯ ಚ ಮನಸ್ತಥಾ ।**
**ಸರ್ವಾನ್ ಸಂಸಾಧಯೇದರ್ಥಾನಕ್ಷಿಣ್ವನ್ಯೋಗತಸ್ತನುಮ್ ॥** ೩೭

ಇಂದ್ರಿಯಸಮೂಹವನ್ನು ವಶಪಡಿಸಿಕೊಂಡು, ಮನಸ್ಸನ್ನು ಅಂಕೆ ಯಲ್ಲಿ ತಡೆಹಿಡಿದು, ಶರೀರವನ್ನು ಹಿಂಸೆಗೆ ಒಳಪಡಿಸದೆ, ಉಪಾಯದಿಂದ ಎಲ್ಲ ಪುರುಷಾರ್ಥಗಳನ್ನೂ ಸಾಧಿಸಿಕೊಳ್ಳಬೇಕು.

(ಉದಾಹರಣೆಗೆ, ರುಚಿರುಚಿಯಾದ ಮಸಾಲೆಗಳಿಂದ ಕೂಡಿದ ಅನ್ನವನ್ನು ತಿನ್ನುತ್ತಿದ್ದವನು ಅದನ್ನು ಒಮ್ಮೆಲೇ ಬಿಡದೆ ಕ್ರಮಕ್ರಮವಾಗಿ ಬಿಟ್ಟು, ನಾಲಗೆಯನ್ನು ವಶದಲ್ಲಿಟ್ಟುಕೊಳ್ಳಬೇಕು.)

**ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ಸಾವಿತ್ರೀಮಾರ್ಕದರ್ಶನಾತ್ ।**
**ಪಶ್ಚಿಮಾಂ ತು ಸಮಾಸೀನಃ ಸಮ್ಯಗೃಕ್ಷವಿಭಾವನಾತ್ ॥ ೩೮**

ಪ್ರಾತಃಸಂಧ್ಯೋಪಾಸನೆ ಮಾಡುವವನು ಸೂರ್ಯದರ್ಶನವಾಗುವ ವರೆಗೆ ಗಾಯತ್ರೀ ಮಂತ್ರವನ್ನು ಜಪಿಸುತ್ತಾ (ಒಂದೇ ಸ್ಥಳದಲ್ಲಿ) ನಿಂತಿರಬೇಕು. ಸಾಯಂಸಂಧ್ಯಾವಂದನೆ ಮಾಡುವಾಗ ನಕ್ಷತ್ರಗಳು ಸ್ಪಷ್ಟವಾಗಿ ಕಾಣುವವರೆಗೆ ಜಪಿಸುತ್ತಾ ಕುಳಿತಿರಬೇಕು.

(ಬೆಳಗ್ಗೆ ಸೂರ್ಯೋದಯಕ್ಕೆ ಮೊದಲೇ ಸಂಧ್ಯಾವಂದನೆಯನ್ನು ಪ್ರಾರಂಭಿಸಿ, ಸೂರ್ಯನು ಹುಟ್ಟುವವರೆಗೆ ಗಾಯತ್ರೀಜಪ ಮಾಡುತ್ತಿರಬೇಕು. ಸಂಜೆ ಸೂರ್ಯನು ಮುಳುಗುವುದಕ್ಕೆ ಮೊದಲೇ ಪ್ರಾರಂಭಿಸಿ ಸೂರ್ಯಾಸ್ತವಾದಮೇಲೆ ನಕ್ಷತ್ರಗಳು ಕಾಣಿಸುವವರೆಗೆ ಗಾಯತ್ರೀಮಂತ್ರವನ್ನು ಜಪಿಸಬೇಕು.)

**ಅಗ್ನೀಂಧನಂ ಭೈಕ್ಷಚರ್ಯಾಮಧಃಶಯ್ಯಾಂ ಗುರೋರ್ಹಿತಮ್ ।**
**ಆಸಮಾವರ್ತನಾತ್ಕುರ್ಯಾತ್ಕೃತೋಪನಯನೋ ದ್ವಿಜಃ ॥ ೩೯**

ಉಪನೀತನಾದ ಬ್ರಹ್ಮಚಾರಿಯು ಸಂಧ್ಯಾಕಾಲಗಳ ಅಗ್ನಿಕಾರ್ಯವನ್ನೂ, ಭಿಕ್ಷಾವೃತ್ತಿಯನ್ನೂ, ಮಂಚ ಮೊದಲಾದವುಗಳನ್ನು ಬಿಟ್ಟು ನೆಲದಮೇಲೆ ಮಲಗುವುದನ್ನೂ, ಗುರುಗಳ ಆಚಾರಕ್ಕೆ ಬೇಕಾದ ಬಟ್ಟೆಗಳನ್ನು ಶುಚಿಮಾಡುವುದು ನೀರು ತಂದು ತುಂಬಿಸುವುದು ಮೊದಲಾದ ಸೇವೆಯನ್ನೂ, ಗುರುಕುಲವಾಸ ಮುಗಿದು ಸಮಾವರ್ತನವೆಂಬ ಸಂಸ್ಕಾರವನ್ನು ಹೊಂದುವವರೆಗೆ ಮಾಡುತ್ತಿರಬೇಕು.

**ಆಚಾರ್ಯಪುತ್ರಃ ಶುಶ್ರೂಷುರ್ಜ್ಞಾನದೋ ಧಾರ್ಮಿಕಃ ಶುಚಿಃ ।**
**ಆಪ್ತಃ ಶಕ್ತೋಽರ್ಥದಃ ಸಾಧುಃ ಸ್ವೋಽಧ್ಯಾಪ್ಯಾ ದಶ ಧರ್ಮತಃ ॥**

ಮುಂದೆ ಹೇಳುವ ಹತ್ತು ವಿಧ ಶಿಷ್ಯರಿಗೆ ಅಧ್ಯಾಪನಮಾಡಿಸುವುದು (ವೇದ ಕಲಿಸುವುದು) ಧರ್ಮಕ್ಕೆ ಅನುಗುಣವಾದ ಕಾರ್ಯ; ತನ್ನ

ಗುರುವಿನ ಮಗ, ತನ್ನ ಸೇವೆಮಾಡುತ್ತಾ ಕಲಿಯಬೇಕೆಂದು ಬಂದಿರುವವ, ತನಗೊಂದು ವಿದ್ಯೆಯನ್ನು ಕಲಿಸಿ ತನ್ನಿಂದ ಮತ್ತೊಂದು ವಿದ್ಯೆಯನ್ನು ಕಲಿಯಬೇಕೆಂದಿರುವವ, ಧರ್ಮವನ್ನು ತಿಳಿದು ನಡೆಯುವವ, ಶೌಚದ ನಿಯಮಗಳನ್ನು ಪಾಲಿಸುವವ, ಆಪ್ತನಾದವ, ತಿಳಿಸಿದುದನ್ನು ಗ್ರಹಿಸಲು ಸಮರ್ಥನಾದವ, ಹಣವನ್ನು ಕೊಡುವವ, ಹಿತವನ್ನು ಬಯಸುವವ, ತನ್ನ ಸಂಬಂಧಿಯಾದವ.

(ಇವು ಹಿಂದಿನ ಕಾಲದಲ್ಲಿ ಗುರುಕುಲಪ್ರವೇಶ ದೊರೆಯಲು ಶಿಷ್ಯನಿಗೆ ಇರಬೇಕಾಗಿದ್ದ ಗುಣಗಳು.)

**ನಾಪೃಷ್ಟಃ ಕಸ್ಯ ಚಿದ್ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ ।**
**ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥** ೪೧

ತಾನಾಗಿ ಪ್ರಶ್ನೆ ಕೇಳದವನಿಗೆ ಹೇಳಬಾರದು. (ಇದು ಏನೂ ತಿಳಿಯದ ಅಥವಾ ಹೆಚ್ಚಿಗೆ ತಿಳಿದವರೊಡನೆ ವ್ಯವಹಾರಮಾಡುವಾಗ; ಶಿಷ್ಯನನ್ನಾಗಿ ಅಂಗೀಕರಿಸಿದವನ ವಿಷಯದಲ್ಲಿ ಅನ್ವಯಿಸುವುದಿಲ್ಲ.) ಭಕ್ತಿ ಶ್ರದ್ಧಾದಿಗಳಿಲ್ಲದೆ ನೀತಿಯನ್ನು ಬಿಟ್ಟು ಕೇಳುವವನಿಗೂ ಹೇಳಬಾರದು. ಅಂಥವರ ವಿಷಯದಲ್ಲಿ ಬುದ್ಧಿವಂತನಾದವನು ತನಗೆ ತಿಳಿದಿದ್ದರೂ ಜಡನಂತೆ ನಟಿಸಬೇಕು (ಮೂಕನಾಗಿರಬೇಕು).

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।**
**ಚತ್ವಾರಿ ತಸ್ಯ ವರ್ಧಂತೇ ಆಯುರ್ವಿದ್ಯಾ ಯಶೋ ಬಲಮ್ ॥** ೪೨

ಹಿರಿಯರಿಗೆ ನಮಸ್ಕಾರಮಾಡುತ್ತಾ, ಸದಾ ಹಿರಿಯರ ಸೇವೆಮಾಡುವವನಿಗೆ ಆಯುಸ್ಸು, ವಿದ್ಯೆ, ಕೀರ್ತಿ, ಶಕ್ತಿ ಈ ನಾಲ್ಕೂ ಹೆಚ್ಚುತ್ತಾ ಹೋಗುತ್ತವೆ.

**ಯೋ ನ ವೇತ್ತ್ಯಭಿವಾದಸ್ಯ ವಿಪ್ರಃ ಪ್ರತ್ಯಭಿವಾದನಮ್ ।**
**ನಾಭಿವಾದ್ಯಃ ಸ ವಿದುಷಾ ಯಥಾ ಶೂದ್ರಸ್ತಥೈವ ಸಃ ॥** ೪೩

ಅಭಿವಂದನೆಮಾಡಿದವನಿಗೆ ಕ್ರಮವರಿತು ಪ್ರತ್ಯಭಿವಾದನೆ ಮಾಡಲು ಯಾವ ಬ್ರಾಹ್ಮಣನಿಗೆ ತಿಳಿಯದೋ, ಅವನು ಶೂದ್ರನಂತೆಯೇ ಸರಿ; ಅಂಥವನಿಗೆ ವಿದ್ವಾಂಸನು ಅಭಿವಾದನೆಯನ್ನು ಸಲ್ಲಿಸಬಾರದು.

**ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।**
**ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಮ್ ॥ ೪೪**

ನ್ಯಾಯಾರ್ಜಿತವಾದ ಹಣ, ಚಿಕ್ಕಪ್ಪ, ಸೋದರಮಾವ ಮೊದಲಾದವರ ನೆಂಟತನ, ಹಿರಿಯ ವಯಸ್ಸು, ಶ್ರೌತಸ್ಮಾರ್ತಕರ್ಮಾನುಷ್ಠಾನ, ವೇದ ವೇದಾಂಗಾದಿ ವಿದ್ಯಾರ್ಜನೆ, ಇವು ಸನ್ಮಾನಕ್ಕೆ ತಕ್ಕ ಪಾತ್ರಗಳು. ಇವುಗಳಲ್ಲಿ ಮುಂದೆ ಮುಂದೆ ಹೇಳಿರುವುವು ಹಿಂದೆ ಹೇಳಿರುವುವುಗಳಿಗಿಂತ ಶ್ರೇಷ್ಠ ವಾದವು.

(ಬರೇ ಹಣವಂತನಿಗಿಂತ ವಯೋವೃದ್ಧನಿಗೆ ಹೆಚ್ಚು ಗೌರವ ಕೊಡ ಬೇಕು, ಕರ್ಮನಿಷ್ಠನು ನೆಂಟನಿಗಿಂತ ಶ್ರೇಷ್ಠ, ಎಲ್ಲರಿಗಿಂತ ವಿದ್ಯಾವಂತನು ಪೂಜ್ಯತಮ, ಇತ್ಯಾದಿ.)

**ಬ್ರಾಹ್ಮಸ್ಯ ಜನ್ಮನಃ ಕರ್ತಾ ಸ್ವಧರ್ಮಸ್ಯ ಚ ಶಾಸಿತಾ ।**
**ಬಾಲೋಽಪಿ ವಿಪ್ರೋ ವೃದ್ಧಸ್ಯ ಪಿತಾ ಭವತಿ ಧರ್ಮತಃ ॥ ೪೫**

ಯಾವನು ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಡಬಲ್ಲ ದ್ವಿಜತ್ವವನ್ನು ಒದಗಿಸುತ್ತಾನೆಯೋ, ಯಾವನು ತನ್ನ ಧರ್ಮವನ್ನು ತಿಳಿಸಿ ವೇದಾರ್ಥ ವನ್ನು ಹೇಳುತ್ತಾನೆಯೋ ಅಂಥವನು ಬಾಲಕನಾಗಿದ್ದರೂ, ವಯಸ್ಸಿನಿಂದ ಹಿರಿಯನಾದ ಶಿಷ್ಯನಿಗೆ ಧರ್ಮರೀತಿಯಿಂದ ತಂದೆಯೇ ಆಗುತ್ತಾನೆ.

**ಅಧ್ಯಾಪಯಾಮಾಸ ಪಿತೄನ್ ಶಿಶುರಾಂಗಿರಸಃ ಕವಿಃ ।**
**ಪುತ್ರಕಾ ಇತಿ ಹೋವಾಚ ಜ್ಞಾನೇನ ಪರಿಗೃಹ್ಯ ತಾನ್ ॥ ೪೬**

ಹಿಂದೆ ಒಂದು ಕಾಲದಲ್ಲಿ ಅಂಗಿರಸ್ ಋಷಿಯ ಮಗನಾದ ಕವಿಯೆಂಬ ಬಾಲಕನೊಬ್ಬನು ತನ್ನ ಚಿಕ್ಕಪ್ಪಂದಿರನ್ನು ವಿದ್ಯಾದಾನಕ್ಕಾಗಿ ಶಿಷ್ಯರನ್ನಾಗಿ ಸ್ವೀಕರಿಸಿ, ಅವರನ್ನು ಕುರಿತು, " ಮಕ್ಕಳೇ " ಎಂದು ಸಂಬೋಧಿಸುತ್ತಿದ್ದನು.

**ತೇ ತಮರ್ಥಮಪೃಚ್ಛಂತ ದೇವಾನಾಗತಮನ್ಯವಃ ।**
**ದೇವಾಶ್ಚೈತಾನ್ ಸಮೇತ್ಯೋಚುರ್ನ್ಯಾಯ್ಯಂ ವಃ ಶಿಶುರುಕ್ತವಾನ್॥**

ಆ ಹಿರಿಯರಿಗೆ ಕೋಪ ಬಂದು, " ನಾವು ಇವನಲ್ಲಿ ವಿದ್ಯೆ ಕಲಿಯುತ್ತಿದ್ದ ಮಾತ್ರಕ್ಕೆ ಇವನು ನಮ್ಮನ್ನು 'ಮಕ್ಕಳೇ' ಎಂದು ಕರೆಯಬಹುದೇ ? " ಎಂದು ದೇವತೆಗಳನ್ನು ಕೇಳಿದರು. ಆ ಶಿಷ್ಯರನ್ನು ಒಟ್ಟುಗೂಡಿಸಿ ದೇವತೆಗಳು

*

ಹೇಳಿದರು: "ಆ ಶಿಶುವು ನಿಮ್ಮನ್ನು ಕುರಿತು ಆಡಿದುದು ನ್ಯಾಯಸಮ್ಮತವೇ ಆಗಿದೆ. ತಿಳಿಯದವನು ಬಾಲಕನೇ ಆಗಿರುತ್ತಾನೆ; ಮಂತ್ರೋಪದೇಶ ಮಾಡಿದವನು ತಂದೆಯೇ. ಪೂರ್ವಿಕರೂ ಅಜ್ಞನನ್ನು ಬಾಲಕನೆಂದೂ, ಮಂತ್ರಗಳನ್ನು ಹೇಳಿಕೊಟ್ಟವನನ್ನು ತಂದೆಯೆಂದೂ ಕರೆದಿದ್ದಾರೆ."

**ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬಂಧುಭಿಃ ।**
**ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್॥**

ವಯಸ್ಸಿನ ವರ್ಷಗಳಿಂದಾಗಲಿ, ನರೆತ ಕೂದಲುಗಳಿಂದಾಗಲಿ, ಗಳಿಸಿದ ಹಣದಿಂದಾಗಲಿ, ಬಹುವಿಧ ನೆಂಟರು ಇರುವುದರಿಂದಾಗಲಿ, ಯಾರಿಗೂ ಮಹತ್ವ ಬರುವುದಿಲ್ಲ. ಯಾರು ಸಾಂಗವಾಗಿ ವೇದಾಧ್ಯಯನವನ್ನು ಮಾಡಿರುತ್ತಾರೋ ಅವರು ನಮಗೆ ದೊಡ್ಡವರು ಎಂದು ಋಷಿಗಳು ಧರ್ಮವನ್ನು ಮಾಡಿದ್ದಾರೆ.

**ವಿಪ್ರಾಣಾಂ ಜ್ಞಾನತೋ ಜ್ಯೈಷ್ಠ್ಯಂ ಕ್ಷತ್ರಿಯಾಣಾಂ ತು ವೀರ್ಯತಃ**
**ವೈಶ್ಯಾನಾಂ ಧಾನ್ಯಧನತಃ ಶೂದ್ರಾಣಾಮೇವ ಜನ್ಮತಃ ॥ ೪೯**

ಬ್ರಾಹ್ಮಣರಿಗೆ ಜ್ಞಾನದಿಂದಲೇ ಹಿರಿಮೆ; ಕ್ಷತ್ರಿಯರಿಗೆ ಬಲದಿಂದ, ವೈಶ್ಯರಿಗೆ ಧನಧಾನ್ಯ ಸಮೃದ್ಧಿಯಿಂದ ಮತ್ತು ಶೂದ್ರರಿಗೆ ಮಾತ್ರ ಜನ್ಮದಿಂದಲೇ (ವಯಸ್ಸಿನಿಂದಲೇ) ಶ್ರೇಷ್ಠತ್ವ.

**ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋಽನುಶಾಸನಮ್ ।**
**ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ॥ ೫೦**

ಧರ್ಮಬುದ್ಧಿಯುಳ್ಳ ಗುರುವು ಶಿಷ್ಯನ ಶ್ರೇಯಸ್ಸಿಗಾಗಿ ಶಿಕ್ಷಣ ಕೊಡುವಾಗ ಅಹಿಂಸೆಯಿಂದಲೇ ಕೆಲಸಮಾಡಬೇಕು (ದೇಹಕ್ಕೆ ಅಪಾಯವಾಗುವ ರೀತಿಯಲ್ಲಿ ದಂಡಿಸಬಾರದು.) ಅವನನ್ನು ಕುರಿತು ಮಾತನಾಡುವಾಗ ನಯವಾಗಿ, ಪ್ರೀತಿಯಿಂದ ಕೂಡಿದ ನುಡಿಗಳನ್ನು ಪ್ರಯೋಗಿಸಬೇಕು.

**ಸೇವೇತೇಮಾಂಸ್ತು ನಿಯಮಾನ್ ಬ್ರಹ್ಮಚಾರೀ ಗುರೌ ವಸನ್ ।**
**ಸಂನಿಯಮ್ಯೇಂದ್ರಿಯಗ್ರಾಮಂ ತಪೋವೃದ್ಧ್ಯರ್ಥಮಾತ್ಮನಃ ॥ ೫೧**

ಗುರುಕುಲವಾಸಮಾಡುತ್ತಿರುವ ಬ್ರಹ್ಮಚಾರಿಯು ತನ್ನ ತಪಸ್ಸನ್ನು

ಹೆಚ್ಚಿಸಿಕೊಳ್ಳುವುದಕ್ಕಾಗಿ ಇಂದ್ರಿಯನಿಗ್ರಹ ಮಾಡಿಕೊಂಡು, ಮುಂದೆ ಹೇಳುವ ನಿಯಮಗಳನ್ನು ಪಾಲಿಸಬೇಕು.

**ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿಪಿತೃತರ್ಪಣಮ್ ।**
**ದೇವತಾಭ್ಯರ್ಚನಂ ಚೈವ ಸಮಿದಾಧಾನಮೇವ ಚ ॥ ೫೨**

ಪ್ರತಿದಿನ ಸ್ನಾನಮಾಡಿ, ಶುಚಿಯಾಗಿ, ದೇವತಾಪೂಜೆ, ಸಮಿತ್ತಿನಿಂದ ಹೋಮ, ದೇವರ್ಷಿಪಿತೃತರ್ಪಣ ಇವನ್ನು ಮಾಡಬೇಕು.

**ವರ್ಜಯೇನ್ಮಧು ಮಾಂಸಂ ಚ ಗಂಧಂ ಮಾಲ್ಯಂ ರಸಾನ್ ಸ್ತ್ರಿಯಃ ।**
**ಶುಕ್ತಾನಿ ಯಾನಿ ಸರ್ವಾಣಿ ಪ್ರಾಣಿನಾಂ ಚೈವ ಹಿಂಸನಮ್ ॥ ೫೩**
**ಅಭ್ಯಂಗಮಂಜನಂ ಚಾಕ್ಷ್ಣೋರುಪಾನಚ್ಛತ್ರಧಾರಣಮ್ ।**
**ಕಾಮಂ ಕ್ರೋಧಂ ಚ ಲೋಭಂ ಚ ನರ್ತನಂ ಗೀತವಾದನಮ್ ॥**
**ದ್ಯೂತಂ ಚ ಜನವಾದಂ ಚ ಪರಿವಾದಂ ತಥಾಽನೃತಮ್ ।**
**ಸ್ತ್ರೀಣಾಂ ಚ ಪ್ರೇಕ್ಷಣಾಲಂಭಮುಪಘಾತಂ ಪರಸ್ಯ ಚ ॥ ೫೫**

ಮದ್ಯಮಾಂಸಗಳನ್ನು ಬಿಡಬೇಕು; ಗಂಧ, ಮಾಲ್ಯ, ಉದ್ರೇಕಗೊಳ್ಳುವ ರಸಗಳು, ಸ್ತ್ರೀಸಂಗ ಇವನ್ನೆಲ್ಲ ತ್ಯಜಿಸಬೇಕು; ಮಧುರವಾದ ರಸಗಳು ಕಾಲಕ್ರಮದಲ್ಲಿ ಹುಳಿಯಾಗುವುದಾದರೆ (ಅವಕ್ಕೆ ಶುಕ್ತವೆಂದು ಹೆಸರು) ಅಂತಹವನ್ನು ಸೇವಿಸಬಾರದು; ಪ್ರಾಣಿಹಿಂಸೆಯನ್ನು ಮಾಡಬಾರದು. ತೈಲಾಭ್ಯಂಗ, ಕಣ್ಣಿಗೆ ಕಾಡಿಗೆ, ಪಾದರಕ್ಷೆ, ಛತ್ರಿ ಇವನ್ನು ಬಿಡಬೇಕು; ಕಾಮ ಕ್ರೋಧ ಲೋಭಗಳನ್ನು ದೂರವಿಡಬೇಕು; ನರ್ತನ, ಗೀತ, ವಾದನಗಳಿಗೆ ಮನಸ್ಸು ಕೊಡಬಾರದು; ದ್ಯೂತ, ಜನರೊಡನೆ ವೃಥಾ ಕಲಹ, ಪರನಿಂದೆ, ಸುಳ್ಳು ಹೇಳುವುದು, ಇವು ವರ್ಜನೀಯಗಳು. ಕಾಮದೃಷ್ಟಿಯಿಂದ ಸ್ತ್ರೀಯರನ್ನು ನೋಡಬಾರದು, ಆಲಿಂಗಿಸಬಾರದು. ಪರರಿಗೆ ಕೇಡುಮಾಡಬಾರದು.

**ಹೀನಾನ್ನವಸ್ತ್ರವೇಷಃ ಸ್ಯಾತ್ಸರ್ವದಾ ಗುರುಸಂನಿಧೌ ।**
**ಉತ್ತಿಷ್ಠೇತ್ಪ್ರಥಮಂ ಚಾಸ್ಯ ಚರಮಂ ಚೈವ ಸಂವಿಶೇತ್ ॥ ೫೬**

ಗುರುಗಳ ಸಮೀಪದಲ್ಲಿರುವಾಗ ಅವರಿಗಿಂತ ಕಡಿಮೆಯಾದ ಆಹಾರ,

ವಸ್ತ್ರ, ವೇಷಭೂಷಣಗಳನ್ನು ಪಡೆದಿರಬೇಕು. ಅವರಿಗಿಂತ ಮೊದಲೇ ಏಳಬೇಕು. ಅವರು ಮಲಗಿದಮೇಲೆ ತಾನು ಮಲಗಬೇಕು.

**ಪ್ರತಿಶ್ರವಣಸಂಭಾಷೇ ಶಯಾನೋ ನ ಸಮಾಚರೇತ್ ।**
**ನಾಸೀನೋ ನ ಚ ಭುಂಜಾನೋ ನ ತಿಷ್ಠನ್ನ ಪರಾಙ್ಮುಖಃ ॥ ೫೭**

ಮಲಗಿ, ಕುಳಿತು, ಊಟಮಾಡುತ್ತಾ ನಿಂತಲ್ಲೇ ನಿಂತುಕೊಂಡು ಅಥವಾ ಬೆನ್ನು ತಿರುಗಿಸಿಯೇ ಆಗಲಿ ಗುರುವಿನ ಅಪ್ಪಣೆಯನ್ನು ಸ್ವೀಕರಿಸ ಬಾರದು, ಅವರೊಡನೆ ಸಂಭಾಷಣೆ ಮಾಡಬಾರದು.

**ಆಸೀನಸ್ಯ ಸ್ಥಿತಃ ಕುರ್ಯಾದಭಿಗಚ್ಛಂಸ್ತು ತಿಷ್ಠತಃ ।**
**ಪ್ರತ್ಯುದ್ಗಮ್ಯ ತ್ವಾವ್ರಜತಃ ಪಶ್ಚಾದ್ಧಾವಂಸ್ತು ಧಾವತಃ ॥ ೫೮**

ಗುರುಗಳು ಕುಳಿತಿದ್ದಾಗ ಶಿಷ್ಯನು ನಿಂತು ಮಾತನಾಡಬೇಕು. ಅವರು ನಿಂತಿದ್ದರೆ, ತಾನು ಒಂದೆರಡು ಹೆಜ್ಜೆಯಷ್ಟು ದೂರ ಅವರನ್ನು ಸಮೀಪಿಸಿ ಅವರು ಹೇಳುವುದನ್ನು ಕೇಳಿಕೊಳ್ಳಬೇಕು. ಅವರೇ ತನ್ನೆಡೆಗೆ ಬರುತ್ತಿದ್ದರೆ ತಾನೂ ಅವರಿಗೆ ಅಭಿಮುಖವಾಗಿ ನಡೆದು ಹೋಗಬೇಕು. (ಅವರು ಆತುರದಿಂದ) ಓಡುತ್ತಿದ್ದರೆ ಶಿಷ್ಯನು ಹಿಂಬಾಲಿಸಿ ಓಡುತ್ತಾ ಅವರ ಅಪ್ಪಣೆಯನ್ನು ಪಡೆಯಬೇಕು.

**ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।**
**ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ ೫೯**

ತಾಯಿ, ಸೋದರಿ ಅಥವಾ ಮಗಳು ಇವರೊಂದಿಗಾದರೂ ಏಕಾಂತ ಸ್ಥಾನದಲ್ಲಿ ಕೂಡಬಾರದು ; ಏಕೆಂದರೆ, ಪ್ರಬಲವಾದ ಇಂದ್ರಿಯಸಮೂಹಗಳು ವಿದ್ವಾಂಸನನ್ನೂ ಸೆಳೆದು ಪರವಶನನ್ನಾಗಿ ಮಾಡಬಲ್ಲವು.

**ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ ।**
**ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥ ೬೦**

ಗುದ್ದಲಿಯಿಂದ ಅವಿಶ್ರಾಂತವಾಗಿ ಅಗೆಯುವವನು ನೀರನ್ನು ಪಡೆಯು ವಂತೆ, ಭಕ್ತಿಯಿಂದ ಸೇವೆಮಾಡುವವನು ಗುರುಗಳಲ್ಲಿರುವ ವಿದ್ಯೆಯನ್ನು ಪಡೆಯುತ್ತಾನೆ.

**ಧರ್ಮಾರ್ಥಾವುಚ್ಯತೇ ಶ್ರೇಯಃ ಕಾಮಾರ್ಥೌ ಧರ್ಮ ಏವ ಚ ।**
**ಅರ್ಥ ಏವೇಹ ವಾ ಶ್ರೇಯಸ್ತ್ರಿವರ್ಗ ಇತಿ ತು ಸ್ಥಿತಿಃ ॥ ೬೧**

ಧರ್ಮ ಅರ್ಥಗಳನ್ನೇ ಶ್ರೇಯಸ್ಸಿಗೆ ಕಾರಣವೆಂದು ಕೆಲವರು ಹೇಳುವರು; ಏಕೆಂದರೆ, ಅವುಗಳಿಂದ ಕಾಮದ ಸಾಧನೆಯೂ ಆಗುತ್ತದೆ. ಅರ್ಥಕಾಮಗಳೇ ಶ್ರೇಯಸ್ಕರವೆಂದು ಕೆಲವರ ಮತ. ಧರ್ಮವೊಂದೇ ಶ್ರೇಯಃಸಾಧನ, ಅದರಿಂದ ಅರ್ಥ ಕಾಮಗಳು ತಾವಾಗಿ ಸಿದ್ಧಿಸುವುವು ಎಂದು ಕೆಲವರ ಅಭಿಪ್ರಾಯ. ಅರ್ಥವೊಂದನ್ನು ಸಾಧಿಸಿದರೆ ಅದರಿಂದಲೇ ಧರ್ಮಕಾಮಗಳನ್ನು ಸಾಧಿಸಿಕೊಳ್ಳಬಹುದೆಂದು ಕೆಲವರು ಹೇಳುವರು. ಆದರೆ, ಪರಸ್ಪರ ಅವಿರುದ್ಧವಾದ ಧರ್ಮಾರ್ಥಕಾಮಗಳೆಂಬ ತ್ರಿವರ್ಗವೇ ಪುರುಷಾರ್ಥಸಾಧನೆಗೆ ಕಾರಣವೆಂದು ನಮ್ಮ ನಿಶ್ಚಯ. (ಇದೇ ಲೋಕದಲ್ಲಿ ಬಾಳಬೇಕೆಂಬುವವರ ಗುರಿ; ಮೋಕ್ಷಕಾಮಿಗಳಾದವರಿಗೆ ಮೋಕ್ಷವೇ ಪರಮಪುರುಷಾರ್ಥ.)

**ಯಂ ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಮ್ ।**
**ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥ ೬೨**

ಗರ್ಭಾಧಾನ, ಶಿಶುಜನನ ಮತ್ತು ಅದರ ಪಾಲನಪೋಷಣೆಗಾಗಿ ತಾಯಿತಂದೆಗಳು ಯಾವ ಶ್ರಮವನ್ನು ಸಹಿಸುವರೋ, ಅದರ ಋಣವನ್ನು ಕಳೆಯಲು ನೂರಾರು ವರ್ಷಗಳಾದರೂ (ಜನ್ಮಾಂತರಗಳನ್ನು ಹೊಂದಿದರೂ) ಸಾಧ್ಯವಿಲ್ಲ.

**ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ ।**
**ತೇಷ್ವೇವ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥ ೬೩**

ಅಂತಹ ತಾಯಿತಂದೆಗಳಿಗೂ (ವಿದ್ಯಾದಾನಮಾಡಿ ಸುಸಂಸ್ಕೃತನನ್ನಾಗಿ ಮಾಡುವ) ಗುರುವಿಗೂ ಯಾವಾಗಲೂ ಸಂತೋಷವನ್ನು ಉಂಟುಮಾಡಬೇಕು. ಆ ಮೂವರೂ ಸಂತುಷ್ಟರಾದರೆ ಎಲ್ಲ ತಪಸ್ಸೂ ಪೂರ್ಣವಾಗುವುದು.

**ಪಿತಾ ವೈ ಗಾರ್ಹಪತ್ಯೋಽಗ್ನಿರ್ಮಾತಾಗ್ನಿರ್ದಕ್ಷಿಣಃ ಸ್ಮೃತಃ ।**
**ಗುರುರಾಹವನೀಯಸ್ತು ಸಾಗ್ನಿತ್ರೇತಾ ಗರೀಯಸೀ ॥ ೬೪**

(ಗೃಹಸ್ಥನು ಪೂಜಿಸುವ ಅಗ್ನಿಗಳಲ್ಲಿ ಗಾರ್ಹಪತ್ಯ, ದಕ್ಷಿಣ,

ಆಹವನೀಯ ಎಂದು ಮೂರು ಬಗೆಯುವು ಇವೆ.) ತಂದೆಯು ಗಾರ್ಹಪತ್ಯಾಗ್ನಿಯಂತೆಯೂ, ತಾಯಿಯು ದಕ್ಷಿಣಾಗ್ನಿಯಂತೆಯೂ, ಗುರುವು ಆಹವನೀಯಾಗ್ನಿಯಂತೆಯೂ ಇರುವುದರಿಂದ ಈ ಮೂರು ಅಗ್ನಿಗಳೂ ಶ್ರೇಷ್ಠವಾದುವು.

**ಶ್ರದ್ಧಧಾನಃ ಶುಭಾಂ ವಿದ್ಯಾಮಾದದೀತಾವರಾದಪಿ ।**
**ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥ ೬೫**

ತನಗಿಂತ ಕಡಿಮೆಯ ಜಾತಿಯವನಿಂದಲಾದರೂ ಲೋಕೋಪಕಾರಿಯಾದ ವಿದ್ಯೆಯನ್ನು ಶ್ರದ್ಧೆಯಿಟ್ಟು ಕಲಿಯಬೇಕು. ಉತ್ತಮವಾದ ಧರ್ಮಜ್ಞಾನವನ್ನು ಅಂತ್ಯಜನಿಂದಲೂ ಪಡೆಯಬಹುದು (ಉದಾ.-ಧರ್ಮವ್ಯಾಧ). ದುಷ್ಟಕುಲದಿಂದಾದರೂ ಸ್ತ್ರೀರತ್ನವನ್ನು ಸ್ವೀಕರಿಸಬಹುದು.

**ವಿಷಾದಪ್ಯಮೃತಂ ಗ್ರಾಹ್ಯಂ ಬಾಲಾದಪಿ ಸುಭಾಷಿತಮ್ ।**
**ಅಮಿತ್ರಾದಪಿ ಸದ್ವೃತ್ತಮಮೇಧ್ಯಾದಪಿ ಕಾಂಚನಮ್ ॥ ೬೬**

ಅಮೃತವು ವಿಷಮಿಶ್ರಿತವಾಗಿದ್ದು, ಆ ವಿಷವನ್ನು ದೂರಮಾಡಲು ಸಾಧ್ಯವಾದರೆ, ಅಂತಹ ಅಮೃತವನ್ನು ಸ್ವೀಕರಿಸಬಹುದು. ತಿಳಿವಳಿಕೆ ಕಡಿಮೆಯಾದ ಹುಡುಗನಿಂದಲೂ ಸುಭಾಷಿತವನ್ನು ಗ್ರಹಿಸಬಹುದು. ಶತ್ರುವಿನಿಂದಲೂ ಒಳ್ಳೆಯ ನಡತೆಯನ್ನು ಕಲಿಯಬಹುದು. ಅಮೇಧ್ಯದೊಡನೆ ಸೇರಿದ್ದರೂ ಸುವರ್ಣವನ್ನು ಬೇರ್ಪಡಿಸಿ ಶುದ್ಧಿಮಾಡಿ ತೆಗೆದುಕೊಳ್ಳಬಹುದು.

**ನ ಪೂರ್ವಂ ಗುರವೇ ಕಿಂಚಿದುಪಕುರ್ವೀತ ಧರ್ಮವಿತ್ ।**
**ಸ್ನಾಸ್ಯಂಸ್ತು ಗುರುಣಾಽಜ್ಞಪ್ತಃ ಶಕ್ತ್ಯಾ ಗುರ್ವರ್ಥಮಾಹರೇತ್ ॥ ೬೭**

ಧರ್ಮವನ್ನು ತಿಳಿದ ಬ್ರಹ್ಮಚಾರಿಯು ಗುರುಕುಲವಾಸ ಮಾಡುತ್ತಿರುವಾಗಲೇ ಗುರುವಿಗೆ ದಕ್ಷಿಣೆಯನ್ನು ಕೊಡಬಾರದು. (ತನಗೆ ಯಾರಾದರೂ ಕೊಟ್ಟುದನ್ನು ಗುರುಗಳಿಗೆ ಅರ್ಪಿಸಬಹುದು.) ವಿದ್ಯಾರ್ಜನೆ ಮುಗಿದು ಸ್ನಾತಕವ್ರತವನ್ನು ಧರಿಸಲು ಅಪೇಕ್ಷಿಸಿದವನು ಗುರುಗಳ ಅಪ್ಪಣೆಯನ್ನು ಪಡೆದು, ಯಥಾಶಕ್ತಿ ಸಂಪಾದಿಸಿ, ಗುರುದಕ್ಷಿಣೆ ಕೊಡಬೇಕು.

**ಕ್ಷೇತ್ರಂ ಹಿರಣ್ಯಂ ಗಾಮಶ್ವಂ ಛತ್ರೋಪಾನಹಮಾಸನಮ್ ।**
**ಧಾನ್ಯಂ ಶಾಕಂ ಚ ವಾಸಾಂಸಿ ಗುರವೇ ಪ್ರೀತಿಮಾವಹೇತ್ ॥ ೬೮**

ಹೊಲಗದ್ದೆಗಳು, ಹಣಕಾಸು, ಹಸು, ಕುದುರೆ, ಛತ್ರಿ, ಪಾದರಕ್ಷೆ, ಆಸನಗಳು, ಧಾನ್ಯ, ಕಾಯಿಪಲ್ಯಗಳು, ವಸ್ತ್ರಗಳು ಇವನ್ನು ಗುರುವಿಗೆ ಕೊಟ್ಟು, ಆತನ ಪ್ರೀತಿಯನ್ನು ಸಂಪಾದಿಸಬೇಕು.

## III ಅಧ್ಯಾಯ

# ಗೃಹಸ್ಥ

**ವೇದಾನಧೀತ್ಯ ವೇದೌ ವಾ ವೇದಂ ವಾಪಿ ಯಥಾಕ್ರಮಮ್ ।**
**ಅವಿಪ್ಲುತಬ್ರಹ್ಮಚರ್ಯೋ ಗೃಹಸ್ಥಾಶ್ರಮಮಾವಸೇತ್ ॥ ೧**

ತನ್ನ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ದ್ವಿಜನು ನಾಲ್ಕು ವೇದಗಳನ್ನೂ, ಅದು ಸಾಧ್ಯವಿಲ್ಲದಿದ್ದರೆ ಎರಡು ವೇದಗಳನ್ನೂ, ಕನಿಷ್ಠಪಕ್ಷದಲ್ಲಿ (ಸ್ವಶಾಖೆಯ) ಒಂದು ವೇದವನ್ನಾದರೂ ಕ್ರಮವರಿತು ಅಭ್ಯಾಸಮಾಡಿ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕು.

**ಗುರುಣಾನುಮತಃ ಸ್ನಾತ್ವಾ ಸಮಾವೃತ್ತೋ ಯಥಾವಿಧಿ ।**
**ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್ ॥**

ಗುರುಗಳ ಅಪ್ಪಣೆಯನ್ನು ಪಡೆದಮೇಲೆ ಸ್ನಾನಸಮಾವರ್ತನ ಸಂಸ್ಕಾರಗಳನ್ನು ವಿಧಿಪೂರ್ವಕವಾಗಿ ಮುಗಿಸಿಕೊಂಡು, ತನ್ನ ವರ್ಣಕ್ಕೆ ಸೇರಿದವಳಾಗಿಯೂ ಸುಲಕ್ಷಣವಾಗಿಯೂ ಇರುವ ಕನ್ಯೆಯನ್ನು ದ್ವಿಜನು ಮದುವೆಯಾಗಬೇಕು.

**ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ ।**
**ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ೩**

ತಾಯಿಯ ಸಪಿಂಡಳಾಗದೆ, ತಂದೆಯ ಗೋತ್ರದವಳೂ ಆಗದೆ ಇರುವವಳು ದ್ವಿಜರಿಗೆ, ದೇಹಸಂಬಂಧ ಏರ್ಪಡುವ ಮದುವೆ ಎಂಬ ಸಂಸ್ಕಾರಕ್ಕೆ ಪ್ರಶಸ್ತಳಾಗುವಳು.

[ಏಳು ತಲೆಗಳವರೆಗೆ ಸಪಿಂಡತ್ವ ಸಂಬಂಧವಿರುವುದೆಂದು ಮನು ಹೇಳುತ್ತಾನೆ. ಇದರಿಂದ ತಾಯಿಯ ತಂದೆಯಾದ ಅಜ್ಜನ (ಮಾತಾಮಹ) ವಂಶದವರನ್ನು ಮದುವೆಮಾಡಿಕೊಳ್ಳಬಾರದು ಎಂಬ ಅಭಿಪ್ರಾಯ ಬರುತ್ತದೆ. "ಸಗೋತ್ರಾಂ ಮಾತುರಪ್ಯೇಕೇ ನೇಚ್ಛಂತ್ಯುದ್ವಾಹಕರ್ಮಣಿ | ಜನ್ಮನಾಮ್ನೋರವಿಜ್ಞಾನೇ ಉದ್ವಹೇದವಿಶಂಕಿತಃ ||" ಎಂಬ ವ್ಯಾಸಸ್ಮೃತಿಯ ವಾಕ್ಯದಿಂದ "ತಾಯಿಯ ಗೋತ್ರದವರನ್ನೂ ಕೆಲವರು ಬಿಡುತ್ತಾರೆ; ಆದರೆ ತಾಯಿಯ ಕಡೆಯವರ ಹೆಸರೇ ಪರಂಪರೆಯಾಗಿ ಬರುವವರನ್ನು ಬಿಟ್ಟರೆ ಸಾಕು; ಅವರ ಜನ್ಮ, ಹೆಸರುಗಳು ಅಪರಿಚಿತವಾಗಿದ್ದರೆ ಯಾವ ಶಂಕೆಯೂ ಇಲ್ಲದೆ ಮದುವೆಯಾಗಬಹುದು, ಅವರಿಗೆ ಮಾತೃಸಾಪಿಂಡ್ಯವಿಲ್ಲ" ಎಂದು ಆ ಸ್ಮೃತಿಯ ಅಭಿಪ್ರಾಯವಾಗುವುದು. ದಕ್ಷಿಣದೇಶದಲ್ಲಿ ಸಾಮಾನ್ಯವಾಗಿಯೂ, ಉತ್ತರದಲ್ಲಿ ಕೆಲವು ಗುಂಪಿನ ಜನರಲ್ಲಿಯೂ, ತಾಯಿಯ ಸೋದರರ ಮಗಳನ್ನು ಮದುವೆಯಾಗುವ ಆಚಾರವಿದೆ; ಕೆಲವರು ಅಕ್ಕನ ಮಗಳನ್ನೂ ಮದುವೆಯಾಗುತ್ತಾರೆ. ಅನೇಕ ಸ್ಮೃತಿಗಳಿಗೆ ಇದು ವಿರುದ್ಧವಾದರೂ ಕೆಲವು ದೇಶಗಳಲ್ಲಿ ಬಹುಕಾಲದಿಂದ ಶಿಷ್ಟಾಚಾರವಾಗಿ ಬಂದಿರುವುದರಿಂದಲೂ, ಪರಾಶರಾದಿ ಸ್ಮೃತಿಗಳು ಇಂತಹ ವಿವಾಹಗಳನ್ನು ಒಪ್ಪುವುದರಿಂದಲೂ ಇವು ಆಕ್ಷೇಪಣೀಯಗಳಲ್ಲ. ಕೃಷ್ಣನು ಮಿತ್ರವಿಂದಾದೇವಿಯನ್ನೂ, ಅರ್ಜುನನು ಸುಭದ್ರೆಯನ್ನೂ ಮದುವೆಯಾದುದು ಅಲ್ಲಿನ ದೇಶಾಚಾರಸಮ್ಮತವಾಗಿದ್ದುವು.]

**ಮಹಾಂತ್ಯಪಿ ಸಮೃದ್ಧಾನಿ ಗೋಜಾವಿಧನಧಾನ್ಯತಃ |**
**ಸ್ತ್ರೀಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ ||** ೬

**ಹೀನಕ್ರಿಯಂ ನಿಷ್ಪುರಷಂ ನಿಶ್ಛಂದೋ ರೋಮಶಾರ್ಶಸಮ್ |**
**ಕ್ಷಯಾಮಯಾವ್ಯಪಸ್ಮಾರಿಶ್ವಿತ್ರಿಕುಷ್ಠಿಕುಲಾನಿ ಚ ||** ೭

ಜಾತಕರ್ಮಾದಿ ಸಂಸ್ಕಾರವಿಲ್ಲದವರು, ಗಂಡುಮಕ್ಕಳಿಲ್ಲದವರು, ವೇದಾಧ್ಯಯನ ಮಾಡದವರು, ಮೈಮೇಲೆಲ್ಲ ಉದ್ದುದ್ದವಾದ ಕೂದಲುಗಳುಳ್ಳವರು, ಮೂಲವ್ಯಾಧಿ, ಕ್ಷಯ, ಮಂದಾಗ್ನಿ, ಅಪಸ್ಮಾರ, ಬಿಳುಪು (ತೊನ್ನು), ಕುಷ್ಠ ಈ ರೋಗಗಳು ಉಳ್ಳವರು, ಇಂತಹವರು ಇರುವ

ಕುಲದವರು ಪ್ರಸಿದ್ಧವಾದ ಹೆಸರನ್ನು ಪಡೆದವರಾಗಿ ಧನಧಾನ್ಯಸಮೃದ್ಧರಾಗಿದ್ದರೂ ಕೂಡ ವಿವಾಹಸಂಬಂಧಕ್ಕೆ ವರ್ಜ್ಯರು.

(ಮಕ್ಕಳು ಅನೇಕವೇಳೆ ಸೋದರಮಾವನನ್ನು ಹೋಲುವುದರಿಂದ, ಅಂಥ ರೋಗಿಷ್ಠ ಅಥವಾ ಹೀನಕುಲದವರೊಡನೆ ಸಂಪರ್ಕ ಬೆಳೆಸುವುದು ಸಂತತಿಯ ದೃಷ್ಟಿಯಿಂದ ಹಿತವಲ್ಲ.)

**ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಮ್ ।**
**ತನುಲೋಮಕೇಶದಶನಾಂ ಮೃದ್ವಂಗೀಮುದ್ವಹೇತ್ ಸ್ತ್ರಿಯಮ್ ॥**

ಯಾವ ಅಂಗವೈಕಲ್ಯವೂ ಇಲ್ಲದ, ಸೌಮ್ಯವಾದ ಹೆಸರುಳ್ಳ, ಹಂಸ ಅಥವಾ ಆನೆಯಂತೆ ಮನೋಹರವಾದ ನಡಿಗೆಯುಳ್ಳ, ಸೂಕ್ಷ್ಮವಾದ (ಮೈಮೇಲಿನ ಮತ್ತು ತಲೆಯಮೇಲಿನ) ಕೂದಲುಗಳೂ ಹಲ್ಲುಗಳೂ ಉಳ್ಳ, ಕೋಮಲಾಂಗಿಯಾದ ಕನ್ಯೆಯನ್ನು ಮದುವೆಮಾಡಿಕೊಳ್ಳಬೇಕು.

(ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಮ್ ।
ಪಂಚಮಾತ್ಸಪ್ತಮಾದೂರ್ಧ್ವಂ ಮಾತೃತಃ ಪಿತೃತಸ್ತಥಾ ॥

ಕನ್ಯೆಯು ರೋಗವಿಲ್ಲದವಳೂ, ಸೋದರರನ್ನು ಪಡೆದಿರುವವಳೂ, ವರನೊಡನೆಸಮಾನವಲ್ಲದ ಪ್ರವರ ಗೋತ್ರಗಳುಳ್ಳವಳೂ, ತಾಯಿಯಿಂದ ಐದನೆಯ ತಲೆ ಅಥವಾ ತಂದೆಯಿಂದ ಏಳನೆಯ ತಲೆಯವರೆಗಿನ ನೇರ ಸಂಬಂಧವಿಲ್ಲದವಳಾಗಿಯೂ ಇರಬೇಕು. ಇದು ಯಾಜ್ಞವಲ್ಕ್ಯನ ಮತ.)

**ಹೀನಜಾತಿಸ್ತ್ರಿಯಂ ಮೋಹಾದುದ್ವಹಂತೋ ದ್ವಿಜಾತಯಃ ।**
**ಕುಲಾನ್ಯೇವ ನಯಂತ್ಯಾಶು ಸಸಂತಾನಾನಿ ಶೂದ್ರತಾಮ್ ॥** ೭

ಮೋಹದಿಂದ ತಮಗಿಂತ ಕೀಳುಜಾತಿಯವರ ಹೆಣ್ಣನ್ನು ದ್ವಿಜರು ಮದುವೆಯಾದರೆ ತಮ್ಮ ಸಂತಾನಗಳಿಂದ ಕೂಡಿದ ಕುಲಕ್ಕೇ ಶೂದ್ರತ್ವವನ್ನು ತರುತ್ತಾರೆ.

**ಚತುರ್ಣಾಮಪಿ ವರ್ಣಾನಾಂ ಪ್ರೇತ್ಯ ಚೇಹ ಹಿತಾಹಿತಾನ್ ।**
**ಅಷ್ಟಾವಿಮಾನ್ ಸಮಾಸೇನ ಸ್ತ್ರೀವಿವಾಹಾನ್ನಿಬೋಧತ ॥** ೮
**ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।**
**ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥** ೯

ನಾಲ್ಕು ವರ್ಣಗಳ ಜನರಿಗೂ ಇಹಪರಗಳಲ್ಲಿ ಹಿತಾಹಿತವಾಗುವಂತಹ ಮದುವೆಗಳಲ್ಲಿ ಈ ಎಂಟು ಬಗೆಗಳನ್ನು ತಿಳಿಯಿರಿ : ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ.

**ಚತುರೋ ಬ್ರಾಹ್ಮಣಸ್ಯಾದ್ಯಾನ್ಪ್ರಶಸ್ತಾನ್ಕವಯೋ ವಿದುಃ ।**
**ರಾಕ್ಷಸಂ ಕ್ಷತ್ರಿಯಸ್ಯೈಕಮಾಸುರಂ ವೈಶ್ಯಶೂದ್ರಯೋಃ ॥** ೧೦

ಬ್ರಾಹ್ಮಣನಿಗೆ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ ವಿವಾಹಗಳು ಪ್ರಶಸ್ತವೆಂದು ವಿದ್ವಾಂಸರು ತಿಳಿದಿದ್ದಾರೆ. ಕ್ಷತ್ರಿಯನಿಗೆ ರಾಕ್ಷಸ, ವೈಶ್ಯ ಮತ್ತು ಶೂದ್ರರಿಗೆ ಆಸುರವಿವಾಹಗಳು ಪ್ರಶಸ್ತವಾದುವು.

**ಆಚ್ಛಾದ್ಯ ಚಾರ್ಚಯಿತ್ವಾ ಚ ಶ್ರುತಿಶೀಲವತೇ ಸ್ವಯಮ್ ।**
**ಆಹೂಯ ದಾನಂ ಕನ್ಯಾಯಾ ಬ್ರಾಹ್ಮೋ ಧರ್ಮಃ ಪ್ರಕೀರ್ತಿತಃ ॥**

ಕನ್ಯಾಪಿತನು ವಿದ್ಯೆ, ಸದಾಚಾರವುಳ್ಳವನನ್ನು ಕರೆತಂದು, ವಧೂವರರಿಗೆ ಹೊಸ ವಸ್ತ್ರಾಲಂಕಾರಾದಿಗಳನ್ನು ಕೊಟ್ಟು ಮದುವೆಮಾಡಿಕೊಟ್ಟರೆ ಅದು ಧರ್ಮಸಮ್ಮತವಾದ ಬ್ರಾಹ್ಮವಿವಾಹವೆನಿಸುವುದು.

**ಯಜ್ಞೇ ತು ವಿತತೇ ಸಮ್ಯಗೃತ್ವಿಜೇ ಕರ್ಮ ಕುರ್ವತೇ ।**
**ಅಲಂಕೃತ್ಯ ಸುತಾದಾನಂ ದೈವಂ ಧರ್ಮಂ ಪ್ರಚಕ್ಷತೇ ॥** ೧೨

ಜ್ಯೋತಿಷ್ಟೋಮಾದಿಯಾಗಗಳು ನಡೆಯುತ್ತಿರುವಾಗ ಕರ್ಮಗಳನ್ನು ಮಾಡುತ್ತಿರುವ ಋತ್ವಿಕ್ ಆದವನಿಗೆ ಅಲಂಕಾರಮಾಡಿದ ಮಗಳನ್ನು ಕೊಟ್ಟರೆ, ಅದು ದೈವವಿವಾಹವಾಗುವುದು.

**ಏಕಂ ಗೋಮಿಥುನಂ ದ್ವೇ ವಾ ವರಾದಾದಾಯ ಧರ್ಮತಃ ।**
**ಕನ್ಯಾಪ್ರದಾನಂ ವಿಧಿವದಾರ್ಷೋ ಧರ್ಮಃ ಸ ಉಚ್ಯತೇ ॥** ೧೩

ವರನಿಂದ ಒಂದು ಹಸು ಮತ್ತು ಒಂದು ಹೋರಿ ಅಥವಾ ಎರಡು ಹಸುಗಳು ಮತ್ತು ಎರಡು ಹೋರಿಗಳನ್ನು ಧರ್ಮಕಾರ್ಯಕ್ಕಾಗಿ (ತನ್ನ ಯಾಗಾದಿ ಕಾರ್ಯಗಳಿಗೆ ಅಥವಾ ಮಗಳಿಗೇ ಕೊಡುವುದಕ್ಕಾಗಿ) ತೆಗೆದುಕೊಂಡು, ಶಾಸ್ತ್ರಪದ್ಧತಿಯಂತೆ ಕನ್ಯಾದಾನಮಾಡುವುದು ಆರ್ಷವಿವಾಹ.

**ಸಹ ನೌ ಚರತಾಂ ಧರ್ಮಮಿತಿ ವಾಚಾನುಭಾಷ್ಯ ಚ ।**
**ಕನ್ಯಾಪ್ರದಾನಮಭ್ಯರ್ಚ್ಯ ಪ್ರಾಜಾಪತ್ಯೋ ವಿಧಿಃ ಸ್ಮೃತಃ ॥** ೧೪

"ನಾವಿಬ್ಬರೂ ಕೂಡಿಯೇ ಧರ್ಮವನ್ನು ಆಚರಿಸೋಣ" ಎಂದು ವಧೂವರರಿಂದ ಪ್ರತಿಜ್ಞೆಮಾಡಿಸಿ, ಅವರನ್ನು ಅಲಂಕರಿಸಿ, ಕನ್ಯಾಪ್ರದಾನ ಮಾಡುವುದು ಪ್ರಾಜಾಪತ್ಯವಿಧಿ.

**ಜ್ಞಾತಿಭ್ಯೋ ದ್ರವಿಣಂ ದತ್ವಾ ಕನ್ಯಾಯೈ ಚೈವ ಶಕ್ತಿತಃ ।**
**ಕನ್ಯಾಪ್ರದಾನಂ ಸ್ವಾಚ್ಛಂದ್ಯಾದಾಸುರೋ ಧರ್ಮ ಉಚ್ಯತೇ ॥ ೧೫**

(ಆರ್ಷಧರ್ಮದಲ್ಲಿ ಹೇಳಿರುವಂತೆ ಸಮಾಜದಿಂದ ನಿಯಮಿತವಾಗಿರುವಷ್ಟನ್ನು ಮಾತ್ರವಲ್ಲದೆ) ತನಗೆ ಇಷ್ಟ ಬಂದಷ್ಟು ಹಣವನ್ನು ಕನ್ಯೆಯ ತಾಯಿ, ತಂದೆ ಅಥವಾ ಪೋಷಕರಿಗೋ ಕೊಟ್ಟು ಮತ್ತು ಕನ್ಯೆಗೂ ತನ್ನ ಶಕ್ತ್ಯನುಸಾರವಾಗಿ ಕೊಟ್ಟು, ಕನ್ಯೆಯನ್ನು ಸ್ವೀಕರಿಸುವುದು ಆಸುರವಿವಾಹ.

**ಇಚ್ಛಯಾನ್ಯೋನ್ಯಸಂಯೋಗಃ ಕನ್ಯಾಯಾಶ್ಚ ವರಸ್ಯ ಚ ।**
**ಗಾಂಧರ್ವಃ ಸ ತು ವಿಜ್ಞೇಯೋ ಮೈಥುನ್ಯಃ ಕಾಮಸಂಭವಃ ॥ ೧೬**

ಪರಸ್ಪರ ಪ್ರೀತಿಯಿಂದ ವಧೂವರರು ಆಲಿಂಗನಾದಿ ಸಂಯೋಗವನ್ನು ಪಡೆದರೆ, ಅದನ್ನು ಗಾಂಧರ್ವವಿವಾಹವೆನ್ನುತ್ತಾರೆ. ಇದು ಕಾಮದಿಂದ (ಇಚ್ಛೆ) ಹುಟ್ಟುವುದು ಮತ್ತು ಮುಖ್ಯವಾಗಿ ಸ್ತ್ರೀ ಸಂಪರ್ಕವೇ ಪ್ರಧಾನ ಪ್ರಯೋಜನವಾಗಿ ಉಳ್ಳದುದು.

(ಎಲ್ಲ ವಿವಾಹಗಳಲ್ಲಿಯೂ ಸ್ತ್ರೀ ಸಂಪರ್ಕವು ಪ್ರಯೋಜನವಾಗಿರುವುದಾದರೂ ಗಾಂಧರ್ವದಲ್ಲಿ ಸ್ತ್ರೀಸಂಯೋಗವಾಗುವುದರಿಂದಲೇ ಅದು ವಿವಾಹವಾಗುವುದು. ಅಂದರೆ, ವಿವಾಹಕ್ಕೆ ಮೊದಲೇ ಸಂಯೋಗವಾಗಬಹುದೆಂದು ಅಭಿಪ್ರಾಯ.)

**ಹತ್ವಾ ಛಿತ್ವಾ ಚ ಭಿತ್ವಾ ಚ ಕ್ರೋಶಂತೀಂ ರುದತೀಂ ಗೃಹಾತ್ ।**
**ಪ್ರಸಹ್ಯ ಕನ್ಯಾಹರಣಂ ರಾಕ್ಷಸೋ ವಿಧಿರುಚ್ಯತೇ ॥ ೧೭**

(ಗಾಂಧರ್ವಕ್ಕೆ ವಿರುದ್ಧವಾಗಿ) ಕನ್ಯೆಗೆ ಇಷ್ಟವಿಲ್ಲದಿರುವಾಗ ಅವಳ ಬಂಧುಗಳನ್ನು ಹೊಡೆದು ಬಡಿದು ಗಾಯಗೊಳಿಸಿ ಅಥವಾ ಕೊಂದುಬಿಟ್ಟು, ಅಳುತ್ತಿರುವ ಕನ್ಯೆಯನ್ನು ಮನೆಯಿಂದ ಎಳೆದೊಯ್ಯುವುದೇ ರಾಕ್ಷಸವಿಧಿ.

(ಪುರುಷನ ಶೌರ್ಯವನ್ನು ಇದಿರಿಸಲಾಗದೆ ನೆಂಟರು ಸುಮ್ಮನಿದ್ದರೆ, ಹೊಡೆದಾಟ ಬಡಿದಾಟಗಳ ಪ್ರಸಂಗವಿಲ್ಲ. ಬಾಂಧವರ ಅಸಹಾಯಕತೆ

ಅಥವಾ ಅವರಿಗೆ ಸಂಭವಿಸುವ ಹಿಂಸೆಗಳಿಂದ ಕೊರಗುತ್ತಿರುವ ಕನ್ಯೆಯನ್ನು ಶೌರ್ಯದಿಂದ ಅಪಹರಿಸುವುದು ರಾಕ್ಷಸನೀತಿ. ಅನೇಕ ಜನ ಕ್ಷತ್ರಿಯರು ಇದನ್ನು ಮಾಡಿರುವುದನ್ನು ಇತಿಹಾಸದಿಂದ ತಿಳಿಯಬಹುದು.)

**ಸುಪ್ತಾಂ ಮತ್ತಾಂ ಪ್ರಮತ್ತಾಂ ವಾ ರಹೋ ಯತ್ರೋಽಪಗಚ್ಛತಿ ।**
**ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟಮೋಽಧಮಃ ॥ ೧೮**

ನಿದ್ರೆಮಾಡುತ್ತಿರುವ, ಮದ್ಯಪಾನದಿಂದ ಮೈಮರೆತಿರುವ ಅಥವಾ ಶೀಲರಕ್ಷಣೋಪಾಯಗಳನ್ನು ಮಾಡಿಕೊಳ್ಳದೆ ಅಜಾಗರೂಕಳಾದ ಹೆಂಗಸನ್ನು ವಿಜನಪ್ರದೇಶದಲ್ಲಿ ಸಂಭೋಗವಮಾಡಿದರೆ, ವಿವಾಹಗಳಲ್ಲೆಲ್ಲ ಅತ್ಯಂತ ಪಾಪಕರವಾದ ಅದನ್ನು ಪೈಶಾಚವಿಧಿಯೆನ್ನುವರು.

**ಬ್ರಾಹ್ಮಾದಿಷು ವಿವಾಹೇಷು ಚತುರ್ಷ್ವೇವಾನುಪೂರ್ವಶಃ ।**
**ಬ್ರಹ್ಮವರ್ಚಸ್ವಿನಃ ಪುತ್ರಾ ಜಾಯಂತೇ ಶಿಷ್ಟಸಂಮತಾಃ ॥ ೧೯**

ಮೇಲೆ ಹೇಳಿದ ಎಂಟು ಬಗೆಯ ವಿವಾಹಗಳಲ್ಲಿ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ ವಿಧಿಗಳಲ್ಲಿಯೇ ಬ್ರಹ್ಮವರ್ಚಸ್ಸನ್ನು ಪಡೆದು ಸಜ್ಜನರಿಗೆ ಪ್ರಿಯವಾಗುವಂತಹ ಮಕ್ಕಳು ಹುಟ್ಟುವರು.

**ಇತರೇಷು ಚ ಶಿಷ್ಟೇಷು ನೃಶಂಸಾನೃತವಾದಿನಃ ।**
**ಜಾಯಂತೇ ದುರ್ವಿವಾಹೇಷು ಬ್ರಹ್ಮಧರ್ಮದ್ವಿಷಃ ಸುತಾಃ ॥ ೨೦**

ಉಳಿದ ನಾಲ್ಕು ಬಗೆಯ ದುರ್ವಿವಾಹಗಳಿಂದ ಮನೆಮುರುಕರೂ, ಸುಳ್ಳುಹೇಳುವವರೂ, ವೇದೋಕ್ತಯಾಗಾದಿಗಳನ್ನು ದೂಷಣೆಮಾಡುವವರೂ ಆಗುವ ಮಕ್ಕಳು ಹುಟ್ಟುತ್ತಾರೆ.

**ಋತುಕಾಲಾಭಿಗಾಮೀ ಸ್ಯಾತ್ ಸ್ವದಾರನಿರತಃ ಸದಾ ।**
**ಪರ್ವವರ್ಜಂ ವ್ರಜೇಚ್ಚೈನಾಂ ತದ್ವ್ರತೋ ರತಿಕಾಮ್ಯಯಾ ॥ ೨೧**

ಗರ್ಭಧಾರಣಯೋಗ್ಯವಾದ ಋತುಕಾಲಗಳಲ್ಲಿ ಪತ್ನಿಯನ್ನು ಸಂಭೋಗದಲ್ಲಿ ಕೂಡಬೇಕು. ತನ್ನ ಪತ್ನಿಯಲ್ಲಿಯೇ ಯಾವಾಗಲೂ ಆಸಕ್ತನಾಗಿರಬೇಕು. ಪರ್ವಕಾಲಗಳನ್ನು (ಅಮಾವಾಸ್ಯಾ ಮೊದಲಾದ ನಿಷಿದ್ಧಕಾಲಗಳು) ಬಿಟ್ಟು, ಪ್ರೀತಿಯಿಂದ ಪತ್ನಿಯ ಸಂತೋಷಕ್ಕಾಗಿಯೂ ಕೂಡಬೇಕು.

(ಇಲ್ಲಿ ಋತುಕಾಲಗಳಲ್ಲಿ ಪತ್ನೀಸಂಭೋಗವು ವಿಧಿ; ಏಕೆಂದರೆ, ಅದರಿಂದ ಪುತ್ರೋತ್ಪತ್ತಿಯಾಗಿ ಪಿತೃಋಣ ಕಳೆಯುತ್ತದೆ. ಮತ್ತು ಹಾಗೆ ಮಾಡದಿದ್ದರೆ ಭ್ರೂಣಹತ್ಯಾದೋಷ ಬರುತ್ತದೆ. 'ಪುತ್' ಎಂಬ ನರಕಕ್ಕೆ ಹೋಗುವುದನ್ನು ತಪ್ಪಿಸುವವನು 'ಪುತ್ರ' ಎಂದಿರುವುದರಿಂದ, ಒಬ್ಬ ಮಗ ಹುಟ್ಟಿದಮೇಲೆ ಆ ನರಕದ ಭಯವೂ ಇರುವುದಿಲ್ಲ, ಪಿತೃಋಣವೂ ಇರುವುದಿಲ್ಲ. ಆದುದರಿಂದ ಆಮೇಲೆ ಈ ವಿಧಿಯು ಪ್ರಬಲ ವಿಧಾಯಕವಾಗಿರುವುದಿಲ್ಲ. ತನ್ನ ಪತ್ನಿಯಲ್ಲೇ ಸದಾ ಆಸಕ್ತನಾಗಿರಬೇಕೆನ್ನುವುದರಿಂದ ಪರಸ್ತ್ರೀಯರನ್ನು ಕಾಮಿಸುವುದು ನಿಷಿದ್ಧವೆಂದು ಹೇಳಿದಹಾಗಾಯಿತು. ಪರ್ವವರ್ಜವಾದ ಅನಿಷಿದ್ಧಕಾಲಗಳಲ್ಲಿ ಪತ್ನಿಗೆ ಸಂತೋಷವುಂಟುಮಾಡಲು, ರತಿಕಾಮನೆಯಿಂದ ಸಂಭೋಗವನ್ನು ಹೇಳಿರುವುದರಿಂದ ಋತುಕಾಲವಲ್ಲದೆ, ಇದ್ದಾಗಲೂ ಪತ್ನಿಯ ಇಚ್ಛೆಯಂತೆ ಕಾಮೋಪಭೋಗಮಾಡಲು ಅವಕಾಶವನ್ನು ಹೇಳಿದೆ.)

**ನ ಕನ್ಯಾಯಾಃ ಪಿತಾ ವಿದ್ವಾನ್ ಗೃಹ್ಣೀಯಾಚ್ಛುಲ್ಕಮಣ್ವಪಿ ।**
**ಗೃಹ್ಣನ್ ಶುಲ್ಕಂ ಹಿ ಲೋಭೇನ ಸ್ಯಾನ್ನರೋಽಪತ್ಯವಿಕ್ರಯೀ ॥ ೨೨**

ಕನ್ಯೆಯನ್ನು ಸ್ವೀಕರಿಸುವವನು ಅದಕ್ಕಾಗಿ ಕೊಡುವ ಕನ್ಯಾಶುಲ್ಕವೆಂಬ ಹಣವನ್ನು, ಸ್ವಲ್ಪವನ್ನಾದರೂ ಹುಡುಗಿಯ ತಂದೆಯು ತೆಗೆದುಕೊಳ್ಳಬಾರದು. ಲೋಭದಿಂದ ಶುಲ್ಕವನ್ನು ತೆಗೆದುಕೊಂಡರೆ ಮಗಳನ್ನು ಮಾರಿಕೊಂಡಂತೆ ಆಗುತ್ತದೆ.

(ಶಾಸ್ತ್ರಸಮ್ಮತವಾದ ಗೋಮಿಥುನವನ್ನು ಧರ್ಮದಿಂದ ಸ್ವೀಕರಿಸುವುದನ್ನು ಹೇಳುವ ಆರ್ಷವಿವಾಹದಲ್ಲಿ ಕನ್ಯಾಶುಲ್ಕವಿರುವುದಿಲ್ಲ. ಶಾಸ್ತ್ರೋಕ್ತ ರೀತಿಯನ್ನು ಬಿಟ್ಟು, ಧನ, ಧಾನ್ಯ, ದಾಸದಾಸಿಯರು, ಹಸು, ಕುದುರೆ, ಗಾಡಿ, ಮುಂತಾದುವನ್ನು ವರನಿಂದ ತೆಗೆದುಕೊಂಡರೆ ಮಾತ್ರ ಕನ್ಯಾಶುಲ್ಕವಾಗುವುದು.)

**ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।**
**ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥ ೨೩**

(ವಿವಾಹಕಾಲದಲ್ಲಿ ತಂದೆ ಅಥವಾ ಪತಿಯಿಂದ ವಸ್ತ್ರಭೂಷಣಾದಿ

ಅಲಂಕಾರಗಳನ್ನು ಪಡೆಯುವುದಲ್ಲದೆ) ಸ್ತ್ರೀಯರು ತಮ್ಮ ಬಂಧುಗಳಾದ ತಂದೆ, ತಾಯಿ, ಸೋದರರು, ಗಂಡ, ಭಾವ, ಮೈದುನ ಮೊದಲಾದವರಿಂದ ಗೌರವಿಸಲ್ಪಡಬೇಕು, ವಸ್ತ್ರಾಭರಣಗಳಿಂದ ಅಲಂಕರಿಸಲ್ಪಡಬೇಕು. ಹಾಗೆ ಮಾಡುವುದರಿಂದ ಬಂಧುಗಳಿಗೆ ತುಂಬ ಒಳ್ಳೆಯದಾಗುವುದು.

**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೨೪**

ಯಾವ ಕುಲದಲ್ಲಿ ಸ್ತ್ರೀಯರು ತಮ್ಮ ಪಿತ್ರಾದಿ ಬಂಧುಗಳಿಂದ ಗೌರವಿಸಲ್ಪಡುತ್ತಾರೆಯೋ, ಅಲ್ಲಿ ದೇವತೆಗಳು ಸುಪ್ರಸನ್ನರಾಗಿರುತ್ತಾರೆ. ಯಾವ ಕುಲದಲ್ಲಿ ಹುಟ್ಟಿದ ಸ್ತ್ರೀಯರಿಗೆ ಆ ಬಂಧುಮನ್ನಣೆಯಿಲ್ಲವೋ, ಅಲ್ಲಿ ದೇವತಾಪ್ರಸಾದವಿಲ್ಲದಿರುವುದರಿಂದ, ಮಾಡಿದ ಶುಭಕಾರ್ಯಗಳೆಲ್ಲ ನಿಷ್ಫಲ ವಾಗುವುವು.

(ಈ ಶ್ಲೋಕವನ್ನು ಅನೇಕರು ಸ್ತ್ರೀಸ್ವಾತಂತ್ರ್ಯವನ್ನು ಬೋಧಿಸುವ ಮಹಾವಾಕ್ಯವೆಂದು ಭ್ರಾಂತಿಯಿಂದ ಭಾವಿಸಿರುವರು. ಮುಖ್ಯವಾಗಿ, ಮಹಿಳೆಯರೇ ಇದನ್ನು ತಮಗೆ ಅನುಕೂಲವಾದುದೆಂದು ಭಾವಿಸಿ ಒತ್ತಿ ಒತ್ತಿ ಹೇಳುವರು. ಸ್ತ್ರೀಯರಿಗೆ ಸರ್ವತ್ರ ಮನ್ನಣೆಯಿರಬೇಕೆಂದು ಶ್ಲೋಕದ ಅರ್ಥ. ಆ ಮನ್ನಣೆಯ ಸ್ವರೂಪವನ್ನು ಮುಂದಿನ ಶ್ಲೋಕಗಳು ತಿಳಿಸುತ್ತವೆ. ಸ್ತ್ರೀಸ್ವಾತಂತ್ರ್ಯ ಮನುವಿಗೆ ಅಭಿಮತವಲ್ಲ. V ಅಧ್ಯಾಯದ ೩೧, ೩೨ನೇ ಶ್ಲೋಕಗಳನ್ನು ನೋಡಿ.)

**ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।**
**ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥ ೨೫**

ತಂಗಿ, ಮಗಳು, ಹೆಂಡತಿ, ಸೊಸೆ ಮೊದಲಾದ ಹೆಣ್ಣುಮಕ್ಕಳು ಮನೆಯಲ್ಲಿ ಮನ್ನಣೆಯಿಲ್ಲದವರಾಗಿ, ಯಾವ ಕುಲಗಳನ್ನು ಶಪಿಸುತ್ತಾರೆಯೋ, ಅವು ಅಭಿಚಾರ(ಮಾಟ)ದಿಂದಲೋ ಎಂಬಂತೆ, ಧನ ಧಾನ್ಯ ಪಶ್ವಾದಿ ಸರ್ವ ರೀತಿಯಿಂದಲೂ ಹಾಳಾಗುತ್ತವೆ.

**ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।**
**ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ ೨೬**

ಆದುದರಿಂದ ತಮಗೆ ಒಳ್ಳೆಯದಾಗಲಿ ಎಂದು ಅಪೇಕ್ಷಿಸುವ ಜನರು ಮನೆಯ ಹೆಣ್ಣುಮಕ್ಕಳನ್ನು ವಿವಾಹಾದಿ ಸತ್ಕಾರೋತ್ಸವಗಳಲ್ಲಿ ಯಾವಾಗಲೂ ಒಡವೆ, ವಸ್ತ್ರ, ಊಟಗಳಿಂದ ಗೌರವಿಸಬೇಕು.

(ಮನೆಗೆ ಬಂದ ಅಕ್ಕ, ತಂಗಿ, ಹೆಣ್ಣುಮಕ್ಕಳಿಗೆ ಒಳ್ಳೆಯ ಬಟ್ಟೆಬರೆ, ಒಡವೆಗಳನ್ನು ಕೊಟ್ಟು, ಔತಣಮಾಡಿ, ಸಂತೋಷಪಡಿಸುವ ಅಭ್ಯಾಸ ನಮ್ಮಲ್ಲಿ ಪರಂಪರೆಯಾಗಿ ಬಹುಕಾಲದಿಂದ ಬಂದಿದೆ. ಹಿಂದಿನ ಶ್ಲೋಕದಲ್ಲಿ ಸ್ತ್ರೀಗೆ ತೌರುಮನೆಯಲ್ಲಿ ಮನ್ನಣೆಯಿರಬೇಕೆಂದು ಹೇಳಿದೆ; ಆ ಮನ್ನಣೆಯನ್ನು ಯಾವಾಗ ಮತ್ತು ಹೇಗೆ ಮಾಡಬೇಕೆಂಬುದನ್ನು ಇಲ್ಲಿ ತಿಳಿಸಿದೆ.)

**ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ।**
**ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥ ೨೭**

ಯಾವ ಮನೆತನದಲ್ಲಿ ಗಂಡನು ಹೆಂಡತಿಯಿಂದಲೂ, ಹೆಂಡತಿಯು ಗಂಡನಿಂದಲೂ ಸಂತೋಷವನ್ನು ಹೊಂದಿರುವರೋ, ಅಲ್ಲಿ ಯಾವಾಗಲೂ ಶುಭ ಶ್ರೇಯಸ್ಸುಗಳು ಖಂಡಿತವಾಗಿ ಇರುವುವು.

**ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್ ।**
**ಅಪ್ರಮೋದಾತ್ಪುನಃ ಪುಂಸಃ ಪ್ರಜನಂ ನ ಪ್ರವರ್ತತೇ ॥ ೨೮**

ವಸ್ತ್ರಭೂಷಣಾದಿಗಳನ್ನು ಪಡೆಯದ ಸ್ತ್ರೀ, ತಾನೂ ಸಂತುಷ್ಟಳಾಗಿರುವುದಿಲ್ಲ, ತನ್ನ ಪತಿಯನ್ನೂ ಸಂತೋಷಗೊಳಿಸಲಾರಳು. ಪತಿಗೆ ಸಂತೋಷವಿಲ್ಲದೇ ಹೋದರೆ ಪ್ರಜೋತ್ಪತ್ತಿಯೇ ಆಗುವುದಿಲ್ಲ.

**ಕುವಿವಾಹೈಃ ಕ್ರಿಯಾಲೋಪೈರ್ವೇದಾನಧ್ಯಯನೇನ ಚ ।**
**ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥ ೨೯**

ಆಸುರ ಪೈಶಾಚಾದಿ ವಿವಾಹಗಳಾಗುವುದರಿಂದಲೂ, ಜಾತಕರ್ಮಾದಿ ಸಂಸ್ಕಾರಗಳು ನಡೆಯದೆ ಇರುವುದರಿಂದಲೂ, ವೇದಾಧ್ಯಯನ ನಿಂತುಹೋಗುವುದರಿಂದಲೂ, ಬ್ರಾಹ್ಮಣರನ್ನು ಅಗೌರವದೃಷ್ಟಿಯಿಂದ ಕಾಣುವುದರಿಂದಲೂ ಸತ್ಕುಲಗಳು ಕೀಳುಮಟ್ಟಕ್ಕೆ ಬಂದುಬಿಡುತ್ತವೆ.

**ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।**
**ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್॥**

ತಾನು ಮಾಡುವ ಅಧ್ಯಯನ, ಇತರರಿಗೆ ಮಾಡಿಸುವ ಅಧ್ಯಾಪನ ಇವೇ ಬ್ರಹ್ಮಯಜ್ಞವಾಗುವುವು. ಅನ್ನೋದಕಗಳಿಂದ ತೃಪ್ತಿಪಡಿಸುವುದೇ (ಶ್ರಾದ್ಧ) ಪಿತೃಯಜ್ಞ. ವೈಶ್ವದೇವಾದಿ ಹೋಮಗಳು ದೇವಯಜ್ಞ. ಕಾಕಾದಿ ಪಶುಪಕ್ಷಿಗಳಿಗೆ ಹಾಕುವ ಬಲಿಯೇ (ಅನ್ನ) ಭೌತಯಜ್ಞ. ಬಂದ ಅತಿಥಿಗಳಿಗೆ ಏರ್ಪಡಿಸುವ ಊಟ ಉಪಚಾರವೇ ಮನುಷ್ಯಯಜ್ಞ.

**ಪಂಚೈತಾನ್ಯೋ ಮಹಾಯಜ್ಞಾನ್ನ ಹಾಪಯತಿ ಶಕ್ತಿತಃ ।**
**ಸ ಗೃಹೇಽಪಿ ವಸನ್ನಿತ್ಯಂ ಸೂನಾದೋಷೈರ್ನ ಲಿಪ್ಯತೇ ॥** ೩೧

ಮೇಲೆ ಹೇಳಿದ ಐದು ಯಜ್ಞಗಳನ್ನು ತನ್ನ ಮನೆಯಲ್ಲಿಯೇ ಇರುತ್ತಾ ಯಾವನು ಯಥಾಶಕ್ತಿ ಮಾಡದೆ ಬಿಡುವುದಿಲ್ಲವೋ, ಅವನಿಗೆ ಸೂನಾ ದೋಷಗಳು ತಗಲುವುದಿಲ್ಲ.

(ಕುಟ್ಟುವುದು, ಬೀಸುವುದು ಮುಂತಾದ ಗೃಹಕಾರ್ಯಗಳಿಂದ ಸಣ್ಣ ಸಣ್ಣ ಕ್ರಿಮಿಕೀಟಾದಿಗಳು ನಾಶವಾಗಬಹುದಾದುದರಿಂದ ಹುಟ್ಟುವ ದೋಷವೇ ಸೂನಾ.)

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥** ೩೨

ಅಗ್ನಿಯಲ್ಲಿ ವಿಧಿವತ್ತಾಗಿ ಮಾಡಿದ ಹೋಮವು ಸೂರ್ಯನನ್ನು ಮುಟ್ಟುತ್ತದೆ. ಸೂರ್ಯನಿಂದ ಮಳೆ ಬರುತ್ತದೆ. ಮಳೆಯಿಂದ ಅನ್ನ ಹುಟ್ಟಿ, ಅದರಿಂದ ಪ್ರಜೋತ್ಪತ್ತಿಯಾಗುವುದು.

**ಯಸ್ಮಾತ್ತ್ರಯೋಽಪ್ಯಾಶ್ರಮಿಣೋ ಜ್ಞಾನೇನಾನ್ನೇನ ಚಾನ್ವಹಮ್ ।**
**ಗೃಹಸ್ಥೇನೈವ ಧಾರ್ಯಂತೇ ತಸ್ಮಾಜ್ಜ್ಯೇಷ್ಠಾಶ್ರಮೋ ಗೃಹೀ ॥** ೩೩

ಬ್ರಹ್ಮಚಾರಿ, ವಾನಪ್ರಸ್ಥ, ಸಂನ್ಯಾಸಿ ಎಂಬ ಮೂವರು ಆಶ್ರಮಸ್ಥರೂ ತಮ್ಮ ಊಟ ವಿದ್ಯೆಗಳಿಗಾಗಿ ಗೃಹಸ್ಥನ ಸಹಾಯದಿಂದಲೇ ದೇಹಧಾರಣೆ ಮಾಡಿಕೊಳ್ಳುವರು. ಆದುದರಿಂದ ಗೃಹಸ್ಥನ ಆಶ್ರಮವೇ ಶ್ರೇಷ್ಠವಾದುದು.

**ಸ್ವಾಧ್ಯಾಯೇನಾರ್ಚಯೇದೃಷೀನ್ಹೋಮೈರ್ದೇವಾನ್ಯಥಾವಿಧಿ ।**
**ಪಿತೄನ್ ಶ್ರಾದ್ಧೈಶ್ಚ ನಾನಾನ್ನೈರ್ಭೂತಾನಿ ಬಲಿಕರ್ಮಣಾ ॥** ೩೪

ತಮ್ಮ ಕುಲಕ್ಕೆ ಪರಂಪರಾಗತವಾಗಿ ಬಂದಿರುವ ವೇದಾಭ್ಯಾಸದಿಂದ ಋಷಿಗಳನ್ನೂ, ವಿವಿಧ ಹೋಮಗಳಿಂದ ದೇವತೆಗಳನ್ನೂ, ನಾನಾ ಪ್ರಕಾರದ ಅನ್ನಗಳುಳ್ಳ ಶ್ರಾದ್ಧಕರ್ಮದಿಂದ ಪಿತೃಗಳನ್ನೂ, ಬಲಿಹರಣವೆಂಬ ಕಾರ್ಯದಿಂದ ಅನೇಕ ಪ್ರಾಣಿಗಳನ್ನೂ ಪೂಜಿಸಿ ತೃಪ್ತಿಪಡಿಸಬೇಕು.

**ಏವಂ ಸಮ್ಯಗ್ಘವಿರ್ಹುತ್ವಾ ಸರ್ವದಿಕ್ಷು ಪ್ರದಕ್ಷಿಣಮ್ ।**
**ಇಂದ್ರಾಂತಕಾಪ್ಪತೀಂದುಭ್ಯಃ ಸಾನುಗೇಭ್ಯೋ ಬಲಿಂ ಹರೇತ್ ॥**

ಹೀಗೆ ದೇವತೆಗಳನ್ನು ಉದ್ದೇಶಿಸಿ (ವೈಶ್ವದೇವ) ಹೋಮವನ್ನು ಮಾಡಿದಮೇಲೆ ಪ್ರದಕ್ಷಿಣಾಕಾರವಾಗಿ (ಮನೆಯ ಹೊರಗೆ) ನಾಲ್ಕು ದಿಕ್ಕುಗಳಲ್ಲಿಯೂ ಪರಿವಾರದೇವತೆಗಳಿಂದ ಕೂಡಿದ ಇಂದ್ರ (ಪೂರ್ವ), ಯಮ (ದಕ್ಷಿಣ), ವರುಣ (ಪಶ್ಚಿಮ), ಸೋಮ (ಉತ್ತರ) ಎಂಬ ದೇವತೆಗಳನ್ನು ಉದ್ದೇಶಿಸಿ ಬಲಿಯನ್ನು ಕೊಡಬೇಕು. (ಅನ್ನೋದಕ ಪುಷ್ಪಗಂಧಾದಿಗಳನ್ನು ಹಾಕಬೇಕು.)

**ಶುನಾಂ ಚ ಪತಿತಾನಾಂ ಚ ಶ್ವಪಚಾಂ ಪಾಪರೋಗಿಣಾಂ ।**
**ವಾಯಸಾನಾಂ ಕೃಮೀಣಾಂ ಚ ಶನಕೈರ್ನಿರ್ವಪೇದ್ಭುವಿ ॥** ೩೬

ಆಮೇಲೆ ನಾಯಿಗಳು, ಜಾತಿಕೆಟ್ಟವರು, ಚಂಡಾಲರು, ಕುಷ್ಠಾದಿ ಪಾಪರೋಗಪೀಡಿತರಾದ ಭಿಕ್ಷುಕರು, ಕಾಗೆಗಳು, ಕೃಮಿಗಳು ಇವರಿಗಾಗಿ ಆಹಾರವನ್ನು ಮೆಲ್ಲನೆ (ಮಣ್ಣಿನಲ್ಲಿ ಕಲೆತು ಹಾಳಾಗದಂತೆ) ನೆಲದಮೇಲೆ ಇಡಬೇಕು.

**ಕೃತ್ವೈತದ್ಬಲಿಕರ್ಮೈವಮತಿಥಿಂ ಪೂರ್ವಮಾಶಯೇತ್ ।**
**ಭಿಕ್ಷಾಂ ಚ ಭಿಕ್ಷವೇ ದದ್ಯಾದ್ವಿಧಿವದ್ಬ್ರಹ್ಮಚಾರಿಣೇ ॥** ೩೭

ಹೀಗೆ ಬಲಿಹರಣಮಾಡಿದಮೇಲೆ ಮನೆಯವರು ಊಟಮಾಡುವುದಕ್ಕಿಂತ ಮೊದಲೇ ಅತಿಥಿಗಳಿಗೆ ಭೋಜನ ಮಾಡಿಸಬೇಕು; ಭಿಕ್ಷಕ್ಕಾಗಿ ಬಂದ ಬ್ರಹ್ಮಚಾರಿಗೆ ವಿಧಿಪೂರ್ವಕವಾಗಿ ಭಿಕ್ಷೆಯನ್ನೂ ನೀಡಬೇಕು.

**ಸಂಪ್ರಾಪ್ತಾಯ ತ್ವತಿಥಯೇ ಪ್ರದದ್ಯಾದಾಸನೋದಕೇ ।**
**ಅನ್ನಂ ಚೈವ ಯಥಾಶಕ್ತಿ ಸತ್ಕೃತ್ಯ ವಿಧಿಪೂರ್ವಕಮ್ ॥** ೩೮

*

ಮನೆಗೆ ಬಂದ ಅತಿಥಿಯನ್ನು ವಿಧಿಪೂರ್ವಕವಾಗಿ ಆದರಿಸಿ ಉಚಿತವಾದ ಆಸನದಲ್ಲಿ ಕುಳ್ಳಿರಿಸಿ, ತನಗೆ ಸಾಧ್ಯವಿರುವಮಟ್ಟಿಗೆ ಊಟಕ್ಕೆ ಅಣಿಮಾಡಿ ಉಪಚರಿಸಬೇಕು.

**ಏಕರಾತ್ರಂ ತು ನಿವಸನ್ನತಿಥಿರ್ಬ್ರಾಹ್ಮಣಃ ಸ್ಮೃತಃ ।**
**ಅನಿತ್ಯಂ ಹಿ ಸ್ಥಿತೋ ಯಸ್ಮಾತ್ತಸ್ಮಾದತಿಥಿರುಚ್ಯತೇ ॥** ೩೯

ಗೃಹಸ್ಥನಲ್ಲಿಗೆ ಬಂದು, ಒಂದು ರಾತ್ರಿ ಮಾತ್ರ ಉಳಿದುಕೊಳ್ಳುವ ಬ್ರಾಹ್ಮಣನು ಅತಿಥಿ ಎಂದು ಕರೆಯಲ್ಪಡುವನು. ಎರಡನೆಯ ತಿಥಿಗೆ ಕಾಯದೆ ಹೊರಟು, ಅನಿತ್ಯನಾಗುವುದರಿಂದ ಅವನು ಅತಿಥಿ.

**ನ ವೈ ಸ್ವಯಂ ತದಶ್ನೀಯಾದತಿಥಿಂ ಯನ್ನ ಭೋಜಯೇತ್ ।**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾಽತಿಥಿಪೂಜನಮ್ ॥** ೪೦

ಹಾಲು, ಮೊಸರು, ತುಪ್ಪ ಮೊದಲಾದ ಉತ್ತಮ ಪದಾರ್ಥಗಳನ್ನು ಅತಿಥಿಗಳಿಗೆ ಬಡಿಸದೆ ತಾನು ಮಾತ್ರ ತಿನ್ನಬಾರದು. ಅತಿಥಿಪೂಜೆಯಿಂದ ಧನ, ಯಶಸ್ಸು, ಆಯುಸ್ಸುಗಳು ಮಾತ್ರವಲ್ಲದೆ ಸ್ವರ್ಗವೂ ಸಿಗುವುದು.

**ಇತರಾನಪಿ ಸಖ್ಯಾದೀನ್ ಸಂಪ್ರೀತ್ಯಾ ಗೃಹಮಾಗತಾನ್ ।**
**ಸತ್ಕೃತ್ಯಾನ್ನಂ ಯಥಾಶಕ್ತಿ ಭೋಜಯೇತ್ಸಹ ಭಾರ್ಯಯಾ ॥** ೪೧

ಮನೆಗೆ ಬಂದ ಸ್ನೇಹಿತ, ಸಹಾಧ್ಯಾಯಿ ಮೊದಲಾದ ಪ್ರಿಯಜನರನ್ನು ಆದರಿಸಿ, (ಅತಿಥಿಗಳ ಅನಂತರದಲ್ಲಿ) ಗೃಹಸ್ಥದಂಪತಿಗಳು ತಮ್ಮ ಜೊತೆಯಲ್ಲಿಯೇ ಅವರಿಗೆ ಭೋಜನ ಮಾಡಿಸಬೇಕು.

**ಸುವಾಸಿನೀಃ ಕುಮಾರೀಶ್ಚ ರೋಗಿಣೋ ಗರ್ಭಿಣೀಃ ಸ್ತ್ರಿಯಃ ।**
**ಅತಿಥಿಭ್ಯೋಽಗ್ರ ಏವೈತಾನ್ಭೋಜಯೇದವಿಚಾರಯನ್ ॥** ೪೨

ಹೊಸದಾಗಿ ಮದುವೆಯಾದ ಹುಡುಗಿಯರು—ಮನೆಯ ಸೊಸೆಯರು, ಹೆಣ್ಣುಮಕ್ಕಳು—ಮದುವೆಯಾಗದ ಹೆಣ್ಣುಮಕ್ಕಳು, ರೋಗಿಗಳು, ಗರ್ಭಿಣಿಯರು ಇವರನ್ನೆಲ್ಲ ಯಾವ ಸಂದೇಹವನ್ನೂ ಮಾಡದೆ, ಅತಿಥಿಗಳಿಗೆ ಮೊದಲೇ ಊಟಕ್ಕೆ ಕೂಡಿಸಬಹುದು.

**ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ ।**
**ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ ॥** ೪೩

ಅತಿಥಿಗಳಾದ ಬ್ರಾಹ್ಮಣರು, ಮನೆಗೆ ಬಂದ ನೆಂಟರು ಮತ್ತು ಸೇವಕರು ಎಲ್ಲರೂ ಊಟಮಾಡಿದಮೇಲೆ, ದಂಪತಿಗಳು ಉಳಿದ ಆಹಾರವನ್ನು ಸೇವಿಸಬೇಕು.

**ದ್ವೌ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರ ವಾ ।**
**ಭೋಜಯೇತ್ಸುಸಮೃದ್ಧೋಽಪಿ ನ ಪ್ರಸಜ್ಜೇತ ವಿಸ್ತರೇ ॥ ೪೪**

ಶ್ರಾದ್ಧದಲ್ಲಿ ದೇವಕಾರ್ಯಕ್ಕೆ ಇಬ್ಬರನ್ನೂ, ಪಿತೃಪಿತಾಮಹ ಪ್ರಪಿತಾಮಹರ ಪರವಾಗಿ ಮೂವರು ಬ್ರಾಹ್ಮಣರನ್ನೂ, ಅಥವಾ ಎರಡು ಕಾರ್ಯಗಳಿಗೂ ಒಬ್ಬೊಬ್ಬರನ್ನೇ ಆಗಲಿ, ಕರೆದು ಊಟಮಾಡಿಸಬೇಕು. ಹೆಚ್ಚಿನ ಶ್ರೀಮಂತನಾಗಿದ್ದಾಗ್ಯೂ ವಿಸ್ತಾರಕ್ಕಾಗಿ ಪ್ರಯತ್ನಪಡಬಾರದು.

**ಸತ್ಕ್ರಿಯಾಂ ದೇಶಕಾಲೌ ಚ ಶೌಚಂ ಬ್ರಾಹ್ಮಣಸಂಪದಃ ।**
**ಪಂಚೈತಾನ್ವಿಸ್ತರೋ ಹಂತಿ ತಸ್ಮಾನ್ನೇಹೇತ ವಿಸ್ತರಮ್ ॥ ೪೫**

ಬ್ರಾಹ್ಮಣರ ಸಂಖ್ಯೆಯನ್ನು ಹೆಚ್ಚಿಸುವುದರಿಂದ ಆ ಬ್ರಾಹ್ಮಣರ ಸತ್ಕಾರ, ಶ್ರಾದ್ಧಮಾಡುವ ಸ್ಥಳ, ಕಾಲ ಮತ್ತು ಶುಚಿತ್ವ, ಗುಣವಂತರಾದ ಬ್ರಾಹ್ಮಣರ ಸಂಪಾದನೆ—ಇವೆಲ್ಲಕ್ಕೂ ತೊಂದರೆಯಾಗುವುದು. ಆದುದರಿಂದ ಬ್ರಾಹ್ಮಣರ ಸಂಖ್ಯಾವಿಸ್ತಾರವನ್ನು ಅಪೇಕ್ಷಿಸಬಾರದು.

**ಏಕೈಕಮಪಿ ವಿದ್ವಾಂಸಂ ದೈವೇ ಪಿತ್ರ್ಯೇ ಚ ಭೋಜಯೇತ್ ।**
**ಪುಷ್ಕಲಂ ಫಲಮಾಪ್ನೋತಿ ನಾಮಂತ್ರಜ್ಞಾನ್ಬಹೂನಪಿ ॥ ೪೬**

ದೇವ-ಪಿತೃಸ್ಥಾನಗಳಲ್ಲಿ ಒಬ್ಬೊಬ್ಬರನ್ನೇ ಆದರೂ ವಿದ್ವಾಂಸರನ್ನು ಕೂಡಿಸಿ ಭೋಜನಮಾಡಿಸುವುದರಿಂದ ಹೆಚ್ಚು ಫಲವನ್ನು ಪಡೆಯಬಹುದು; ಮಂತ್ರಜ್ಞರಲ್ಲದ ಅನೇಕರಿಗೆ ಭೋಜನಮಾಡಿಸುವುದರಿಂದ ಫಲವಿಲ್ಲ.

**ಜ್ಞಾನನಿಷ್ಠಾ ದ್ವಿಜಾಃ ಕೇಚಿತ್ತಪೋನಿಷ್ಠಾಸ್ತಥಾಪರೇ ।**
**ತಪಃ ಸ್ವಾಧ್ಯಾಯನಿಷ್ಠಾಶ್ಚ ಕರ್ಮನಿಷ್ಠಾಸ್ತಥಾಪರೇ ॥ ೪೭**

ಬ್ರಾಹ್ಮಣರಲ್ಲಿ ಕೆಲವರು ಆತ್ಮಜ್ಞಾನವನ್ನು ಪಡೆಯುವುದರಲ್ಲಿ ನಿಷ್ಠರು; ಮತ್ತೆ ಕೆಲವರು ಪ್ರಾಜಾಪತ್ಯಾದಿ ತಪಸ್ಸನ್ನು ಪ್ರಧಾನವಾಗಿ ಎಣಿಸುವರು; ಇತರರು ತಪಸ್ಸು ಅಧ್ಯಯನಗಳಲ್ಲಿ ನಿರತರಾದವರು, ಇನ್ನು ಕೆಲವರು ಯಾಗಾದಿ ಕರ್ಮನಿಷ್ಠರು.

**ಜ್ಞಾನನಿಷ್ಠೇಷು ಕವ್ಯಾನಿ ಪ್ರತಿಷ್ಠಾಪ್ಯಾನಿ ಯತ್ನತಃ ।**
**ಹವ್ಯಾನಿ ತು ಯಥಾನ್ಯಾಯಂ ಸರ್ವೇಷ್ವೇವ ಚತುರ್ಷ್ವಪಿ ॥ ೪೮**

ಪಿತೃಕಾರ್ಯಗಳಿಗೆ (ಕವ್ಯ) ಜ್ಞಾನನಿಷ್ಠರನ್ನೂ, ದೇವಕಾರ್ಯಕ್ಕೆ (ಹವ್ಯ) ಮೇಲೆ ಹೇಳಿದ ನಾಲ್ಕುಬಗೆಯ ಬ್ರಾಹ್ಮಣರಲ್ಲಿ ವಿದ್ವಾಂಸರಾದ ವರನ್ನೂ ನ್ಯಾಯವನ್ನು ಅನುಸರಿಸಿ ಕೂಡಿಸಬೇಕು.

**ನ ಶ್ರಾದ್ಧೇ ಭೋಜಯೇನ್ಮಿತ್ರಂ ಧನೈಃ ಕಾರ್ಯೋಽಸ್ಯ ಸಂಗ್ರಹಃ ।**
**ನಾರಿಂ ನ ಮಿತ್ರಂ ಯಂ ವಿದ್ಯಾತ್ತಂ ಶ್ರಾದ್ಧೇ ಭೋಜಯೇದ್ದ್ವಿಜಮ್**

ಮಿತ್ರರನ್ನು ಶ್ರಾದ್ಧದಲ್ಲಿ ಭೋಜನಕ್ಕಾಗಿ ಕರೆಯಬಾರದು; ಬೇರೆ ವಿಧವಾಗಿ ಅವನನ್ನು ಸಂತೋಷಗೊಳಿಸಿ ಸ್ನೇಹವನ್ನು ಪಡೆಯಬೇಕು. ಯಾವನು ಸ್ಪಷ್ಟವಾಗಿ ಶತ್ರುವೂ ಮಿತ್ರನೂ ಅಲ್ಲವೋ ಅಂಥವನಿಗೆ ಶ್ರಾದ್ಧದಲ್ಲಿ ಭೋಜನಮಾಡಿಸಬೇಕು.

**ಯೇ ಸ್ತೇನಪತಿತಕ್ಲೀಬಾ ಯೇ ಚ ನಾಸ್ತಿಕವೃತ್ತಯಃ ।**
**ತಾನ್ ಹವ್ಯಕವ್ಯಯೋರ್ವಿಪ್ರಾನನರ್ಹಾನ್ಮನುರಬ್ರವೀತ್ ॥ ೫೦**

ಕಳ್ಳ, ಪತಿತ, ನಪುಂಸಕ, ನಾಸ್ತಿಕರ ವ್ಯವಹಾರವುಳ್ಳವ, ಇಂಥ ವಿಪ್ರರು ಹವ್ಯಕವ್ಯಗಳಿಗೆ ಅನರ್ಹರೆಂದು ಮನು ಹೇಳಿದ್ದಾನೆ.

(ಇವರ ಜೊತೆಗೆ ವೈದ್ಯ, ಪೂಜಾರಿ, ವ್ಯಾಪಾರಿ, ವೃತ್ತಿಯಿಂದ ದಾಸ, ಕ್ಷಯಾದಿ ರೋಗವುಳ್ಳವ, ನರ್ತಕ, ಶೂದ್ರಳನ್ನು ಮದುವೆಯಾದವ, ವಿಧವೆಯನ್ನು ಮದುವೆಯಾದವ, ಆಚಾರಹೀನ, ನಿತ್ಯಯಾಚಕ ಮುಂತಾದ ಅನೇಕರನ್ನೂ ವರ್ಜ್ಯರನ್ನಾಗಿ ಮನು ಹೇಳಿದ್ದಾನೆ.)

**ಬ್ರಾಹ್ಮಣಸ್ತ್ವನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।**
**ತಸ್ಮೈ ಹವ್ಯಂ ನ ದಾತವ್ಯಂ ನ ಹಿ ಭಸ್ಮನಿ ಹೂಯತೇ ॥ ೫೧**

ಅಧ್ಯಯನ ಮಾಡದ ಬ್ರಾಹ್ಮಣನು ಹುಲ್ಲಿಗೆ ಹತ್ತಿದ ಬೆಂಕಿಗೆ ಸಮ; ಅದು ಮತ್ತೊಂದನ್ನು ಸುಡಲಾರದೆ ತಾನೇ ಉರಿದು ತಣ್ಣಗಾಗುವಂತೆ, ಆ ಬ್ರಾಹ್ಮಣನೂ ನಿಷ್ಫಲನು. ಬೂದಿಯಲ್ಲಿ ಹೇಗೆ ಹೋಮಮಾಡುವುದಿಲ್ಲವೋ ಹಾಗೆ, ದೇವತೆಗಳನ್ನು ಉದ್ದೇಶಿಸಿ ಆ ಬ್ರಾಹ್ಮಣನಿಗೆ ಹವ್ಯಾನ್ನವನ್ನು ಕೊಡಬಾರದು.

**ಉಪವೇಶ್ಯ ತು ತಾನ್ಸಿಪ್ರಾನಾಸನೇಷ್ವಜುಗುಪ್ಸಿತಾನ್ ।**
**ಗಂಧಮಾಲ್ಯೈಃ ಸುರಭಿಭಿರರ್ಚಯೇದ್ದೇವಪೂರ್ವಕಮ್ ॥** ೫೨

ಶ್ರಾದ್ಧಕ್ಕಾಗಿ ನಿಮಂತ್ರಿತರಾದ ನಿರ್ದುಷ್ಟ ಬ್ರಾಹ್ಮಣರನ್ನು ಉಚಿತ ಆಸನಗಳಲ್ಲಿ ಕೂಡಿಸಿ, ಸುವಾಸನೆಯುಳ್ಳ ಗಂಧ ಮಾಲ್ಯ ಧೂಪಾದಿಗಳಿಂದ, ದೇವಸ್ಥಾನದಲ್ಲಿರುವವರನ್ನು ಮೊದಲೂ, ಪಿತೃಸ್ಥಾನದಲ್ಲಿರುವವರನ್ನು ಅನಂತರವೂ ಪೂಜಿಸಬೇಕು.

**ತೇಷಾಮುದಕಮಾನೀಯ ಸಪವಿತ್ರಾಂಸ್ತಿಲಾನಪಿ ।**
**ಅಗ್ನೌ ಕುರ್ಯಾದನುಜ್ಞಾತೋ ಬ್ರಾಹ್ಮಣೋ ಬ್ರಾಹ್ಮಣೈಃ ಸಹ ॥**

ಆ ಬ್ರಾಹ್ಮಣರಿಗೆ ಅರ್ಘ್ಯ, ಪವಿತ್ರ, ಎಳ್ಳು ಎಲ್ಲವನ್ನೂ ಕೊಟ್ಟು, ಅವರ ಅಪ್ಪಣೆಪಡೆದು ಅಗ್ನೌಕರಣವೆಂಬ ಹೋಮವನ್ನು ಮಾಡಬೇಕು.

**ತ್ರೀಂಸ್ತು ತಸ್ಮಾದ್ಧವಿಃಶೇಷಾತ್ಪಿಂಡಾನ್ಕೃತ್ವಾ ಸಮಾಹಿತಃ ।**
**ಔದಕೇನೈವ ವಿಧಿನಾ ನಿರ್ವಪೇದ್ದಕ್ಷಿಣಾಮುಖಃ ॥** ೫೪

ಹೋಮಮಾಡಿದಮೇಲೆ ಹವಿಃಶೇಷದಿಂದ ಮೂರು ಪಿಂಡಗಳನ್ನು ಮಾಡಿ, ದಕ್ಷಿಣದಿಕ್ಕಿಗೆ ತಿರುಗಿ ಕುಳಿತು, ವಿಧಿಯಿಂದ ದರ್ಭೆಗಳ ಮೇಲೆ ಇಡಬೇಕು.

**ಯದ್ಯದ್ರೋಚೇತ ವಿಪ್ರೇಭ್ಯಸ್ತತ್ತದ್ದದ್ಯಾದಮತ್ಸರಃ ।**
**ಬ್ರಹ್ಮೋದ್ಯಾಶ್ಚ ಕಥಾಃ ಕುರ್ಯಾತ್ಪಿತೄಣಾಮೇತದೀಪ್ಸಿತಮ್ ॥**

ಬ್ರಾಹ್ಮಣರಿಗೆ ಯಾವುಯಾವುವು ಇಷ್ಟವೋ ಅವನ್ನು ಮತ್ಸರವಿಲ್ಲದೆ ಬಡಿಸಬೇಕು. ಪರಬ್ರಹ್ಮನ ವಿಷಯವಾದ ಮಾತುಗಳನ್ನು ಆಡುತ್ತಿರಬೇಕು. ಇವು ಪಿತೃಗಳಿಗೆ ಇಷ್ಟವಾದವು.

**ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ ।**
**ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಮ್ ॥** ೫೬

ಶ್ರಾದ್ಧಕ್ಕಾಗಿ ಪವಿತ್ರವಾದವು ಮೂರು—ಮಗಳ ಮಗ, ನೇಪಾಳದ ಕಂಬಳಿ (ಆಸನಕ್ಕೆ) ಮತ್ತು ಎಳ್ಳು; ಹಾಗೆಯೇ ಶುಚಿತ್ವ, ಕೋಪವಿಲ್ಲದಿರುವಿಕೆ ಮತ್ತು ಆತುರವಿಲ್ಲದಿರುವಿಕೆ, ಈ ಮೂರನ್ನೂ ಶ್ರಾದ್ಧಕಾಲದಲ್ಲಿ ಪ್ರಶಂಸೆ ಮಾಡುತ್ತಾರೆ.

**ಅಸಂಸ್ಕೃತಪ್ರಮೀತಾನಾಂ ತ್ಯಾಗಿನಾಂ ಕುಲಯೋಷಿತಾಮ್ ।**
**ಉಚ್ಛಿಷ್ಟಂ ಭಾಗದೇಯಂ ಸ್ಯಾದ್ದರ್ಭೇಷು ವಿಕಿರಶ್ಚ ಯಃ ॥** ೫೭

ಅಗ್ನಿಸಂಸ್ಕಾರ ಹೊಂದದೆ ಸತ್ತವರಿಗೂ (ಮಕ್ಕಳು ಮುಂತಾದವರು), ನಿರ್ದುಷ್ಟರಾದ ಕುಲಸ್ತ್ರೀಯರನ್ನು ಬಿಟ್ಟು ದೋಷಹೊಂದಿದ ಮೃತರಿಗೂ, ತೃಪ್ತಿ ಹೊಂದುವುದಕ್ಕಾಗಿ ಭೂಮಿಯಮೇಲೆ ಇಟ್ಟ ಉಚ್ಛಿಷ್ಟಪಿಂಡ ಮತ್ತು ದರ್ಭೆಗಳಮೇಲೆ ಹರಡಿ ಬಿದ್ದ 'ವಿಕಿರ'ವೂ ಉಪಕಾರಿಯಾಗುತ್ತವೆ.

(ಕೆಲವರು 'ಗುರುಹಿರಿಯರನ್ನು ತ್ಯಾಗಮಾಡಿದವರಿಗೂ ಮತ್ತು ಸ್ವಚ್ಛಂದವಾಗಿ ಮದುವೆಯಾಗದೇ ಉಳಿದ ಕುಲಸ್ತ್ರೀಯರಿಗೂ' ಎಂದು ಅರ್ಥಮಾಡಿದ್ದಾರೆ.)

**ತೃಪ್ತಾನ್ ಸ್ವದಿತಮಿತ್ಯೇವಂ ತೃಪ್ತಾನಾಚಾಮಯೇತ್ತತಃ ।**
**ಆಚಾಂತಾಂಶ್ಚಾನುಜಾನೀಯಾದಭಿತೋ ರಮ್ಯತಾಮಿತಿ ॥** ೫೮

ಬ್ರಾಹ್ಮಣರು ಉಂಡು ತೃಪ್ತರಾದುದನ್ನು ನೋಡಿ, "ತೃಪ್ತಿಯಾಗುವಂತೆ ಊಟವಾಯಿತೇ?" ಎಂದು ವಿಚಾರಿಸಿ, ಆಚಮನೀಯವನ್ನು ಕೊಟ್ಟು, "ಇಲ್ಲಿಯೇ ಹೊರಗೆ ವಿಶ್ರಮಿಸಿಕೊಳ್ಳಿ" ಎಂದು ಹೇಳಬೇಕು.

**ವಿಸೃಜ್ಯ ಬ್ರಾಹ್ಮಣಾಂಸ್ತಾಂಸ್ತು ನಿಯತೋ ವಾಗ್ಯತಃ ಶುಚಿಃ ।**
**ದಕ್ಷಿಣಾಂ ದಿಶಮಾಕಾಂಕ್ಷನ್ಯಾಚೇತೇಮಾನ್ವರಾನ್ಪಿತೄನ್ ॥** ೫೯

**ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।**
**ಶ್ರದ್ಧಾ ಚ ನೋ ಮಾ ವ್ಯಗಮದ್ಬಹುದೇಯಂ ಚ ನೋಽಸ್ತ್ವಿತಿ ॥**

ಬ್ರಾಹ್ಮಣರನ್ನು ವಿಸರ್ಜಿಸಿ ಶುಚಿಯಾಗಿ, ಮೌನವನ್ನು ಧರಿಸಿ, ಅನನ್ಯಮನಸ್ಕನಾಗಿ ದಕ್ಷಿಣದಿಕ್ಕಿಗೆ ತಿರುಗಿ ಪಿತೃಗಳನ್ನು ಉದ್ದೇಶಿಸಿ, ಹೀಗೆ ವರಗಳನ್ನು ಬೇಡಿಕೊಳ್ಳಬೇಕು: "ನಮ್ಮ ಕುಲದಲ್ಲಿ ದಾನಶೀಲರಾದವರು ಹುಟ್ಟಲಿ; ಅಧ್ಯಯನ, ಅಧ್ಯಾಪನ, ಯಾಗಾದಿ ಕರ್ಮಗಳಿಂದ ವೇದಗಳು ಅಭಿವೃದ್ಧಿ ಹೊಂದಲಿ; ಪುತ್ರಪೌತ್ರಾದಿ ಸಂತತಿ ಬೆಳೆಯಲಿ; ವಿಹಿತಾನುಷ್ಠಾನಗಳಲ್ಲಿ ಶ್ರದ್ಧೆ ನಮ್ಮಲ್ಲಿ ಕಡಿಮೆಯಾಗದಿರಲಿ; ಸತ್ಪಾತ್ರರಿಗೆ ಕೊಡುವುದಕ್ಕಾಗಿನಮ್ಮಲ್ಲಿ ಧನ ಧಾನ್ಯ ಸಂಪತ್ತು ಬಹು ವಿಧವಾಗಿ ಬೆಳೆಯಲಿ."

**ಏವಂ ನಿರ್ವಪಣಂ ಕೃತ್ವಾ ಪಿಂಡಾಂಸ್ತಾಂಸ್ತದನಂತರಮ್ ।**
**ಗಾಂ ವಿಪ್ರಮಜಮಗ್ನಿಂ ವಾ ಪ್ರಾಶಯೇದಪ್ಸು ವಾ ಕ್ಷಿಪೇತ್ ॥ ೬೧**

ಹೀಗೆ ಪಿಂಡಪ್ರದಾನ, ಪಿತೃಪ್ರಾರ್ಥನೆಗಳನ್ನು ಮಾಡಿದಮೇಲೆ, ಆ ಪಿಂಡಗಳನ್ನು ಹಸುವಿಗೋ, ಬ್ರಾಹ್ಮಣನಿಗೋ, ಮೇಕೆಗೋ ತಿನ್ನಲು ಕೊಡಬೇಕು; ಅಥವಾ ಬೆಂಕಿಯಲ್ಲಿಯೋ ನೀರಿನಲ್ಲಿಯೋ ಹಾಕಬೇಕು.

**ಯದ್ಯದ್ದದಾತಿ ವಿಧಿವತ್ಸಮ್ಯಕ್ ಶ್ರದ್ಧಾಸಮನ್ವಿತಃ ।**
**ತತ್ತತ್ಪಿತೄಣಾಂ ಭವತಿ ಪರತ್ರಾನಂತಮಕ್ಷಯಮ್ ॥ ೬೨**

ಶ್ರದ್ಧೆಯಿಂದ ಕೂಡಿ, ವಿಧಿಪೂರ್ವಕವಾಗಿ, ಅನಿಷಿದ್ಧವಾದ ಯಾವ ಅನ್ನೋದಕಗಳನ್ನು ಕೊಡುತ್ತಾರೆಯೋ ಅವು ಅನಂತಕಾಲದವರೆಗೆ ಅಕ್ಷಯವಾಗಿ ಪರಲೋಕದಲ್ಲಿ ಪಿತೃತೃಪ್ತಿಗಾಗಿ ಆಗುತ್ತವೆ.

(ಶ್ರದ್ಧೆಯಿಂದ ಕೊಡಬೇಕೆಂದು ಭಾವ; "ಶ್ರದ್ಧಯಾ ದೇಯಂ" ಎಂದು ಶ್ರುತಿವಾಕ್ಯವಿದೆ; ಶ್ರದ್ಧೆಯಿಂದ ಯಾವ ಕರ್ಮದಲ್ಲಿ ದಾನಮಾಡುತ್ತಾನೆಯೋ ಅದೇ ಶ್ರಾದ್ಧ, ಎಂದು ಹೇಳಲ್ಪಟ್ಟಿದೆ.)

## IV ಅಧ್ಯಾಯ

# ಸ್ನಾತಕ ಧರ್ಮಗಳು

**ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ ।**
**ಯಾ ವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದನಾಪದಿ ॥ ೧**

ಪ್ರಾಣಿಗಳಿಗೆ ಹಿಂಸೆಮಾಡದೆಯೇ ಅಥವಾ ಅದು ಅನಿವಾರ್ಯವಾದಾಗ ಅಲ್ಪದ್ರೋಹವಾಗುವಂತೆಯೇ ಯಾವ ಜೀವನೋಪಾಯವಿರುವುದೋ, ಅದನ್ನು ಆಶ್ರಯಿಸಿ, ಆಪತ್ಕಾಲವಿಲ್ಲದಿರುವಾಗ ಬ್ರಾಹ್ಮಣನು ಜೀವಿಸಬೇಕು.

**ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ ।**
**ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಮ್ ॥ ೨**

ತನ್ನ ಕುಟುಂಬದ ನ್ಯಾಯವಾದ ನಿತ್ಯಜೀವನವನ್ನು ನಡೆಸುವುದಕ್ಕಾಗಿ (ವಿಶೇಷ ಭೋಗಗಳಿಗಾಗಿ ಅಲ್ಲ), ವೃಥಾ ದೇಹಶ್ರಮವಿಲ್ಲದಂತೆ ನಿಂದಿತವಲ್ಲದ ತನ್ನ ಕರ್ಮಗಳಿಂದ ಹಣವನ್ನು ಸಂಪಾದಿಸಬೇಕು.

(ಹಣವೆಂಬುವುದರಿಂದ, ಧಾನ್ಯ, ಪಾತ್ರೆಗಳು, ಹಸು, ಮನೆ ಇವೂ ಸೂಚಿತವಾಗುತ್ತವೆ.)

**ಋತಾಮೃತಾಭ್ಯಾಂ ಜೀವೇತ್ತು ಮೃತೇನ ಪ್ರಮೃತೇನ ವಾ ।**
**ಸತ್ಯಾನೃತಾಭ್ಯಾಮಪಿ ವಾ ನ ಶ್ವವೃತ್ತ್ಯಾ ಕದಾಚನ ॥** ೩

ಋತ, ಅಮೃತ, ಮೃತ, ಪ್ರಮೃತ, ಸತ್ಯಾನೃತ ಎಂಬ ಐದು ಬಗೆಯ ಉಪಾಯಗಳಿಂದಲೂ, ಆಪತ್ತಿಗೆ ಒಳಗಾಗದವನು ಜೀವಿಸಬಹುದು. ಆಪತ್ಕಾಲದಲ್ಲಿಯೂ ಶ್ವವೃತ್ತಿಯಿಂದ (ನಾಯಿಯಂತೆ) ಬಾಳಬಾರದು.

**ಋತಮುಂಛಶಿಲಂ ಜ್ಞೇಯಮಮೃತಂ ಸ್ಯಾದಯಾಚಿತಮ್ ।**
**ಮೃತಂ ತು ಯಾಚಿತಂ ಭೈಕ್ಷಂ ಪ್ರಮೃತಂ ಕರ್ಷಣಂ ಸ್ಮೃತಮ್ ॥**

ಜನಸಂಚಾರವಿಲ್ಲದ ಪ್ರದೇಶಗಳಲ್ಲಿ, ಹೊಲಗಳ ಬಳಿಯಲ್ಲಿ, ಅಥವಾ ತಾನಾಗಿಯೇ ಬೆಳೆದಿರುವ ಗಿಡಗಳ ಪಕ್ಕದಲ್ಲಿ, ಬಿದ್ದಿರುವ ಧಾನ್ಯದ ಕಾಳುಗಳನ್ನು ಒಂದೊಂದಾಗಿ ಬೆರಳುಗಳಿಂದ ಆಯ್ದುಕೊಳ್ಳುವುದು ಉಂಛವೃತ್ತಿ. ಕಾಳುಗಳ ಗೊಂಚಲುಗಳನ್ನು (ತೆನೆ) ಸಂಪಾದಿಸಿಕೊಳ್ಳುವ ಬಗೆ ಶಿಲ. ಈ ಉಂಛ ಮತ್ತು ಶಿಲ ಎಂಬ ರೀತಿಗಳಿಂದ (ಯಾರಿಗೂ ತೊಂದರೆಯಾಗದಂತೆ ಮತ್ತು ಯಾರ ಹಂಗೂ ಇಲ್ಲದೆ) ಆಹಾರವನ್ನು ಸಂಪಾದಿಸಿಕೊಳ್ಳುವ ಬಗೆಯನ್ನು ಋತವೆಂದಿದ್ದಾರೆ. ಯಾರನ್ನೂ ತಾನಾಗಿ ಬೇಡದೆ ದೊರೆತ ಆಹಾರ ಅಮೃತವೆನಿಸುವುದು. ಯಾಚನೆ ಮಾಡಿ ತಂದ ಭಿಕ್ಷೆಯು ಮೃತ. (ಈ ಭಿಕ್ಷೆ ಪಕ್ವಾನ್ನವಲ್ಲ, ಹಸಿಯ ಕಾಳು; ಏಕೆಂದರೆ ಮತ್ತೊಬ್ಬರು ಬೇಯಿಸಿದುದನ್ನು ಬೇಡಿ ತಂದು ತನ್ನ ಅಗ್ನಿಯಲ್ಲಿ ಹೋಮಮಾಡಲಾಗದು.) ಭೂಮಿಯೊಳಗಿನ ನಾನಾ ಬಗೆಯ ಪ್ರಾಣಿಗಳು, ಉಳುವುದೇ ಮೊದಲಾದ ಕಾರ್ಯಗಳಿಂದ ನಾಶವಾಗುವುದರಿಂದ, ಕೃಷಿಯು ಪ್ರಮೃತವೆನಿಸಿಕೊಳುವುದು.

**ಸತ್ಯಾನೃತಂ ತು ವಾಣಿಜ್ಯಂ ತೇನ ಚೈವಾಪಿ ಜೀವ್ಯತೇ ।**
**ಸೇವಾ ಶ್ವವೃತ್ತಿರಾಖ್ಯಾತಾ ತಸ್ಮಾತ್ತಾಂ ಪರಿವರ್ಜಯೇತ್ ॥** ೫

ಸತ್ಯಾನೃತವೆಂದರೆ ವ್ಯಾಪಾರ; ಅದರಲ್ಲಿ ನಿಜ ಮತ್ತು ಸುಳ್ಳಿನ ಬೆರಕೆಯ ವ್ಯವಹಾರವಿರುತ್ತದೆ. ಅಂತಹ ವ್ಯಾಪಾರದಿಂದಲಾದರೂ ಜೀವಿಸಬಹುದು. (ಕೃಷಿ, ವಾಣಿಜ್ಯಗಳು ಒಂದೇ ಮಟ್ಟದ ವೃತ್ತಿಗಳು; ಅವು ಶ್ರೇಷ್ಠವಲ್ಲವೆಂದು ತೋರಿಸುವುದಕ್ಕಾಗಿ, ಅವುಗಳಿಂದಲಾದರೂ, ಎಂದು ಹೇಳಿದೆ.) ಶ್ವವೃತ್ತಿ ಎಂಬುದು ಪರಸೇವೆ. (ಸೇವೆ ಮಾಡುವವನ ಬಾಳು ನಾಯಿಬಾಳು, ಎಂದು ಪ್ರಸಿದ್ಧವಾಗಿಯೇ ಇದೆ. ಅವನು ಮತ್ತೊಬ್ಬನು ಕೊಟ್ಟ ಅನ್ನವನ್ನು ತಿಂದು, ಧರ್ಮಾಧರ್ಮಗಳ ವಿಚಾರದಲ್ಲಿ ಅನ್ನವಿಟ್ಟವನ ದಾರಿಯನ್ನು ಅನುಸರಿಸಬೇಕಾಗುವುದರಿಂದ ಅದು ಹೀನವೃತ್ತಿ.) ಪರಸೇವೆಯನ್ನು ಬ್ರಾಹ್ಮಣನು ಖಂಡಿತ ಮಾಡಬಾರದು.

**ನ ಲೋಕವೃತ್ತಂ ವರ್ತೇತ ವೃತ್ತಿಹೇತೋಃ ಕಥಂಚನ ।**
**ಅಜಿಹ್ಮಮಶಠಾಂ ಶುದ್ಧಾಂ ಜೀವೇದ್ಬ್ರಾಹ್ಮಣಜೀವಿಕಾಮ್ ॥ ೬**

ತನ್ನ ಜೀವನವನ್ನು ನಡೆಸುವುದಕ್ಕೋಸ್ಕರ, ಸಾಮಾನ್ಯ ಜನರಿಗೆ ಪ್ರಿಯವಾಗುವಂತಹ, ಹಾಸ್ಯಮಯವಾದ, ಸುಳ್ಳುಪೊಳ್ಳುಗಳಿಂದ ಕೂಡಿದ, ಲೋಕವಾರ್ತೆಯನ್ನು ಹರಡುತ್ತಾ ಇರಬಾರದು. ಸುಳ್ಳು ಮತ್ತು ಮೋಸಗಳಿಂದ ಬೆರೆಯದ ಮತ್ತು ವೈಶ್ಯಾದಿ ಇತರ ವರ್ಣದವರಿಗೆ ಮಾತ್ರ ಮೀಸಲಾದ ವೃತ್ತಿಗಳೊಡನೆ ಬೆರೆಯದ, ಶುದ್ಧ ಜೀವನವನ್ನು ಬ್ರಾಹ್ಮಣನು ನಡೆಸಬೇಕು.

**ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ।**
**ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ ॥ ೭**

ಕರ್ತವ್ಯದೃಷ್ಟಿಯಿಂದ ತನಗೂ ಕುಟುಂಬಕ್ಕೂ ಬೇಕಾಗುವಷ್ಟನ್ನು ಸಂಪಾದಿಸಿ, ಸಂತೋಷವನ್ನು ಹೊಂದಿ, ಸುಖವನ್ನು ಬಯಸುವವನು ಹಣದಾಸೆಯನ್ನು ಹಿಡಿತದಲ್ಲಿಡಬೇಕು. ಸಂತೋಷದಿಂದಲೇ ಸುಖವಾಗುವುದು; ಅಸಂತೋಷದಿಂದ ಧನಾರ್ಜನೆಯ ಪ್ರಯಾಸವೂ, ದೊರೆಯದ ಹಣದಿಂದಾಗಿ ಅತೃಪ್ತಿಯೂ ಹುಟ್ಟಿ, ದುಃಖಕ್ಕೆ ಕಾರಣವಾಗುವುದು.

**ನೇಹೇತಾರ್ಥಾನ್ಪ್ರಸಂಗೇನ ನ ವಿರುದ್ಧೇನ ಕರ್ಮಣಾ ।**
**ನ ವಿದ್ಯಮಾನೇಷ್ವರ್ಥೇಷು ನಾರ್ತ್ಯಾಮಪಿ ಯತಸ್ತತಃ ॥ ೮**

ಗಾಯನ ವಾದನಾದಿ ಪ್ರಸಂಗಗಳಿಂದ ಹಣ ಗಳಿಸಲು ಇಷ್ಟಪಡಬಾರದು; ಶಾಸ್ತ್ರನಿಷಿದ್ಧ ಕರ್ಮಗಳಿಂದಲೂ ಗಳಿಸಬಾರದು. ತನ್ನಲ್ಲಿಯೇ ಸಾಕಷ್ಟು ಹಣವಿರುವಾಗ ಧನಾಸೆಯನ್ನು ಮಾಡಬಾರದು. ಹಣವಿಲ್ಲದೆ ಕಷ್ಟಪಡುತ್ತಿರುವಾಗಲೂ, ಹೇಗೆಂದರೆ ಹಾಗೆ—ಅಯೋಗ್ಯರನ್ನು ಬೇಡಿ ಪಡೆಯುವುದರ ಮೂಲಕ, ಇತ್ಯಾದಿ—ಸಂಪಾದನೆ ಮಾಡಲು ಇಷ್ಟಪಡಬಾರದು.

**ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।**
**ವೇಷವಾಗ್ಬುದ್ಧಿಸಾದೃಶ್ಯಮಾಚರನ್ವಿಚರೇದಿಹ ॥** ೯

ವಯಸ್ಸು, ಕಾರ್ಯ, ಹಣ, ವಿದ್ಯೆ, ಕುಲ ಇವುಗಳಿಗೆ ಅನುಗುಣವಾಗಿ ವೇಷ, ಮಾತು, ಬುದ್ಧಿಗಳನ್ನು ಉಪಯೋಗಿಸುತ್ತಾ ಜೀವನ ನಡೆಸಬೇಕು.

(ಉದಾಹರಣೆಗೆ, ಯುವಕನಿಗೆ ಗಂಧಮಾಲ್ಯಾದಿಗಳಲ್ಲಿ ಇರುವ ಆಸಕ್ತಿ, ಮುದುಕನಿಗೆ ಅವುಗಳಲ್ಲಿರಬಾರದು.)

**ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಃ ಸದಾ ।**
**ದರ್ಶೇನ ಚಾರ್ಧಮಾಸಾಂತೇ ಪೌರ್ಣಮಾಸೇನ ಚೈವ ಹಿ ॥** ೧೦

**ಸಸ್ಯಾಂತೇ ನವಸಸ್ಯೇಷ್ಟ್ಯಾ ತಥರ್ತ್ವಂತೇ ದ್ವಿಜೋಽಧ್ವರೈಃ ।**
**ಪಶುನಾ ತ್ವಯನಸ್ಯಾದೌ ಸಮಾಂತೇ ಸೌಮಿಕೈರ್ಮಖೈಃ ॥** ೧೧

ಬೆಳಗ್ಗೆ ಮತ್ತು ಸಾಯಂಕಾಲಗಳಲ್ಲಿ ಅಗ್ನಿಹೋತ್ರವನ್ನು ಮಾಡಬೇಕು. ಪಕ್ಷಾಂತ್ಯಗಳಲ್ಲಿ ದರ್ಶ, ಪೌರ್ಣಮಾಸಗಳೆಂಬ ಯಜ್ಞಗಳನ್ನು ಮಾಡಬೇಕು. ಹಳೇ ಧಾನ್ಯ ಮುಗಿದು ಹೊಸ ಸಸಿಗಳನ್ನು ನೆಡುವ ಕಾಲದಲ್ಲಿ ನವಸಸ್ಯೇಷ್ಟಿಯೆಂಬ ಯಾಗವನ್ನು ಮಾಡಬೇಕು. ಋತುಗಳು ಮುಗಿಯುತ್ತಿರುವಾಗ ಚಾತುರ್ಮಾಸ್ಯವೆಂಬ ಯಾಗವನ್ನು ಮಾಡಬೇಕು. ಉತ್ತರ ದಕ್ಷಿಣಾಯನ ಕಾಲಗಳಲ್ಲಿ ಪಶುಯಾಗವನ್ನೂ, ವರ್ಷಾಂತ್ಯದಲ್ಲಿ ಸೋಮಯಾಗವನ್ನೂ ಮಾಡಬೇಕು.

(ಮುಂದೆ ಕೆಲವು ಶ್ಲೋಕಗಳಲ್ಲಿ ಸ್ನಾತಕನ ಧರ್ಮಗಳನ್ನು ಹೇಳಿದೆ.)

**ರಾಜತೋ ಧನಮನ್ವಿಚ್ಛೇತ್ಸಂಸೀದನ್ ಸ್ನಾತಕಃ ಕ್ಷುಧಾ ।**
**ಯಾಜ್ಯಾಂತೇವಾಸಿನೋರ್ವಾಪಿ ನ ತ್ವನ್ಯತ ಇತಿ ಸ್ಥಿತಿಃ ॥** ೧೨

ಹಸಿವಿನಿಂದ ಬಳಲುವ ಸ್ನಾತಕನು ರಾಜನಿಂದ, ತಾನು ಯಾರಿಂದ ಯಾಗ ಮಾಡಿಸುವನೋ ಅವನಿಂದ ಅಥವಾ ತನ್ನ ಶಿಷ್ಯನಿಂದ, ಹಣವನ್ನು ಪಡೆಯಬಹುದು; ಮತ್ತೊಬ್ಬರಿಂದ ಪಡೆಯಬಾರದು; ಇದು ನಿಯಮ.

**ನ ಸೀದೇತ್ಸ್ನಾತಕೋ ವಿಪ್ರಃ ಕ್ಷುಧಾ ಶಕ್ತಃ ಕಥಂಚನ ।**
**ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ ೧೩**

ಸ್ನಾತಕನಾದ ಬ್ರಾಹ್ಮಣನು ವಿಹಿತವಾದ ರೀತಿಯಲ್ಲಿ ಪ್ರತಿಗ್ರಹ ಮಾಡಲು ಸಮರ್ಥನಾಗಿದ್ದಾಗ ಖಂಡಿತವಾಗಿ ಹಸಿವಿನಿಂದ ಬಳಲಬಾರದು. ಐಶ್ವರ್ಯವಿರುವಾಗ, ಹರಿದ ಅಥವಾ ಕೊಳೆಯ ಬಟ್ಟೆಗಳನ್ನು ಧರಿಸಬಾರದು.

**ಕ್ಲೃಪ್ತಕೇಶನಖಶ್ಮಶ್ರುರ್ದಾಂತಃ ಶುಕ್ಲಾಂಬರಃ ಶುಚಿಃ ।**
**ಸ್ವಾಧ್ಯಾಯೇ ಚೈವ ಯುಕ್ತಃ ಸ್ಯಾನ್ನಿತ್ಯಮಾತ್ಮಹಿತೇಷು ಚ ॥ ೧೪**

ಕೂದಲು, ಉಗುರು, ಮೀಸೆಗಳನ್ನು ಕತ್ತರಿಸಿಕೊಂಡು, ಇಂದ್ರಿಯ ನಿಗ್ರಹವುಳ್ಳವನಾಗಿ, ಶುಚಿಯಾಗಿ, ಬಿಳಿಯ ವಸ್ತ್ರಗಳನ್ನು ಧರಿಸಿ, ತನ್ನ ಅಧ್ಯಯನದಲ್ಲಿ ನಿರತನಾಗಿ, ಯಾವಾಗಲೂ ಆವಶ್ಯಕವಾದ ಔಷಧೋಪ ಚಾರಗಳಿಂದ ತನ್ನ ಹಿತವನ್ನು ಕಾಪಾಡಿಕೊಳ್ಳಬೇಕು.

**ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂ ಯಾಂತಂ ಕದಾಚನ ।**
**ನೋಪಸೃಷ್ಟಂ ನ ವಾರಿಸ್ಥಂ ನ ಮಧ್ಯನಭಸೋ ಗತಮ್ ॥ ೧೫**

ಉದಿಸುತ್ತಿರುವ, ಮುಳುಗುತ್ತಿರುವ, ಗ್ರಹಣಹಿಡಿದಿರುವ, ನೀರಿ ನೊಳಗೆ ಪ್ರತಿಬಿಂಬಿತನಾದ ಅಥವಾ ಆಕಾಶದ ಮಧ್ಯದಲ್ಲಿರುವ (ನೆತ್ತಿಯ ಹತ್ತಿರ) ಸೂರ್ಯನನ್ನು ನೋಡಬಾರದು.

(ಬರಿಯ ಕಣ್ಣಿನಿಂದ ನೋಡಿದರೆ ಕಣ್ಣಿಗೆ ಅಪಾಯವಾಗಬಹುದು. ಗ್ರಹಣಾದಿ ಕಾಲಗಳಲ್ಲಿ ಸೂರ್ಯಪ್ರಕಾಶ ಮಂದವಾದರೂ, ಅದರ ಕಿರಣ ವಿಶೇಷಗಳು ಅಪಾಯಕಾರಿಗಳಾಗಿರಬಹುದು. ಹಾಗೆ ಸೂರ್ಯನನ್ನು ನೋಡಿ ಕುರುಡರಾದವರು ಇದ್ದಾರೆ.)

**ನ ಲಂಘಯೇದ್ವತ್ಸತಂತ್ರೀಂ ನ ಪ್ರಧಾವೇಚ್ಚ ವರ್ಷತಿ ।**
**ನ ಚೋದಕೇ ನಿರೀಕ್ಷೇತ ಸ್ವಂ ರೂಪಮಿತಿ ಧಾರಣಾ ॥ ೧೬**

ಕರುವಿಗೆ ಕಟ್ಟಿರುವ ಹಗ್ಗವನ್ನು ದಾಟಬಾರದು; ಮಳೆ ಬೀಳುತ್ತಿರುವಾಗ ಓಡಬಾರದು; ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳಬಾರದು.

**ನಾಶ್ನೀಯಾದ್ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಚಾಶ್ನತೀಮ್**
**ಕ್ಷುವತೀಂ ಜೃಂಭಮಾಣಾಂ ವಾ ನ ಚಾಸೀನಾಂ ಯಥಾಸುಖಮ್ ॥**

ಹೆಂಡತಿಯೊಡನೆ (ಒಂದೇ ಪಾತ್ರೆಯಲ್ಲಿ) ಉಣ್ಣಬಾರದು; ಊಟ ಮಾಡುತ್ತಿರುವ ಅವಳನ್ನು ನೋಡಬಾರದು; ಹಾಗೆಯೇ ಸೀನುತ್ತಿರುವಾಗ, ಆಕಳಿಸುತ್ತಿರುವಾಗ, ವಿಶ್ರಾಂತಿಗಾಗಿ ಸುಖಾಸೀನಳಾಗಿರುವಾಗ ನೋಡಬಾರದು. ("ಜಾಯಾಯಾ ಅಂತೇ ನಾಶ್ನೀಯಾದವೀರ್ಯವದಪತ್ಯಂ ಭವತಿ" ಇತಿ ಶ್ರುತಿಃ—ವಿಜ್ಞಾನೇಶ್ವರ.)

**ನಾಗ್ನಿಂ ಮುಖೇನೋಪಧಮೇನ್ನಗ್ನಾಂ ನೇಕ್ಷೇತ ಚ ಸ್ತ್ರಿಯಮ್ ।**
**ನಾಮೇಧ್ಯಂ ಪ್ರಕ್ಷಿಪೇದಗ್ನೌ ನ ಚ ಪಾದೌ ಪ್ರತಾಪಯೇತ್ ॥ ೧೮**

ಬೆಂಕಿಯನ್ನು ಬಾಯಿಯಿಂದ ಊದಿ ಪ್ರಜ್ವಲಿಸಬಾರದು—ಕೊಳವೆಯನ್ನು ಉಪಯೋಗಿಸಬೇಕು. (ಸಂಭೋಗಸಮಯವಲ್ಲದ ಕಾಲದಲ್ಲಿ) ಬೆತ್ತಲೆಯಾದ ಹೆಂಗಸನ್ನು ನೋಡಬಾರದು. ಮೂತ್ರಪುರೀಷಾದಿಗಳನ್ನು ಬೆಂಕಿಯಲ್ಲಿ ಹಾಕಬಾರದು. ಕೆಂಡದಮೇಲೆ ಪಾದವನ್ನು ಕಾಯಿಸಿಕೊಳ್ಳಬಾರದು. (ಬಟ್ಟೆಯನ್ನು ಬಿಸಿಮಾಡಿ ಒತ್ತಿಕೊಳ್ಳಬೇಕು)

**ನ ಕುರ್ವೀತ ವೃಥಾಚೇಷ್ಟಾಂ ನ ವಾರ್ಯಂಜಲಿನಾ ಪಿಬೇತ್ ।**
**ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ನ ಜಾತು ಸ್ಯಾತ್ಕುತೂಹಲೀ ॥ ೧೯**

ವ್ಯರ್ಥವಾಗಿ ಕೈಕಾಲುಗಳನ್ನು ಕುಣಿಸಬಾರದು; ಬೊಗಸೆಯಲ್ಲಿ ನೀರು ತುಂಬಿಕೊಂಡು ಕುಡಿಯಬಾರದು; ತೊಡೆಯಮೇಲಿಟ್ಟುಕೊಂಡು ಮೋದಕಾದಿ ಭಕ್ಷ್ಯಗಳನ್ನು ತಿನ್ನಬಾರದು; ತನಗೆ ಸಂಬಂಧವಿಲ್ಲದ ವಿಷಯದಲ್ಲಿ ಕುತೂಹಲವನ್ನು ತೋರಿಸಬಾರದು.

**ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್ ।**
**ಉಪವೀತಮಲಂಕಾರಂ ಸ್ರಜಂ ಕರಕಮೇವ ಚ ॥ ೨೦**

ಇತರರು ಉಪಯೋಗಿಸಿದ ಪಾದರಕ್ಷೆಗಳು, ವಸ್ತ್ರ, ಯಜ್ಞೋಪವೀತಾಲಂಕಾರಗಳು ಮತ್ತು ಕುಡಿಯುವ ಪಾತ್ರೆ ಇವುಗಳನ್ನು ಉಪಯೋಗಿಸಬಾರದು.

**ಬಾಲಾತಪಃ ಪ್ರೇತಧೂಮೋ ವರ್ಜ್ಯಂ ಭಿನ್ನಂ ತಥಾಸನಮ್ ।**
**ನ ಛಿಂದ್ಯಾನ್ನಖಲೋಮಾನಿ ದಂತೈರ್ನೋತ್ಪಾಟಯೇನ್ನಖಾನ್ ॥**

ಬೆಳಗಿನ ಬಿಸಿಲು, ಹೆಣ ಸುಟ್ಟ ಹೊಗೆ, ಮುರಿದ ಆಸನಗಳು ಇವನ್ನು ತ್ಯಜಿಸಬೇಕು. ಉಗುರು ಕೂದಲುಗಳನ್ನು (ತಾನೇ) ಕತ್ತರಿಸಬಾರದು; ಹಲ್ಲುಗಳಿಂದ ಉಗುರುಗಳನ್ನು ಕೀಳಬಾರದು.

**ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಧರ್ಮಾರ್ಥೌ ಚಾನುಚಿಂತಯೇತ್**
**ಕಾಯಕ್ಲೇಶಾಂಶ್ಚ ತನ್ಮೂಲಾನ್ ವೇದತತ್ತ್ವಾರ್ಥಮೇವ ಚ ॥ ೨೨**

ರಾತ್ರಿಯ ಕಡೆಯ ಯಾಮವಾದ ಬ್ರಾಹ್ಮಮುಹೂರ್ತವೆಂಬ ಸಮಯದಲ್ಲಿ ನಿದ್ರೆಯಿಂದ ಎಚ್ಚರಗೊಳ್ಳಬೇಕು. ಆಗ ಪರಸ್ಪರ ಅವಿರುದ್ಧವಾದ ಧರ್ಮಾರ್ಥಗಳು ಯಾವುವು, ಅವನ್ನು ಹೇಗೆ ಸಂಪಾದಿಸಬೇಕು, ಸಂಪಾದನೆಯಲ್ಲಿ ಶರೀರಕ್ಕೆ ಎಷ್ಟು ಆಯಾಸವಾಗುವುದು (ಪ್ರಯಾಸಕ್ಕೆ ತಕ್ಕಷ್ಟು ಲಾಭವಿಲ್ಲದ ಕಾರ್ಯವನ್ನು ಬಿಡುವುದಕ್ಕೆ), ವೇದಗಳ ನಿಜವಾದ ಆಶಯವೇನು ಎಂದು ಚಿಂತಿಸಬೇಕು.

**ಉತ್ಥಾಯಾವಶ್ಯಕಂ ಕೃತ್ವಾ ಕೃತಶೌಚಃ ಸಮಾಹಿತಃ ।**
**ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ಸ್ವಕಾಲೇ ಚಾಪರಾಂ ಚಿರಂ ॥**

ಹಾಸಿಗೆಯಿಂದ ಎದ್ದು ಹೊರಗೆ ಹೋಗಿ ಮಲಮೂತ್ರಾದಿ ವಿಸರ್ಜನೆ ಮಾಡಿ, ಅನಂತರ ಸ್ನಾನಮಾಡಿ ಶುಚಿಯಾಗಿ ಸಮಾಧಾನಚಿತ್ತದಿಂದ ಸೂರ್ಯೋದಯವಾಗುವವರೆಗೆ ಪ್ರಾತಃಸಂಧ್ಯಾ ಗಾಯತ್ರೀಜಪಮಾಡುತ್ತಾ ನಿಲ್ಲಬೇಕು. ಹೀಗೆಯೇ ಸಂಜೆಯಲ್ಲೂ ಸ್ವಕಾಲದಲ್ಲಿ (ಸೂರ್ಯನಿರುವಾಗಲೇ ಆರಂಭಿಸಿ ನಕ್ಷತ್ರೋದಯವಾಗುವವರೆಗೆ) ಬಹುಕಾಲದವರೆಗೆ ಜಪಮಾಡಬೇಕು..

**ಋಷಯೋ ದೀರ್ಘಸಂಧ್ಯತ್ವಾದ್ದೀರ್ಘಮಾಯುರವಾಪ್ನುಯುಃ ।**
**ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ॥ ೨೪**

ಋಷಿಗಳು ದೀರ್ಘಕಾಲ ಸಂಧ್ಯೋಪಾಸನೆ, ಜಪಮಾಡುವುದರಿಂದಲೇ ದೀರ್ಘಾಯುಸ್ಸು, ಪ್ರಜ್ಞೆ, ಯಶಸ್ಸು, ಬ್ರಹ್ಮತೇಜಸ್ಸು ಇವನ್ನೆಲ್ಲ ಪಡೆಯುವರು.

**ಶ್ರಾವಣ್ಯಾಂ ಪ್ರೌಷ್ಠಪದ್ಯಾಂ ವಾಪ್ಯುಪಾಕೃತ್ಯ ಯಥಾವಿಧಿ ।**
**ಯುಕ್ತಶ್ಛಂದಾಂಸ್ಯಧೀಯೀತ ಮಾಸಾನ್ವಿಪ್ರೋಽರ್ಧಪಂಚಮಾನ್ ॥**

ತಮ್ಮ ಗೃಹ್ಯಸೂತ್ರಗಳಿಗೆ ಅನುಸಾರವಾಗಿ ಶ್ರಾವಣ ಅಥವಾ ಭಾದ್ರಪದಮಾಸದ ಪೌರ್ಣಿಮೆಯ ದಿನ ಉಪಾಕರ್ಮವೆಂಬ ಕರ್ಮವನ್ನು (ವೇದಾರಂಭಕ್ಕಾಗಿ) ಮಾಡಿ, ಉದ್ಯೋಗಶೀಲನಾಗಿ ದ್ವಿಜನು ನಾಲ್ಕೂವರೆ ತಿಂಗಳವರೆಗೆ ವೇದಾಭ್ಯಾಸ ಮಾಡಬೇಕು.

**ಪುಷ್ಯೇ ತು ಛಂದಸಾಂ ಕುರ್ಯಾದ್ಬಹಿರುತ್ಸರ್ಜನಂ ದ್ವಿಜಃ ।**
**ಮಾಘಶುಕ್ಲಸ್ಯ ವಾ ಪ್ರಾಪ್ತೇ ಪೂರ್ವಾಹ್ಣೇ ಪ್ರಥಮೇಽಹನಿ ॥ ೨೬**

ಶ್ರಾವಣದಲ್ಲಿ ಆರಂಭಮಾಡಿದವರು ಪುಷ್ಯಮಾಸದ ಶುಕ್ಲಪಕ್ಷದ ಪಾಡ್ಯದ ದಿನ ಮಧ್ಯಾಹ್ನಕ್ಕೆ ಮೊದಲೂ ಮತ್ತು ಭಾದ್ರಪದದಲ್ಲಿ ವೇದಾರಂಭ ಮಾಡಿದವರು ಮಾಘ ಶುಕ್ಲ ಪ್ರಥಮೆಯ ಪೂರ್ವಾಹ್ಣದಲ್ಲಿಯೂ ಗ್ರಾಮದ ಹೊರಗೆ ಹೋಗಿ ಉತ್ಸರ್ಜನವೆಂಬ ಕರ್ಮವನ್ನು ಮಾಡಬೇಕು.

**ವಿದ್ಯುತ್‌ಸ್ತನಿತವರ್ಷೇಷು ಮಹೋಲ್ಕಾನಾಂ ಚ ಸಂಪ್ಲವೇ ।**
**ಆಕಾಲಿಕಮನಧ್ಯಾಯಮೇತೇಷು ಮನುರಬ್ರವೀತ್ ॥ ೨೭**

**ಚೋರೈರುಪಪ್ಲುತೇ ಗ್ರಾಮೇ ಸಂಭ್ರಮೇ ಚಾಗ್ನಿಕಾರಿತೇ ।**
**ಆಕಾಲಿಕಮನಧ್ಯಾಯಂ ವಿದ್ಯಾತ್ಸರ್ವಾದ್ಭುತೇಷು ಚ ॥ ೨೮**

(ಅಷ್ಟಮೀ, ಚತುರ್ದಶೀ, ಪೂರ್ಣಿಮಾ, ಅಮಾವಾಸ್ಯಾ, ಪಾಡ್ಯ ಇವು ಸಾಮಾನ್ಯವಾಗಿ ಅಧ್ಯಯನ ಮಾಡಬಾರದ ದಿನಗಳು.) ಮಿಂಚು, ಗುಡುಗು, ಭಾರಿಮಳೆ ಇರುವಾಗ, ದೊಡ್ಡ ಉಲ್ಕಾಪಾತ ಕಾಣಿಸಿಕೊಂಡಾಗ ಆಕಾಲದ ಅನಧ್ಯಯನ ಸಮಯಗಳೆಂದು ಮನುವಿನ ಅಭಿಪ್ರಾಯ. ಹಾಗೆಯೇ ಕಳ್ಳರು ಮುತ್ತಿರುವ ಗ್ರಾಮದಲ್ಲಿ, ಗ್ರಾಮದಲ್ಲಿನ ಮನೆಗಳಿಗೆ ಬೆಂಕಿ ಹತ್ತಿ ಜನರಿಗೆ ಗಾಬರಿಯಾಗಿರುವಾಗ ಅಥವಾ ಭೂಮ್ಯಾಕಾಶಗಳಲ್ಲಿ ಅದ್ಭುತವ್ಯಾಪಾರಗಳು ಕಂಡುಬಂದಾಗ, ಅಕಾಲಿಕ ಅನಧ್ಯಾಯವೆಂದು ಪರಿಗಣಿಸಬೇಕು. ಆ ಕಾಲ ಮುಗಿದಮೇಲೆ ಅಧ್ಯಯನ ಮಾಡಬೇಕು.

**ನ ಸ್ನಾನಮಾಚರೇದ್ಭುಕ್ತ್ವಾ ನಾತುರೋ ನ ಮಹಾನಿಶಿ ।**
**ನ ವಾಸೋಭಿಃ ಸಹಾಜಸ್ರಂ ನಾವಿಜ್ಞಾತೇ ಜಲಾಶಯೇ ॥ ೨೯**

(ವಿಶೇಷ ಕಾರಣವಿಲ್ಲದೆ) ಊಟಮಾಡಿದಮೇಲೆ ಸ್ನಾನಮಾಡಬಾರದು; ರೋಗಿಯಾದವನು ಸ್ನಾನಮಾಡಬಾರದು; ಅರ್ಧರಾತ್ರಿಯಲ್ಲಿಯಾಗಲಿ, ಯಾವಾಗಲೂ ಉಟ್ಟ ಎಲ್ಲ ಬಟ್ಟೆಗಳೊಡನೆಯಾಗಲಿ, ಅಪರಿಚಿತವಾದ ನದಿ ಮೊದಲಾದ ಜಲಾಶಯಗಳಲ್ಲಿ ಮುಳುಗಿಯಾಗಲಿ ಸ್ನಾನಮಾಡಬಾರದು.

(ಆರೋಗ್ಯ ಕೆಡಬಾರದು, ಮೊಸಳೆ ಮುಂತಾದ ಕ್ರೂರಜಲಜಂತುಗಳಿಂದ ತೊಂದರೆಯಾಗಬಾರದೆಂದು ಉದ್ದೇಶ.)

**ವೈರಿಣಂ ನೋಪಸೇವೇತ ಸಹಾಯಂ ಚೈವ ವೈರಿಣಃ ।**
**ಅಧಾರ್ಮಿಕಂ ತಸ್ಕರಂ ಚ ಪರಸ್ಯೈವ ಚ ಯೋಷಿತಮ್ ॥ ೩೦**

ಶತ್ರುವನ್ನಾಗಲಿ, ಅವನ ಸಹಾಯಕನನ್ನಾಗಲಿ ಸೇವಿಸಬಾರದು; ಹಾಗೆಯೇ ಅಧರ್ಮನಿರತನಾದವನನ್ನೂ, ಕಳ್ಳನನ್ನೂ, ಪರಸ್ತ್ರೀಯರನ್ನೂ ಸೇವಿಸಬಾರದು.

**ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।**
**ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಮ್ ॥ ೩೧**

ಮನುಷ್ಯನ ಆಯುಸ್ಸನ್ನೇ ನಾಶಪಡಿಸುವುದರಲ್ಲಿ ಪರಸ್ತ್ರೀಗಮನದಂತಹುದು ಈ ಲೋಕದಲ್ಲಿ ಮತ್ತೆ ಯಾವುದೂ ಕಾರಣವಾಗುವುದಿಲ್ಲ.

**ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ ।**
**ಆಮೃತ್ಯೋಃ ಶ್ರಿಯಮನ್ವಿಚ್ಛೇನ್ನೈನಾಂ ಮನ್ಯೇತ ದುರ್ಲಭಾಮ್॥**

ಧನಲಾಭಕ್ಕಾಗಿ ಪ್ರಯತ್ನಪಟ್ಟವನು, ತನ್ನ ಹಿಂದಿನ ವ್ಯರ್ಥೋದ್ಯಮಗಳಿಗಾಗಿ ತನ್ನನ್ನೇ (ನಿರ್ಭಾಗ್ಯನೆಂದು) ನಿಂದಿಸಿಕೊಳ್ಳಬಾರದು. ಸಾಯುವವರೆಗೂ ಆ ಧನಪ್ರಾಪ್ತಿಗಾಗಿ ಪ್ರಯತ್ನಪಡುತ್ತಲೇ ಇರಬೇಕು; ಅದು ಅಸಾಧ್ಯವೆಂದು ತಿಳಿಯಬಾರದು.

**ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾತ್ ನ ಬ್ರೂಯಾತ್ಸತ್ಯಮಪ್ರಿಯಮ್ ।**
**ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ॥ ೩೩**

ಸತ್ಯವನ್ನು ಹೇಳಬೇಕು; ಪ್ರಿಯವಾದುದನ್ನು ಹೇಳಬೇಕು; ಆದರೆ ಅಪ್ರಿಯವಾದ ಸತ್ಯವನ್ನು ಹೇಳಬಾರದು; ಹಾಗೆಯೇ ಪ್ರಿಯವಾದರೂ ಅಸತ್ಯವನ್ನು ಆಡಬಾರದು. ಇದೇ (ವೇದಮೂಲವಾದ) ಸನಾತನಧರ್ಮ

**ಹೀನಾಂಗಾನತಿರಿಕ್ತಾಂಗಾನ್ವಿದ್ಯಾಹೀನಾನ್ವಯೋಧಿಕಾನ್ ।**
**ರೂಪದ್ರವ್ಯವಿಹೀನಾಂಶ್ಚ ಜಾತಿಹೀನಾಂಶ್ಚ ನಾಕ್ಷಿಪೇತ್ ॥ ೩೪**

ಕಣ್ಣು ಕೈಕಾಲುಗಳು ಊನವಾಗಿರುವವರು, ಹೆಚ್ಚಾದ ಅವಯುವಗಳು ಉಳ್ಳವರು (ಆರು ಬೆರಳುಗಳು, ಇತ್ಯಾದಿ), ವಿದ್ಯಾವಂತರಲ್ಲದವರು, ಮುದುಕರು, ಕುರೂಪಿಗಳು, ಬಡವರು, ಕೀಳುಜಾತಿಯುವರು ಇವರನ್ನೆಲ್ಲ (ಆಯಾ ದೋಷಗಳನ್ನು ಎತ್ತಿ ಆಡಿ) ನಿಂದಿಸಬಾರದು.

**ಮೈತ್ರಂ ಪ್ರಸಾಧನಂ ಸ್ನಾನಂ ದಂತಧಾವನಮಂಜನಮ್ ।**
**ಪೂರ್ವಾಹ್ಣ ಏವ ಕುರ್ವೀತ ದೇವತಾನಾಂ ಚ ಪೂಜನಮ್ ॥ ೩೫**

ಮಲವಿಸರ್ಜನೆ, ದೇಹದ ಅಲಂಕಾರ (ತಲೆ ಬಾಚುವುದು, ಇತ್ಯಾದಿ), ಸ್ನಾನ, ಹಲ್ಲುಜ್ಜುವುದು, ಅಂಜನ ಹಚ್ಚಿಕೊಳ್ಳುವುದು, ದೇವತಾರ್ಚನ ಇವನ್ನೆಲ್ಲ ದಿನದ ಪೂರ್ವಾರ್ಧದಲ್ಲಿ–ಮಧ್ಯಾಹ್ನದ ಮೊದಲೇ—ಮಾಡಿಕೊಳ್ಳಬೇಕು.

**ಅಭಿವಾದಯೇದ್ವೃದ್ಧಾಂಶ್ಚ ದದ್ಯಾಚ್ಚೈವಾಸನಂ ಸ್ವಕಮ್ ।**
**ಕೃತಾಂಜಲಿರುಪಾಸೀತ ಗಚ್ಛತಃ ಪೃಷ್ಠತೋಽನ್ವಿಯಾತ್ ॥ ೩೬**

ಹಿರಿಯರಾದ ಗುರುಗಳು ತನ್ನ ಮನೆಗೆ ಬಂದಾಗ ಗೌರವದಿಂದ ಎದುರುಗೊಂಡು ಅವರಿಗೆ ನಮಸ್ಕಾರ ಮಾಡಬೇಕು; ತನ್ನ ಆಸನವನ್ನೇ ಅವರಿಗೆ ಸಮರ್ಪಿಸಬೇಕು; ಕೈಕಟ್ಟಿಕೊಂಡು ಅವರ ಮಗ್ಗುಲಲ್ಲಿ ನಿಂತಿರಬೇಕು. ಅವರು ಹೊರಗೆ ಹೊರಟಾಗ ಅವರನ್ನು ಹಿಂಬಾಲಿಸಿ ತಾನೂ ಹೊರಡಬೇಕು.

**ಆಚಾರಾಲ್ಲಭತೇ ಹ್ಯಾಯುರಾಚಾರಾದೀಪ್ಸಿತಾಃ ಪ್ರಜಾಃ ।**
**ಆಚಾರಾದ್ಧನಮಕ್ಷಯ್ಯಮಾಚಾರೋ ಹಂತ್ಯಲಕ್ಷಣಮ್ ॥ ೩೭**

ಆಚಾರದಿಂದ ಆಯುಸ್ಸು ಅಭಿವೃದ್ಧಿಹೊಂದುವುದು; ಸದಾಚಾರದಿಂದ ಅಭಿಮತವಾದ ಪುತ್ರಾದಿ ಸಂತಾನಪ್ರಾಪ್ತಿಯಾಗುವುದು; ಆಚಾರದಿಂದ

ವಿಪುಲಧನ ಸಿಗುವುದು; ಅಶುಭಸೂಚಕಗಳಾದ ದೇಹದ ಅಲಕ್ಷಣಗಳನ್ನೂ ಆಚಾರವು ನಿವಾರಿಸುವುದು.

**ದುರಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ।**
**ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥ ೩೮**

ದುರಾಚಾರವುಳ್ಳ ಮನುಷ್ಯನು ಲೋಕದಲ್ಲಿ ನಿಂದಿತನಾಗುವನು, ಸದಾ ದುಃಖವನ್ನು ಹೊಂದಿರುವನು, ರೋಗಪೀಡಿತನಾಗಿರುವನು ಮತ್ತು ಅಲ್ಪಾಯುಷ್ಯನೂ ಆಗುವನು.

**ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಮ್ ।**
**ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ ॥ ೩೯**

ಪರಪ್ರಾರ್ಥನೆಯಿಂದ ಲಭ್ಯವಾಗುವ ಪರಾಧೀನವಾದುದೆಲ್ಲ ದುಃಖವನ್ನುಂಟುಮಾಡುವುದು; ತನ್ನ ಅಧೀನವಾದುದೆಲ್ಲ ಸುಖಸಾಧನವು; ಹೀಗೆಂದು ಸುಖ ಮತ್ತು ದುಃಖಗಳ ಲಕ್ಷಣಗಳನ್ನು ಸಂಕ್ಷೇಪವಾಗಿ ತಿಳಿಯಬೇಕು.

**ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ಪರಿತೋಷೋಽಂತರಾತ್ಮನಃ ।**
**ತತ್ಪ್ರಯತ್ನೇನ ಕುರ್ವೀತ ವಿಪರೀತಂ ತು ವರ್ಜಯೇತ್ ॥ ೪೦**

ಯಾವ ಕೆಲಸವನ್ನು ಮಾಡಿದರೆ ತನ್ನ ಅಂತರಾತ್ಮನಿಗೆ ಸಂತೋಷವಾಗುವುದೋ ಅಂತಹುದನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು; ಅದಕ್ಕೆ ವಿಪರೀತವಾಗಿ ಅತುಷ್ಟಿಕರವಾದುದನ್ನು ಬಿಡಬೇಕು.

**ಪರಸ್ಯ ದಂಡಂ ನೋದ್ಯಚ್ಛೇತ್ ಕ್ರುದ್ಧೋ ನೈವ ನಿಪಾತಯೇತ್ ।**
**ಅನ್ಯತ್ರ ಪುತ್ರಾತ್ ಶಿಷ್ಯಾದ್ವಾ ಶಿಷ್ಟ್ಯರ್ಥಂ ತಾಡಯೇತ್ತು ತೌ ॥ ೪೧**

ಮಗ ಅಥವಾ ಶಿಷ್ಯರನ್ನು ಬಿಟ್ಟು ಇತರರನ್ನು ಹೊಡೆಯುವುದಕ್ಕಾಗಿ ದಂಡವನ್ನು ಎತ್ತಬಾರದು; ಕೋಪದಿಂದ ಅವರನ್ನು ಹೊಡೆದು ಬೀಳಿಸಬಾರದು. ಪುತ್ರ ಮತ್ತು ಶಿಷ್ಯರನ್ನು ಅವರ ತಪ್ಪನ್ನು ತಿದ್ದುವುದಕ್ಕಾಗಿ ('ರಜ್ಜ್ವಾ ವೇಣುದಲೇನ ವಾ' ಎಂದು ಹೇಳಿರುವಂತೆ), ಸಣ್ಣ ಹಗ್ಗ ಅಥವಾ ಬಿದುರಿನ ಸೀಳಿನಿಂದ ಹೊಡೆಯಬೇಕು. (ಅವರನ್ನು ಉಗ್ರವಾಗಿ ಹೊಡೆಯಬಾರದು.)

*

**ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ ।**
**ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥** ೪೨

ಬೀಜವನ್ನು ಹಾಕಿದಕೂಡಲೆ ಹೇಗೆ ಭೂಮಿಯು ಫಲ ಪುಷ್ಪ ಧಾನ್ಯಾದಿ ಭರಿತವಾಗುವುದಿಲ್ಲವೋ, ಹಾಗೆಯೇ ಆಚರಿಸಲ್ಪಟ್ಟ ಅಧರ್ಮವೂ ತತ್‌ಕ್ಷಣವೇ ಫಲವನ್ನು ಕೊಡುವುದಿಲ್ಲ; ಮೆಲ್ಲಮೆಲ್ಲನೆ ಪುನರಾವರ್ತನೆ ಹೊಂದಿ, ಕಾಲದಿಂದ ಪಕ್ವವಾಗಿ, ಅಧರ್ಮಕಾರಿಯಾದವನ ಮೂಲವಾದ ಧನ ಧಾನ್ಯ ದೇಹಾದಿಗಳನ್ನು ಕತ್ತರಿಸುತ್ತದೆ

**ಯದಿ ನಾತ್ಮನಿ ಪುತ್ರೇಷು ನ ಚೇತ್ಪುತ್ರೇಷು ನಪ್ತೃಷು ।**
**ನ ತ್ವೇವ ತು ಕೃತೋಽಧರ್ಮಃ ಕರ್ತುರ್ಭವತಿ ನಿಷ್ಫಲಃ ॥** ೪೩

ಕೆಲಸಮಾಡುವವನಿಗೆ ಫಲವಿಲ್ಲದಿರುವುದಿಲ್ಲ. ಒಬ್ಬನು ಆಚರಿಸಿದ ಅಧರ್ಮ ಅವನಿಗಲ್ಲದಿದ್ದರೆ ಅವನ ಮಕ್ಕಳಿಗೆ ಕೇಡನ್ನು ಉಂಟುಮಾಡುವುದು; ಒಂದುವೇಳೆ ಮಕ್ಕಳಿಗೆ ಕೇಡು ತಟ್ಟದಿದ್ದರೆ ಮೊಮ್ಮಕ್ಕಳಿಗಂತೂ ತಪ್ಪದೆ ದುಷ್ಫಲ ಸಲ್ಲುವುದು.

**ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।**
**ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ನ ರಿಷ್ಯತೇ ॥** ೪೪

ಮನುಷ್ಯನು ಅನೇಕ ವಿಧವಾದ ಶಾಸ್ತ್ರವಾಕ್ಯಗಳಿಂದ ಸಂದೇಹಗ್ರಸ್ತನಾದರೆ, ತನ್ನ ತಂದೆ, ತಾತ ಮುಂತಾದ ಪೂರ್ವಜರು ಯಾವ ಸನ್ಮಾರ್ಗದಲ್ಲಿ ನಡೆದುಕೊಂಡರೋ (ಕುಲಕ್ರಮವಾದ ಸದಾಚಾರ), ಆ ದಾರಿಯಲ್ಲಿಯೇ ನಡೆದರೆ ಅಧರ್ಮದಿಂದ ಬಾಧಿತನಾಗುವುದಿಲ್ಲ.

**ಪ್ರತಿಗ್ರಹಸಮರ್ಥೋಽಪಿ ಪ್ರಸಂಗಂ ತತ್ರ ವರ್ಜಯೇತ್ ।**
**ಪ್ರತಿಗ್ರಹೇಣ ಹ್ಯಸ್ಯಾಶು ಬ್ರಾಹ್ಮಂ ತೇಜಃ ಪ್ರಶಾಮ್ಯತಿ ॥** ೪೫

ವಿದ್ಯೆ, ತಪಸ್ಸು, ಸದಾಚಾರಗಳಿಂದ ದಾನಸ್ವೀಕಾರಕ್ಕೆ ಅಧಿಕಾರಿಯಾಗಿದ್ದರೂ ಅದರಲ್ಲಿ ವಿಶೇಷಾಸಕ್ತಿಯನ್ನು ಬಿಡಬೇಕು (ಜೀವನಕ್ಕೆ ಅಗತ್ಯವಾಗುವಷ್ಟನ್ನು ತೆಗೆದುಕೊಳ್ಳಬಹುದು); ಏಕೆಂದರೆ, ವಿಶೇಷವಾಗಿ ಪ್ರತಿಗ್ರಹವನ್ನು ಮಾಡುತ್ತಿರುವುದರಿಂದ ಅವನಲ್ಲಿರುವ ಬ್ರಹ್ಮತೇಜಸ್ಸೇ ನಾಶವನ್ನು ಹೊಂದುತ್ತದೆ.

**ನ ದ್ರವ್ಯಾಣಾಮವಿಜ್ಞಾಯ ವಿಧಿಂ ಧರ್ಮ್ಯಂ ಪ್ರತಿಗ್ರಹೇ ।**
**ಪ್ರಾಜ್ಞಃ ಪ್ರತಿಗ್ರಹಂ ಕುರ್ಯಾದವಸೀದನ್ನಪಿ ಕ್ಷುಧಾ ॥ ೪೬**

ಆಯಾ ಪದಾರ್ಥಗಳ ಪ್ರತಿಗ್ರಹಕ್ಕೆ ಬೇಕಾದ ಗ್ರಾಹ್ಯದೇವತೆಗಳ ಮಂತ್ರವನ್ನು ತಿಳಿಯದಿದ್ದರೆ, ಹಸಿವಿನಿಂದ ಪೀಡಿತನಾಗಿದ್ದರೂ ಪ್ರಾಜ್ಞನು ಪ್ರತಿಗ್ರಹಮಾಡಬಾರದು (ವಿಧಿಪೂರ್ವಕವಾಗಿ ದಾನವನ್ನು ಸ್ವೀಕರಿಸದಿದ್ದರೆ ಹಾನಿಯೇ ಆದೀತು.)

**ಹಿರಣ್ಯಂ ಭೂಮಿಮಶ್ವಂ ಗಾಮನ್ನಂ ವಾಸಸ್ತಿಲಾನ್ ಘೃತಮ್ ।**
**ಪ್ರತಿಗೃಹ್ಣನ್ನವಿದ್ವಾಂಸ್ತು ಭಸ್ಮೀಭವತಿ ದಾರುವತ್ ॥ ೪೭**

ಬಂಗಾರ, ಭೂಮಿ, ಕುದುರೆ, ಹಸು, ಅನ್ನ, ಬಟ್ಟೆ, ಎಳ್ಳು, ತುಪ್ಪ ಇವನ್ನು ವೇದವಿದ್ಯೆಯಿಲ್ಲದವನು ತೆಗೆದುಕೊಂಡರೆ, ಬೆಂಕಿ ತಗುಲಿದ ಮರ ದಂತೆ ಸುಟ್ಟು ನಾಶವಾಗುತ್ತಾನೆ.

**ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।**
**ವ್ರತೇನ ಪಾಪಂ ಪ್ರಚ್ಛಾದ್ಯ ಕುರ್ವನ್ ಸ್ತ್ರೀಶೂದ್ರದಂಭನಮ್॥೪೮**

ಪಾಪವನ್ನು ಮಾಡಿ, ಧರ್ಮದ ನೆಪದಿಂದ ಪ್ರಾಜಾಪತ್ಯಾದಿ ವ್ರತ ಗಳನ್ನು ಆಚರಿಸಬಾರದು. ಸ್ತ್ರೀ ಶೂದ್ರರೇ ಮೊದಲಾದ ವೇದಜ್ಞಾನವಿಲ್ಲದ ಜನರಿಗೆ ಮೋಹವನ್ನು ಉಂಟುಮಾಡಿ, ಮಾಡಿದ ಪಾಪವನ್ನು ವ್ರತದಿಂದ ಮರೆಮಾಚಬಾರದು.

(ಪಾಪಮಾಡಿದುದು ತಪ್ಪೆಂದು ತಿಳಿದು, ದುಃಖಪಟ್ಟು, ಪ್ರಾಯಶ್ಚಿತ್ತ ಕ್ಕಾಗಿ ವ್ರತಮಾಡಬೇಕು. ಮತ್ತೆ ಅದೇ ಪಾಪವನ್ನು ಮಾಡಬಾರದು; ಹಾಗಿಲ್ಲದಿದ್ದರೆ ಆ ವ್ರತವು ದಂಭಾಚಾರವಾಗುವುದು.)

**ಮತ್ತಕ್ರುದ್ಧಾತುರಾಣಾಂ ಚ ನ ಭುಂಜೀತ ಕದಾಚನ ।**
**ಕೇಶಕೀಟಾವಪನ್ನಂ ಚ ಪದಾ ಸ್ಪೃಷ್ಟಂ ಚ ಕಾಮತಃ ॥ ೪೯**

**ಭ್ರೂಣಘ್ನಾವೇಕ್ಷಿತಂ ಚೈವ ಸಂಸ್ಪೃಷ್ಟಂ ಚಾಪ್ಯುದಕ್ಯಯಾ ।**
**ಪತತ್ರಿಣಾವಲೀಢಂ ಚ ಶುನಾ ಸಂಸ್ಪೃಷ್ಟಮೇವ ಚ ॥ ೫೦**

**ಗವಾ ಚಾನ್ನಮುಪಘ್ರಾತಂ ಘುಷ್ಟಾನ್ನಂ ಚ ವಿಶೇಷತಃ ।**
**ಗಣಾನ್ನಂ ಗಣಿಕಾನ್ನಂ ಚ ವಿದುಷಾಂ ಚ ಜುಗುಪ್ಸಿತಮ್ ॥ ೫೧**

**ಅಭಿಶಪ್ತಸ್ಯ ಷಂಢಸ್ಯ ಪುಂಶ್ಚಲ್ಯಾ ದಾಂಭಿಕಸ್ಯ ಚ ।**
**ಶುಕ್ತಂ ಪರ್ಯುಷಿತಂ ಚೈವ ಶೂದ್ರಸ್ಯೋಚ್ಛಿಷ್ಟಮೇವ ಚ ॥** ೫೨

**ನೃಶಂಸರಾಜರಜಕಕೃತಘ್ನವಧಜೀವಿನಾಮ್ ।**

**ನೃಷ್ಯಂತಿ ಯೇ ಚೋಪಪತಿಂ ಸ್ತ್ರೀಜಿತಾನಾಂ ಚ ಸರ್ವಶಃ ।**
**ಅನಿರ್ದಶಂ ಚ ಪ್ರೇತಾನ್ನಮತುಷ್ಟಿಕರಮೇವ ಚ ॥** ೫೩

ಮುಂದೆ ಹೇಳುವ ಬಗೆಗಳ ಅನ್ನವನ್ನು ತಿನ್ನಬಾರದು :—ಮದ್ಯಪಾನ ಮಾಡಿದವರು, ಕೋಪಿಷ್ಠರು, ರೋಗಿಗಳು ಇವರ ಅನ್ನ; ಕೂದಲು ಅಥವಾ ಕ್ರಿಮಿಕೀಟಗಳು ಬೆರೆತ ಅನ್ನ; ಬೇಕೆಂತಲೇ ಕಾಲಿನಿಂದ ಮುಟ್ಟಲ್ಪಟ್ಟದ್ದು; ಭ್ರೂಣಹತ್ಯೆ ಮಾಡಿದವರು ನೋಡಿದ ಅಥವಾ ಮುಟ್ಟಾದವರು ಮುಟ್ಟಿದ ಅನ್ನ; ಪಕ್ಷಿಗಳು ಬಾಯಿ ಇಟ್ಟದ್ದು; ನಾಯಿ ನೆಕ್ಕಿದುದು, ಹಸು ಮೂಸಿದುದು; "ಯಾರಿಗೆ ಬೇಕು ಈ ಅನ್ನ?" ಎಂದು ಘೋಷಿತವಾದುದು; ಸಮಾರಾಧನೆಯ ಗುಂಪಿನದು; ವೇಶ್ಯೆಯ ಅನ್ನ; ವಿದ್ವಾಂಸರಿಂದ ನಿಂದಿತ ವಾದುದು; ಮಹಾಪಾತಕಿ ಎಂದು ಲೋಕನಿಂದಿತವಾದವನ, ನಪುಂಸಕನ, ಹಾದರಗಿತ್ತಿಯ, ದಾಂಭಿಕನ ಅನ್ನ; ಹಳಸಿ ಹುಳಿಯಾದುದು, ರಾತ್ರಿ ಮಿಕ್ಕು ತಂಗಳಾದುದು, ಉಂಡು ಮಿಕ್ಕ ಉಚ್ಛಿಷ್ಟವಾದುದು; ಯಾವನು ಜಾರೆಯಾದ ತನ್ನ ಪತ್ನಿಯ ಉಪಪತಿಯನ್ನು ಮನೆಯಲ್ಲಿಯೇ ಸಹಿಸಿ ಕೊಂಡಿರುವನೋ ಅವನ ಅನ್ನ; ಎಲ್ಲ ವಿಷಯಗಳಲ್ಲಿಯೂ ಹೆಂಡತಿ ಹೇಳಿದಂತೆ ಕೇಳುವವನ ಅನ್ನ; ಅಶೌಚದಲ್ಲಿರುವವರ ಅನ್ನ; ಪ್ರೇತಾನ್ನ ಮತ್ತು ಸಂತೋಷವನ್ನು ಉಂಟುಮಾಡದ ಅನ್ನ.

**ನ ವಿಸ್ಮಯೇತ ತಪಸಾ ವದೇದಿಷ್ಟ್ವಾ ಚ ನಾನೃತಮ್ ।**
**ನಾರ್ತೋಽಪ್ಯಪವದೇದ್ವಿಪ್ರಾನ್ನ ದತ್ವಾ ಪರಿಕೀರ್ತಯೇತ್ ॥** ೫೪

ತಾನು ಮಾಡಿದ ತಪಸ್ಸಿನಿಂದ ಗರ್ವಪಡಬಾರದು, ಅಥವಾ ಚಾಂದ್ರಾಯಣಾದಿ ತಪಸ್ಸುಮಾಡಿದಮೇಲೆ, "ಇಷ್ಟು ಕಷ್ಟಗಳನ್ನು ಸಹಿಸಿ ಹೇಗೆ ನಾನು ತಪಸ್ಸನ್ನು ಮಾಡಿ ಮುಗಿಸಿದೆ" ಎಂದು ಆಶ್ಚರ್ಯಪಡಬಾರದು. ಯಜ್ಞಮಾಡಿದಮೇಲೆ ಸುಳ್ಳುಹೇಳಬಾರದು. ಬ್ರಾಹ್ಮಣರಿಂದ ಪೀಡಿತ ನಾದರೂ ಅವರನ್ನು ಬೈಯಬಾರದು. ತಾನು ಕೊಟ್ಟುದನ್ನು ಹೇಳಿಕೊಳ್ಳ ಬಾರದು.

**ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠಸಮಂ ಕ್ಷಿತೌ ।**
**ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥ ೫೫**

**ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ ।**
**ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಮ್ ॥ ೫೬**

ಮೃತಪುರುಷನ ದೇಹವನ್ನು ಕಟ್ಟಿಗೆ ಅಥವಾ ಮಣ್ಣುಹೆಂಟೆಗೆ ಸಮವೆಂದು ಭಾವಿಸಿ, ನೆಲದಲ್ಲಿಟ್ಟು ಅದನ್ನು ತ್ಯಜಿಸಿ, ಬಂಧುಗಳು ವಿಮುಖರಾಗಿ ಮನೆಗೆ ಹೋಗಿಬಿಡುತ್ತಾರೆ; ಆದರೆ ಸತ್ತವನು ಮಾಡಿದ್ದ ಧರ್ಮವು ಅವನನ್ನು ಹಿಂಬಾಲಿಸುವುದು. ಆದುದರಿಂದ ತನಗೆ ಸಹಾಯಕವಾಗಿರಲು ಧರ್ಮವನ್ನು ಸ್ವಲ್ಪಸ್ವಲ್ಪವಾಗಿ ಯಾವಾಗಲೂ ಸೇರಿಸಿಕೊಳ್ಳುತ್ತಿರಬೇಕು. ಧರ್ಮವು ಸಹಾಯಕವಾಗಿದ್ದರೆ, ದುಸ್ತರವಾದ ಮತ್ತು ಅಂಧಕಾರಮಯವಾದ ನರಕ ಲೋಕದ ದುಃಖಗಳನ್ನು ದಾಟಬಹುದು.

**ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ಸಹ ।**
**ನಿನೀಷುಃ ಕುಲಮುತ್ಕರ್ಷಮಧಮಾನಧಮಾಂಸ್ತ್ಯಜೇತ್ ॥ ೫೭**

ತನ್ನ ವಂಶವನ್ನು ಉತ್ತಮಗೊಳಿಸಿಕೊಳ್ಳುವುದಕ್ಕಾಗಿ, ತನಗಿಂತ ವಿದ್ಯೆ, ಆಚಾರ, ಜನ್ಮ ಮೊದಲಾದವುಗಳಿಂದ ಉತ್ತಮರಾದವರೊಡನೆ ವಿವಾಹಾದಿ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕು; ತನಗಿಂತ ಹೀನರಾದವರ ಸಂಬಂಧವನ್ನು ಬಿಡಬೇಕು.

(ಉತ್ತಮರ ಸಂಗ ದೊರೆಯದಿದ್ದರೂ ಹೀನರ ಸಂಗವನ್ನು ಬಿಟ್ಟು ತನಗೆ ಸಮಾನರಾದವರೊಡನೆಯಾದರೂ ಸಂಬಂಧ ಮಾಡಬೇಕು.)

**ಮಹರ್ಷಿಪಿತೃದೇವಾನಾಂ ಗತ್ವಾನೃಣ್ಯಂ ಯಥಾವಿಧಿ ।**
**ಪುತ್ರೇ ಸರ್ವಂ ಸಮಾಸಜ್ಯ ವಸೇನ್ಮಾಧ್ಯಸ್ಥಮಾಶ್ರಿತಃ ॥ ೫೮**

ಮಹರ್ಷಿಗಳ ಋಣವನ್ನು ಅಧ್ಯಯನಮಾಡುವುದರಿಂದಲೂ, ಪಿತೃ ಋಣವನ್ನು ಮಕ್ಕಳನ್ನು ಪಡೆಯುವುದರಿಂದಲೂ, ದೇವಋಣವನ್ನು ಯಜ್ಞಾದಿ ಸತ್ಕರ್ಮಗಳನ್ನು ಮಾಡುವುದರಿಂದಲೂ ತೀರಿಸಿ, ಕುಟುಂಬಭಾರವನ್ನು ವಹಿಸಲು ಸಮರ್ಥನಾದ ಮಗನಲ್ಲಿ ತನ್ನ ಎಲ್ಲವನ್ನೂ ಬಿಟ್ಟುಕೊಟ್ಟು,

ತಾನು ಮಧ್ಯಸ್ಥ (ತಟಸ್ಥ) ರೀತಿಯನ್ನು ಆಶ್ರಯಿಸಿ, ಅಸಕ್ತನಾಗಿ, ಸರ್ವರಲ್ಲಿಯೂ ಸಮದೃಷ್ಟಿಯನ್ನು ಇಟ್ಟುಕೊಂಡು ಮನೆಯಲ್ಲಿಯೇ ವಾಸಮಾಡಬೇಕು.

**ಏಕಾಕೀ ಚಿಂತಯೇನ್ನಿತ್ಯಂ ವಿವಿಕ್ತೇ ಹಿತಮಾತ್ಮನಃ ।**
**ಏಕಾಕೀ ಚಿಂತಯಾನೋ ಹಿ ಪರಂ ಶ್ರೇಯೋಽಧಿಗಚ್ಛತಿ ॥ ೫೯**

ಪುತ್ರನಿಗೆ ಸಂಸಾರಭಾರವನ್ನು ವಹಿಸಿದ ಬಳಿಕ, ವಿಜನಪ್ರದೇಶದಲ್ಲಿ ಕುಳಿತು, ಒಬ್ಬನೇ ತನಗೆ ಹಿತವಾಗುವಂತಹ ಅಧ್ಯಾತ್ಮವಿಚಾರವನ್ನು ಮಾಡಬೇಕು. ಹಾಗೆ ಒಬ್ಬನೇ ಕುಳಿತು, ವೇದಾಂತದಲ್ಲಿ ಉಪದೇಶಿಸಿರುವ ಪರಮಾತ್ಮನ ವಿಷಯವನ್ನು ಕುರಿತು ಸಮಾಲೋಚಿಸುತ್ತಿದ್ದರೆ, ಮೋಕ್ಷಸಾಧನೆಯಾಗುವ ಶ್ರೇಯಸ್ಸನ್ನು ಪಡೆಯುವನು. (ಇಂತಹವನು ಮನೆಯಲ್ಲಿದ್ದುಕೊಂಡೇ ಸಂನ್ಯಾಸಿಯಂತೆ ಇರುವನು.)

## V ಅಧ್ಯಾಯ

# ದ್ರವ್ಯಶುದ್ಧಿ

**ಅನಭ್ಯಾಸೇನ ವೇದಾನಾಮಾಚಾರಸ್ಯ ಚ ವರ್ಜನಾತ್ ।**
**ಆಲಸ್ಯಾದನ್ನದೋಷಾಚ್ಚ ಮೃತ್ಯುರ್ವಿಪ್ರಾನ್ ಜಿಘಾಂಸತಿ ॥ ೧**

ವೇದಾಭ್ಯಾಸಮಾಡದೆ ಇರುವುದರಿಂದ, ತನ್ನ ವಿಹಿತವಾದ ಆಚಾರವನ್ನು ಬಿಡುವುದರಿಂದ, ಅವಶ್ಯವಾಗಿ ಮಾಡಬೇಕಾದ ಕೆಲಸಗಳಲ್ಲಿ ಉತ್ಸಾಹವಿಲ್ಲದೆ ಸೋಮಾರಿಯಾಗಿರುವುದರಿಂದ, ದುಷ್ಟಾಹಾರಸೇವನೆಯಿಂದ— ಈ ಕಾರಣಗಳ ದೆಸೆಯಿಂದ—ಮತ್ಯುವು ವಿಪ್ರರನ್ನು ಕೊಲ್ಲಬಯಸುತ್ತದೆ.

(ಈ ಅಕಾರ್ಯದಿಂದ ಅಧರ್ಮ ಹುಟ್ಟಿ, ಆಯುಸ್ಸು ಕ್ಷಯ ಹೊಂದುತ್ತದೆ.)

**ಸಂವತ್ಸರಸ್ಯೈಕಮಪಿ ಚರೇತ್ಕೃಚ್ಛ್ರಂ ದ್ವಿಜೋತ್ತಮಃ ।**
**ಅಜ್ಞಾತಭುಕ್ತಶುದ್ಧ್ಯರ್ಥಂ ಜ್ಞಾತಸ್ಯ ತು ವಿಶೇಷತಃ ॥ ೨**

ದ್ವಿಜನು ವರ್ಷಕ್ಕೊಮ್ಮೆಯಾದರೂ, ತಾನು ತಿಳಿಯದೆ ತಿಂದ ದುಷ್ಟಾಹಾರದ ದೋಷದ ಪ್ರಾಯಶ್ಚಿತ್ತಕ್ಕಾಗಿ ಕೃಚ್ಛ್ರವೆಂಬ ವ್ರತವನ್ನು (XI ೩೨, ೩೩) ಆಚರಿಸಬೇಕು. ದೋಷವನ್ನು ತಿಳಿದೂ ತಿಳಿದೂ ಅಭಕ್ಷ್ಯ ಭಕ್ಷಣಮಾಡಿದರೆ, ಅದಕ್ಕಾಗಿ ವಿಧಿಸಿರುವ ವಿಶೇಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

**ಯಜ್ಞಾರ್ಥಂ ಬ್ರಾಹ್ಮಣೈರ್ವಧ್ಯಾಃ ಪ್ರಶಸ್ತಾ ಮೃಗಪಕ್ಷಿಣಃ ।**
**ಭೃತ್ಯಾನಾಂ ಚೈವ ವೃತ್ತ್ಯರ್ಥಮಗಸ್ತ್ಯೋಹ್ಯಚರತ್ಪುರಾ ॥ ೩**

ಬ್ರಾಹ್ಮಣರು ಯಜ್ಞಕ್ಕೋಸ್ಕರವಾಗಲಿ, ಸೇವಕರ ಅಥವಾ ಪೋಷ್ಯ ವರ್ಗದವರ ಬೆಳವಣಿಗೆಗೇ ಆಗಲಿ, ಪ್ರಶಸ್ತವಾದ ಮೃಗಪಕ್ಷಿಗಳನ್ನು ಕೊಲ್ಲ ಬಹುದು. ಹಿಂದೆ ಅಗಸ್ತ್ಯಮಹರ್ಷಿಯೂ ಹೀಗೆ ಮಾಡಿರುವನು.

**ಯತ್ಕಿಂಚಿತ್ಸ್ನೇಹಸಂಯುಕ್ತಂ ಭಕ್ಷ್ಯಂ ಭೋಜ್ಯಮಗರ್ಹಿತಮ್ ।**
**ತತ್ಪರ್ಯುಷಿತಮಪ್ಯಾದ್ಯಂ ಹವಿಃಶೇಷಂ ಚ ಯದ್ಭವೇತ್ ॥ ೪**

ಬೇರೆ ವಿಧದಲ್ಲಿ ನಿಂದಿತವಾಗಿರದಿದ್ದರೆ, ಒಂದು ರಾತ್ರಿ ಕಳೆದು ಮಾರನೆಯ ದಿನದಲ್ಲಿಯೂ, ಮೋದಕ ಪಾಯಸಾದಿ ಭಕ್ಷ್ಯಭೋಜ್ಯಗಳು ಸ್ವಲ್ಪ ತುಪ್ಪ, ಎಣ್ಣೆ ಅಥವಾ ಮೊಸರನ್ನು ಬೆರಸಿದಮೇಲೆ ತಿನ್ನಲು ಯೋಗ್ಯವಾಗುವುವು. ದೇವಕಾರ್ಯಕ್ಕಾಗಿ ಮಾಡಿದ ಹವಿಸ್ಸು ಮಿಕ್ಕರೆ, ಅದಕ್ಕೆ ತುಪ್ಪ ಮೊದಲಾದ ಜಿಡ್ಡನ್ನು ಸೇರಿಸದೆ ಮರುದಿನ ತಿನ್ನಬಹುದು.

('ಮಸೂರಮಾಷಸಂಯುಕ್ತಂ ತಥಾ ಪರ್ಯುಷಿತಂ ಚ ಯತ್ ।
ತತ್ತು ಪ್ರಕ್ಷಾಲಿತಂ ಕೃತ್ವಾ ಭುಂಜೀತ ಹ್ಯಭಿಘಾರಿತಂ'
ಎಂದು ಯಮಸ್ಮೃತಿವಾಕ್ಯ.)

**ಚಿರಸ್ಥಿತಮಪಿ ತ್ವಾದ್ಯಮಸ್ನೇಹಾಕ್ತಂ ದ್ವಿಜಾತಿಭಿಃ ।**
**ಯವಗೋಧೂಮಜಂ ಸರ್ವಂ ಪಯಸಶ್ಚೈವ ವಿಕ್ರಿಯಾ ॥ ೫**

ಅನೇಕ ರಾತ್ರಿಗಳು ಕಳೆದಿದ್ದರೂ ಯವ, ಗೋಧಿ, ಹಾಲುಗಳಿಂದ ಮಾಡಿದ ಪದಾರ್ಥಗಳನ್ನು ಜಿಡ್ಡನ್ನು ಬೆರೆಸದೆಯೇ ದ್ವಿಜರು ತಿನ್ನಬಹುದು.

**ಪ್ರೋಕ್ಷಿತಂ ಭಕ್ಷಯೇನ್ಮಾಂಸಂ ಬ್ರಾಹ್ಮಣಾನಾಂ ಚ ಕಾಮ್ಯಯಾ ।**
**ಯಥಾವಿಧಿನಿಯುಕ್ತಸ್ತು ಪ್ರಾಣಾನಾಮೇವ ಚಾತ್ಯಯೇ ॥ ೬**

ಮಂತ್ರಪ್ರೋಕ್ಷಿತವಾಗಿ ಶುದ್ಧವಾದ ಮಾಂಸವನ್ನೇ ತಿನ್ನಬೇಕು; ಬ್ರಾಹ್ಮಣರು ಅಪೇಕ್ಷಿಸಿದರೆ, ಅವರಿಗಾಗಿ ಮಾಂಸವನ್ನು ಬೇಯಿಸಿ ಒಂದುಸಲ ಮಾತ್ರ ತಿನ್ನಬಹುದು; ಶ್ರಾದ್ಧಾದಿಗಳಲ್ಲಿ ಮಾಂಸವಿಲ್ಲದೆ ಮಧುಪರ್ಕವಿಲ್ಲ ವೆಂಬ ನಿಯಮವಿರುವುದರಿಂದ, ಆಗ ವಿಧಿಪೂರ್ವಕವಾಗಿ ಮಾಂಸವನ್ನು ತಿನ್ನಬಹುದು; ಪ್ರಾಣಾಪಾಯವಿದ್ದಲ್ಲಿಯಾಗಲಿ, ರೋಗಿಯಾಗಿದ್ದರಾಗಲಿ (ಪಥ್ಯಕ್ಕಾಗಿ) ಮಾಂಸವನ್ನು ತಿನ್ನಬಹುದು.

(ಪ್ರಾಣಾತ್ಯಯೇ ತಥಾ ಶ್ರಾದ್ಧೇ ಪ್ರೋಕ್ಷಿತೇ ದ್ವಿಜಕಾಮ್ಯಯಾ |
ದೇವಾನ್ಪಿತೃಂಸ್ಸಮಭ್ಯರ್ಚ್ಯ ಖಾದನ್ಮಾಂಸಂ ನ ದೋಷಭಾಕ್ ||

ಮಾಂಸ ತಿನ್ನದಿದ್ದರೆ ಪ್ರಾಣರಕ್ಷಣೆಯಾಗದೆಂದು ವೈದ್ಯ ಹೇಳಿದಾಗ, ಶ್ರಾದ್ಧಸಮಯದಲ್ಲಿ, ಬ್ರಾಹ್ಮಣ ಅತಿಥಿಗೋಸ್ಕರ ಅಥವಾ ದೇವಪಿತೃಗಳಿಗೆ ನಿವೇದಿಸಿದ ಮಾಂಸವನ್ನು ತಿನ್ನುವವನಿಗೆ ದೋಷ ತಟ್ಟುವುದಿಲ್ಲ.

—ಯಾಜ್ಞವಲ್ಕ್ಯ)

**ಪ್ರಾಣಸ್ಯಾನ್ನಮಿದಂ ಸರ್ವಂ ಪ್ರಜಾಪತಿರಕಲ್ಪಯತ್ |**
**ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಮ್ || ೭**

ಪ್ರತ್ಯಕ್ಷವಾಗಿರುವ ಸ್ಥಾವರಜಂಗಮಾತ್ಮಕವಾದ ಎಲ್ಲ ವನಸ್ಪತಿಗಳನ್ನೂ ಮತ್ತು ಪ್ರಾಣಿಗಳನ್ನೂ ಶರೀರದೊಳಗಿರುವ ಜೀವನಿಗೆ ಅನ್ನವೆಂಬುದಾಗಿ ಬ್ರಹ್ಮನು ಸೃಷ್ಟಿಮಾಡಿರುವುದರಿಂದ ಅವೆಲ್ಲವೂ ಅವನಿಗೆ ಆಹಾರವಾಗುವುವು.

(ಸಂಚರಿಸುವ ಕೆಲವು ಪ್ರಾಣಿಗಳು ಸ್ಥಾವರವಾದ ವನಸ್ಪತಿಗಳನ್ನು ತಿನ್ನುವುವು; ತೀಕ್ಷ್ಣವಾದ ಹಲ್ಲುಗಳುಳ್ಳ ಸಿಂಹವ್ಯಾಘ್ರಾದಿಗಳು ಜಿಂಕೆಯೇ ಮೊದಲಾದುವನ್ನು ತಿನ್ನುವುವು; ಹಸ್ತಪಾದಾದಿಗಳುಳ್ಳ ಮನುಷ್ಯರು ಅವಿಲ್ಲದ ಮತ್ಸ್ಯಾದಿಗಳನ್ನು ತಿನ್ನುವರು. ಹೀಗೆ ಸೃಷ್ಟಿಯಲ್ಲಿ ಒಂದಕ್ಕೊಂದು ನಿಯತವಾದ ಆಹಾರವಾಗಿದೆ.)

**ಕ್ರೀತ್ವಾ ಸ್ವಯಂ ವಾಪ್ಯುತ್ಪಾದ್ಯ ಪರೋಪಕೃತಮೇವ ವಾ |**
**ದೇವಾನ್ಪಿತೄಂಶ್ಚಾರ್ಚಯಿತ್ವಾ ಖಾದನ್ಮಾಂಸಂ ನ ದುಷ್ಯತಿ || ೮**

ಮಾಂಸವನ್ನು ಕೊಂಡುಕೊಂಡು ಅಥವಾ ತಾನೇ ಸಿದ್ಧಪಡಿಸಿ ಅಥವಾ ಮತ್ತೊಬ್ಬರು ಕೊಟ್ಟುದನ್ನು ಸ್ವೀಕರಿಸಿ, ಅದರಿಂದ ದೇವತೆಗಳನ್ನೂ ಪಿತೃಗಳನ್ನೂ ಆರಾಧಿಸಿ ಆಮೇಲೆ ತಿಂದರೆ ದೋಷವಿಲ್ಲ.

**ಮಧುಪರ್ಕೇ ಚ ಯಜ್ಞೇ ಚ ಪಿತೃದೈವತಕರ್ಮಣಿ ।**
**ಅತ್ರೈವ ಪಶವೋ ಹಿಂಸ್ಯಾ ನಾನ್ಯತ್ರೇತ್ಯಬ್ರವೀನ್ಮನುಃ ॥ ೯**

ಮಧುಪರ್ಕದಲ್ಲಿ, ಯಜ್ಞದಲ್ಲಿ, ಪಿತೃ ಅಥವಾ ದೇವತಾಕಾರ್ಯಗಳಲ್ಲಿ ಮಾತ್ರ ಪಶುಗಳನ್ನು ಕೊಲ್ಲಬಹುದು; ಬೇರೆ ಯಾವಾಗಲೂ ಕೊಲ್ಲಬಾರದು ಎಂದು ಮನು ಹೇಳಿದನು.

**ಯಾ ವೇದವಿಹಿತಾ ಹಿಂಸಾ ನಿಯತಾಸ್ಮಿಂಶ್ಚರಾಚರೇ ॥**
**ಅಹಿಂಸಾಮೇವ ತಾಂ ವಿದ್ಯಾದ್ವೇದಾದ್ಧರ್ಮೋ ಹಿ ನಿರ್ಬಭೌ ॥ ೧೦**

ಈ ಚರಾಚರ ಪ್ರಪಂಚದಲ್ಲಿ ಯಾವ ಪ್ರಾಣಿಹಿಂಸೆಯನ್ನು, ದೇಶ ಕಾಲಾದಿ ನಿಯಮಗಳನ್ನು ಅನುಸರಿಸಿ, ವೇದವು ಹೇಳುತ್ತದೆಯೋ ಅದನ್ನು ವಾಸ್ತವವಾಗಿ ಅಹಿಂಸೆಯೆಂದೇ ಭಾವಿಸಬೇಕು; ಏಕೆಂದರೆ, ಧರ್ಮವೆಲ್ಲ ವೇದದಿಂದಲೇ ಪ್ರಕಾಶಹೊಂದಿರುವುದು.

(ಹಿಂಸೆ, ಅಹಿಂಸೆಗಳನ್ನು ತರ್ಕಗಳಿಂದ ಸಿದ್ಧಮಾಡಬಾರದು. ಹಾಲನ್ನು ಹಿಂಡುವಾಗ ಹಸುವಿಗೆ ಹಿಂಸೆಮಾಡಿದಂತೆ ಆಗುವುದೋ ಇಲ್ಲವೋ? ರೋಗಿಯನ್ನು ಮರಣದಿಂದ ಉಳಿಸಿಕೊಳ್ಳಲು ಅಗತ್ಯವಾಗಿ ಮಾಡಬೇಕಾಗಿರುವ ಅಂಗಚ್ಛೇದನವು ಹಿಂಸೆಯೋ ಅಹಿಂಸೆಯೋ? ಹೀಗೆಲ್ಲ ಚರ್ಚೆಮಾಡಿ ಅಹಿಂಸೆಯ ಸ್ವರೂಪವನ್ನು ನಿರ್ಣಯಿಸಬಾರದು. ವೇದೋಕ್ತಕರ್ಮಗಳನ್ನು ಧರ್ಮದೃಷ್ಟಿಯಿಂದ ಮಾಡುವಾಗ ಹಿಂಸಾಹಿಂಸೆಯ ಪ್ರಶ್ನೆಯೇ ಇರುವುದಿಲ್ಲ.)

**ನಾಕೃತ್ವಾ ಪ್ರಾಣಿನಾಂ ಹಿಂಸಾಂ ಮಾಂಸಮುತ್ಪದ್ಯತೇ ಕ್ವಚಿತ್ ।**
**ನ ಚ ಪ್ರಾಣಿವಧಃ ಸ್ವರ್ಗ್ಯಸ್ತಸ್ಮಾನ್ಮಾಂಸಂ ವಿವರ್ಜಯೇತ್ ॥ ೧೧**

ಪ್ರಾಣಿಗಳಿಗೆ ಹಿಂಸೆಮಾಡದೆ ಮಾಂಸ ಸಿಗುವುದೇ ಇಲ್ಲ; ಪ್ರಾಣಿಗಳನ್ನು ವ್ಯರ್ಥವಾಗಿ ಕೊಂದರೆ ಸ್ವರ್ಗಪ್ರಾಪ್ತಿಯಾಗುವುದಿಲ್ಲ; ಆದುದರಿಂದ ಮಾಂಸಾಹಾರವನ್ನು ತ್ಯಜಿಸಬೇಕು. (ಇದು ವೇದೋಕ್ತಕರ್ಮಗಳ ವಿಧಿಗೆ ಅನುಸಾರವಾಗಿ ಇಲ್ಲದಿರುವಾಗ, ಎಂದು ಅಭಿಪ್ರಾಯ.)

**ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ ।**
**ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ ॥ ೧೨**

ಮಾಂಸಭಕ್ಷಣ, ಮದ್ಯಪಾನ, ಸ್ತ್ರೀಸಂಭೋಗ ಇವು ಸಾಮಾನ್ಯವಾಗಿ ಪ್ರಾಣಿಗಳ ಪ್ರವೃತ್ತಿಯೇ. ಆದುದರಿಂದ ಈ ಕಾರ್ಯಗಳನ್ನು ಶಾಸ್ತ್ರವಿಹಿತ ರೀತಿಯಲ್ಲಿ ಮಾಡುವುದರಿಂದ ದೋಷವಿಲ್ಲ. ಆದರೆ ಪ್ರವೃತ್ತಿಗಿಂತ ನಿವೃತ್ತಿಯೇ ಮೇಲು; ಆದಕಾರಣ, ತಾನಾಗಿಯೇ ಇವುಗಳಲ್ಲಿ ಪ್ರಸಕ್ತನಾಗ ದಿದ್ದರೆ ಮಹಾಫಲವುಂಟು.

**ದಿವಾಕೀರ್ತಿಮುದಕ್ಯಾಂ ಚ ಪತಿತಂ ಸೂತಿಕಾಂ ತಥಾ ।**
**ಶವಂ ತತ್ಸ್ಪೃಷ್ಟಿನಂ ಚೈವ ಸ್ಪೃಷ್ಟ್ವಾ ಸ್ನಾನೇನ ಶುಧ್ಯತಿ ॥ ೧೩**

ಚಂಡಾಲ, ರಜಸ್ವಲೆಯಾದ ಸ್ತ್ರೀ, ಬ್ರಹ್ಮಹತ್ಯಾದಿ ಪಾತಕಮಾಡಿ ದವನು, ಹತ್ತು ದಿನದೊಳಗಿನ ಬಾಣಂತಿ, ಶವ ಮತ್ತು ಶವಮುಟ್ಟಿದವ, ಇವರನ್ನು ಸ್ಪರ್ಶಮಾಡಿದವನು ಸ್ನಾನಮಾಡಿ ಶುದ್ಧನಾಗುತ್ತಾನೆ.

(ಶವ ಮತ್ತು ಶವಸ್ಪರ್ಶಕ ಇವರಿಬ್ಬರನ್ನೂ ಹೇಳಿರುವುದರಿಂದ ಶವಸ್ಪರ್ಶಕನಿಗೂ ಶವದಷ್ಟೇ ಅಸ್ಪೃಶ್ಯತೆಯನ್ನು ಹೇಳಿದಂತಾಯಿತು. ರಜಸ್ವಲಾದಿಗಳನ್ನು ಮುಟ್ಟಿದವರನ್ನು ಸ್ಪರ್ಶಮಾಡಿದರೆ ಸ್ನಾನ ಆಗತ್ಯವಿಲ್ಲ; ಆಚಮನದಿಂದಲೇ ಅಂತಹವರು ಶುದ್ಧರಾಗುವರು. "ಉದಕ್ಯಾಶುಚಿಭಿಃ ಸ್ನಾಯಾತ್ ಸಂಸ್ಪೃಷ್ಟಸ್ತೈರುಪಸ್ಪೃಶೇತ್" ಎಂದು ಯಾಜ್ಞವಲ್ಕ್ಯ ವಚನ.)

**ವೃಥಾ ಸಂಕರಜಾತಾನಾಂ ಪ್ರವ್ರಜ್ಯಾಸು ಚ ತಿಷ್ಠತಾಮ್ ।**
**ಆತ್ಮನಸ್ತ್ಯಾಗಿನಾಂ ಚೈವ ನಿವರ್ತೇತೋದಕಕ್ರಿಯಾ ॥ ೧೪**

**ಪಾಷಂಡಮಾಶ್ರಿತಾನಾಂ ಚ ಚರಂತೀನಾಂ ಚ ಕಾಮತಃ ।**
**ಗರ್ಭಭರ್ತೃದ್ರುಹಾಂ ಚೈವ ಸುರಾಪೀನಾಂ ಚ ಯೋಷಿತಃ ॥ ೧೫**

ಸ್ವಧರ್ಮವನ್ನು ತ್ಯಜಿಸಿ ವರ್ಣಾಂತರದವರೊಡನೆ ಸಂಬಂಧವಿಟ್ಟವರಿಂದ ಹುಟ್ಟಿದ ಸಂಕರ (ಮಿಶ್ರ) ವರ್ಣದವರಿಗೂ, ವೇದನಿಷಿದ್ಧವಾದ ಸಂನ್ಯಾಸ ವನ್ನು ಹೊಂದಿದವರಿಗೂ, ಬೆಂಕಿಯಿಂದಲೋ ನೇಣುಹಾಕಿಕೊಳ್ಳುವುದ ರಿಂದಲೋ ಆತ್ಮಹತ್ಯೆಮಾಡಿಕೊಂಡವರಿಗೂ ಉದಕಕ್ರಿಯಾದಿಗಳನ್ನು (ಶ್ರಾದ್ಧ) ಮಾಡಬಾರದು. ಹಾಗೆಯೇ ವೇದವಿರುದ್ಧವಾದ ಪಾಷಂಡ ವ್ರತಾಚಾರವನ್ನು ಹೊಂದಿದ ಸ್ತ್ರೀಯರಿಗೂ, ಸ್ವೇಚ್ಛಾಚಾರದಿಂದ ಪುರುಷ ಸಂಪರ್ಕ ಹೊಂದಿದವರಿಗೂ, ಗರ್ಭಪಾತ ಮತ್ತು ಪತಿಹತ್ಯೆಗಳನ್ನು ಮಾಡಿದ

ಹೆಂಗಸರಿಗೂ, ಸುರಾಪಾನರತಳಾದವಳಿಗೂ ಸತ್ತಮೇಲೆ ಉದಕಕ್ರಿಯಾದಿಗಳನ್ನು ಮಾಡಬಾರದು. (ಇದು ದ್ವಿಜಾತಿಯ ಹೆಂಗಸರ ವಿಷಯ.)

(III ೫೭ನೆಯ ಶ್ಲೋಕ ನೋಡಿ)

**ನ ವಿಪ್ರಂ ಸ್ವೇಷು ತಿಷ್ಠತ್ಸು ಮೃತಂ ಶೂದ್ರೇಣ ನಾಯಯೇತ್ ।**
**ಅಸ್ವರ್ಗ್ಯಾ ಹ್ಯಾಹುತಿಃ ಸಾ ಸ್ಯಾತ್ ಶೂದ್ರಸಂಸ್ಪರ್ಶದೂಷಿತಾ ॥೧೦೪**

ಬ್ರಾಹ್ಮಣನು (ಹಾಗೆಯೇ ಕ್ಷತ್ರಿಯ ಅಥವಾ ವೈಶ್ಯನು) ಮೃತನಾದಾಗ ಅವನ ಜಾತಿಯವರು ಸಮೀಪದಲ್ಲಿದ್ದರೆ, ಶವವನ್ನು ಶೂದ್ರನಿಂದ ಹೊರಿಸಬಾರದು ; ಹಾಗೆ ಮಾಡಿದರೆ ಶೂದ್ರಸಂಸ್ಪರ್ಶದಿಂದ ದುಷ್ಟವಾದ ಆ ದೇಹವು ಅಗ್ನಿಗೆ ಆಹುತಿಯಾದರೆ ಸ್ವರ್ಗಯೋಗ್ಯವಾಗುವುದಿಲ್ಲ.

(ಸ್ವಜಾತಿಯವರು ಯಾರೂ ಇಲ್ಲದಿರುವಾಗ ಕಡಿಮೆ ಜಾತಿಯವರೇ ಹೊರಬೇಕಾಗುತ್ತದೆ.)

**ಜ್ಞಾನಂ ತಪೋಽಗ್ನಿರಾಹಾರೋ ಮೃನ್ಮನೋ ವಾರ್ಯುಪಾಂಜನಮ್**
**ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತೄಣಿ ದೇಹಿನಾಮ್**

ಪ್ರಾಣಿಗಳ ದೇಹಶುದ್ಧಿಗೆ ಸಾಧನವಾದುವು ಇವು—ಜ್ಞಾನ, ತಪಸ್ಸು, ಅಗ್ನಿ, ಆಹಾರ, ಮಣ್ಣು, ಮನಸ್ಸು, ನೀರು, ಅನುಲೇಪನ, ಗಾಳಿ, ಕರ್ಮ, ಸೂರ್ಯ, ಕಾಲ.

(ಬ್ರಹ್ಮಜ್ಞಾನದಿಂದ ಬುದ್ಧಿಯೆಂಬ ಅಂತಃಕರಣ ಶುದ್ಧವಾಗುತ್ತದೆ. ಆಹಾರ ಹವಿಸ್ಸಾಗಿ ದೇಹಶುದ್ಧಿಯನ್ನು ಮಾಡಬಲ್ಲದು. ದುಷ್ಟಸಂಕಲ್ಪಗಳನ್ನು ಬಿಟ್ಟು ಸತ್ಸಂಕಲ್ಪಮಾಡುವುದರಿಂದ ಮನಸ್ಸು ದೇಹಶುದ್ಧಿಗೆ ಕಾರಣವಾಗುವುದು. ಗುಡಿಸುವುದು, ಸಾರಿಸುವುದು (ಉಪಾಂಜನ) ಇವುಗಳಿಂದ ಗೃಹಶುದ್ಧಿಯಾಗುವುದು. ಅಶ್ವಮೇಧಾದಿ ಕರ್ಮಗಳು ಶುದ್ಧಿಯನ್ನು ಮಾಡುವುವು. ಸೂರ್ಯನ ಬಿಸಿಲು ಪದಾರ್ಥಗಳನ್ನೂ ದೇಹವನ್ನೂ ಶುದ್ಧಮಾಡುವುದು—ಶುದ್ಧಿಗಾಗಿ ಸೂರ್ಯನನ್ನು ನೋಡು ಎಂದು ಮಂತ್ರವನ್ನು ಹೇಳುವರು. ಕೆಲವು ಆಶೌಚ(ಮೈಲಿಗೆ)ಗಳು ಮೂರು ದಿನಗಳಲ್ಲಿ, ಮತ್ತೆ ಕೆಲವು ಹತ್ತು ದಿನಗಳಲ್ಲಿ ಕಳೆಯುವುದರಿಂದ, ಕಾಲಾಂತರವೂ ದೇಹಶುದ್ಧಿಗೆ ಕಾರಣವಾಗುವುದು. ಗಾಳಿ ಮತ್ತು ಸೂರ್ಯನ ಕಿರಣಗಳಿಂದ ದಾರಿಯು ಶುದ್ಧವಾಗುವಂತೆ ದೇಹವೂ ಶುದ್ಧವಾಗುವುದು.)

**ಸರ್ವೇಷಾಮೇವ ಶೌಚಾನಾಮರ್ಥಶೌಚಂ ಪರಂ ಸ್ಮೃತಮ್ ।**
**ಯೋಽರ್ಥೇ ಶುಚಿರ್ಹಿ ಸ ಶುಚಿರ್ನ ಮೃದ್ವಾರಿಶುಚಿಃ ಶುಚಿಃ ॥ ೧೮**

ಶೌಚಗಳಲ್ಲೆಲ್ಲ ಅರ್ಥಶೌಚವೆಂಬುದು ಸರ್ವಶ್ರೇಷ್ಠ—ಅಂದರೆ ಹಣದ ವಿಷಯದಲ್ಲಿ ಪರಧನಾಸಕ್ತಿಯಿಲ್ಲದೆ ಶುಚಿಯಾಗಿರುವವನು ಉತ್ತಮ. ಮಣ್ಣಿನಿಂದ, ನೀರಿನಿಂದ (ಹೀಗೆಯೇ ಇತರ ವಿಧಗಳಿಂದ) ಶುದ್ಧಿಯನ್ನು ಪಡೆದವನು ಹಣದ ವಿಷಯದಲ್ಲಿ ಶುಚಿಯಾಗಿಲ್ಲದಿದ್ದರೆ ಅವನು ಶುಚಿಯೇ ಅಲ್ಲ; ಅರ್ಥಶೌಚ ಉಳ್ಳವನೇ ಶುದ್ಧ.

**ಕ್ಷಾಂತ್ಯಾ ಶುದ್ಧ್ಯಂತಿ ವಿದ್ವಾಂಸೋ ದಾನೇನಾಕಾರ್ಯಕಾರಿಣಃ ।**
**ಪ್ರಚ್ಛನ್ನಪಾಪಾ ಜಪ್ಯೇನ ತಪಸಾ ವೇದವಿತ್ತಮಾಃ ॥ ೧೯**

ವಿದ್ವಾಂಸರು ತಾಳ್ಮೆಯಿಂದ ಶುದ್ಧರಾಗುವರು; ಅಕಾರ್ಯಮಾಡಿದವನು (ಬಹುದ್ರವ್ಯವನ್ನು) ದಾನಮಾಡಿ ಶುದ್ಧನಾಗುವನು. ತಾನು ಮಾಡಿದ ಪಾಪವನ್ನು ಹಿರಿಯರ ಇದಿರಿನಲ್ಲಿ ಪ್ರಕಟಿಸಿಕೊಳ್ಳಲಾಗದವನು ಗಾಯತ್ರೀ ಜಪದಿಂದ ಶುದ್ಧನಾಗುತ್ತಾನೆ. ವೇದಜ್ಞಾನವುಳ್ಳವನು ತಪಸ್ಸುಮಾಡಿ ಶುದ್ಧನಾಗುವನು.

**ಮೃತ್ತೋಯೈಃ ಶುದ್ಧ್ಯತೇ ಶೋಧ್ಯಂ ನದೀ ವೇಗೇನ ಶುದ್ಧ್ಯತಿ ।**
**ರಜಸಾ ಸ್ತ್ರೀ ಮನೋದುಷ್ಟಾ ಸಂನ್ಯಾಸೇನ ದ್ವಿಜೋತ್ತಮಃ ॥ ೨೦**

ಮಣ್ಣು, ನೀರುಗಳಿಂದ (ವಾಸನೆ, ಬಣ್ಣಗಳನ್ನು ದೂರಮಾಡಿ) ಕೆಲವನ್ನು ಶುದ್ಧಿಮಾಡಬಹುದು. ಅಶುಚಿಯಾದ ಪದಾರ್ಥಗಳು ನದಿಯೊಳಗೆ ಬಿದ್ದಾಗ, ನದಿಯ ನೀರು ಹರಿಯುವುದರಿಂದಲೇ ಶುದ್ಧವಾಗುವುದು. (ಒಂದು ಊರಿನಲ್ಲಿ ಎಂಜಲುಕೈ ತೊಳೆದರೆ, ಸಗಣಿ ಮೆತ್ತಿದ ಎಮ್ಮೆ ಹೊರಳಾಡಿದರೆ, ಮುಂದಿನ ಗ್ರಾಮಕ್ಕೆ ಹೋಗುವಷ್ಟರಲ್ಲಿ ನದಿಯ ನೀರು ಶುದ್ಧವೇ ಆಗಿರುವುದು.) ಮಾನಸಿಕ ವ್ಯಭಿಚಾರದಿಂದ ಹುಟ್ಟಿದ ಹೆಂಗಸಿನ ದೋಷವು ಅವಳು ಮುಂದೆ ರಜಸ್ವಲೆಯಾದಾಗ ಕಳೆದುಹೋಗುವುದು. ಸಂನ್ಯಾಸ ತೆಗೆದುಕೊಂಡ ದ್ವಿಜನು ತನ್ನ ದೇಹದ ದೋಷಗಳಿಂದ ಶುದ್ಧನಾಗುವನು.

**ಅದ್ಭಿರ್ಗಾತ್ರಾಣಿ ಶುದ್ಧ್ಯಂತಿ ಮನಃ ಸತ್ಯೇನ ಶುದ್ಧ್ಯತಿ ।**
**ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುದ್ಧ್ಯತಿ ॥ ೨೧**

ಬೆವರು, ಧೂಳು ಮುಂತಾದುವುಗಳಿಂದ ಅಶುದ್ಧವಾದ ಅಂಗಗಳು ನೀರಿನಿಂದ ಶುದ್ಧವಾಗುವುವು. ನಿಷಿದ್ಧವಾದ ಆಲೋಚನೆಗಳಿಂದ ದೂಷಿತವಾದ ಮನಸ್ಸು, ಸತ್ಯವನ್ನು ನುಡಿಯುವುದರಿಂದ ಶುದ್ಧವಾಗುವುದು. ಈ ಶರೀರದೊಳಗಿನ ಆತ್ಮವು ವಿದ್ಯೆ ತಪಸ್ಸುಗಳಿಂದಲೂ, ಬುದ್ಧಿಯು ಜ್ಞಾನ ದಿಂದಲೂ ಶುದ್ಧಿಯನ್ನು ಪಡೆಯುವುವು.

**ತೈಜಸಾನಾಂ ಮಣೀನಾಂ ಚ ಸರ್ವಸ್ಯಾಶ್ಮಮಯಸ್ಯ ಚ ।**
**ಭಸ್ಮನಾದ್ಭಿರ್ಮೃದಾ ಚೈವ ಶುದ್ಧಿರುಕ್ತಾ ಮನೀಷಿಭಿಃ ॥** ೨೨

ಸುವರ್ಣಾದಿ ತೇಜೋಮಯ ವಸ್ತುಗಳು, ಮರಕತಾದಿ ಮಣಿಗಳು, ಕಲ್ಲಿನಿಂದ ಮಾಡಿದ ಎಲ್ಲ ಪಾತ್ರೆಪದಾರ್ಥಗಳು, ಇವು ಬೂದಿ ಅಥವಾ ಮಣ್ಣು ಮತ್ತು ನೀರಿನಿಂದ ಶುದ್ಧಿಹೊಂದುತ್ತದೆ ಎಂದು ಬುದ್ಧಿವಂತರು ಹೇಳುತ್ತಾರೆ.

(ಎಂಜಲಾದ ತುಪ್ಪ ಮೊದಲಾದ ಅಂಟು, ಕರೆಗಳಿರುವ ಪಾತ್ರೆಗಳಿಗೆ ಈ ನಿಯಮ. ಹಾಗಿಲ್ಲದಿರುವುವುಗಳಿಗೆ ಮುಂದಿನ ನಿಯಮವಿದೆ. ಬೂದಿ, ಮಣ್ಣುಗಳನ್ನು ವಾಸನೆ ಹೋಗಿಸಲು ಉಪಯೋಗಿಸುತ್ತಾರೆ.)

**ನಿರ್ಲೇಪಂ ಕಾಂಚನಂ ಭಾಂಡಮದ್ಭಿರೇವ ವಿಶುಧ್ಯತಿ ।**
**ಅಬ್ಜಮಶ್ಮಮಯಂ ಚೈವ ರಾಜತಂ ಚಾನುಪಸ್ಕೃತಮ್ ॥** ೨೩

ಉಚ್ಛಿಷ್ಟಾದಿ ಲೇಪವಿಲ್ಲದಿರುವ ಸುವರ್ಣಪಾತ್ರೆಯನ್ನು ಬರೇ ನೀರಿನಿಂದ ತೊಳೆದರೇ (ಗಲಬರಿಸಿದರೇ) ಶುದ್ಧಿ ; ಹಾಗೆಯೇ ನೀರಿನಲ್ಲಿ ಹುಟ್ಟುವ ಶಂಖ ಮತ್ತು ಮುತ್ತುಗಳು ಮತ್ತು ಅಲಂಕಾರಕ್ಕಾಗಿ ಕುಸುರು, ವಿನ್ಯಾಸಗಳಿರದ ಸಾದಾ ಬೆಳ್ಳಿಪಾತ್ರೆಗಳೂ ನೀರಿನಿಂದಲೇ ಶುದ್ಧವಾಗುವುವು.

**ತಾಮ್ರಾಯಃಕಾಂಸ್ಯರೈತ್ಯಾನಾಂ ತ್ರಪುಣಃ ಸೀಸಕಸ್ಯ ಚ ।**
**ಶೌಚಂ ಯಥಾರ್ಹಂ ಕರ್ತವ್ಯಂ ಕ್ಷಾರಾಮ್ಲೋದಕವಾರಿಭಿಃ ॥** ೨೪

ತಾಮ್ರ, ಕಬ್ಬಿಣ, ಕಂಚು, ಹಿತ್ತಾಳೆ, ತವರ, ಸೀಸ ಇವುಗಳ ಪಾತ್ರೆಗಳನ್ನು ಉಪ್ಪು, ಹುಣಸೇಹಣ್ಣಿನ ರಸ, ನೀರು ಇವುಗಳಲ್ಲಿ ಯಾವುಯಾವುವು ಯೋಗ್ಯವೋ ಅವುಗಳಿಂದ ಶುದ್ಧಿಮಾಡಬೇಕು. (ಉದಾಹರಣೆಗೆ ತಾಮ್ರಕ್ಕೆ ಹುಳಿ, ಕಂಚಿಗೆ ಬೂದಿ )

**ದ್ರವಾಣಾಂ ಚೈವ ಸರ್ವೇಷಾಂ ಶುದ್ಧಿರಾಪ್ಲವನಂ ಸ್ಮೃತಮ್ ।**
**ಪ್ರೋಕ್ಷಣಂ ಸಂಹತಾನಾಂ ಚ ದಾರವಾಣಾಂ ಚ ತಕ್ಷಣಂ ॥ ೨೫**

ಹರಿದುಹೋಗಬಲ್ಲ ಎಣ್ಣೆ, ತುಪ್ಪಗಳಲ್ಲಿ ಕಾಗೆ ಅಥವಾ ಹುಳುಗಳ ಸ್ಪರ್ಶದಿಂದ ದೋಷವಿದ್ದರೆ, ಮೇಲ್ಭಾಗದ ಸ್ವಲ್ಪವನ್ನು ಹರಿಸಿಬಿಟ್ಟು ಶುದ್ಧಿ ಮಾಡಬೇಕು. ಪದಾರ್ಥಗಳ ಅವಯವಗಳು ಒಟ್ಟುಗೂಡಿ, ಬಿಡಿಬಿಡಿಯಾಗಿ ಬಿಡಿಸಲು ಸಾಧ್ಯವಿಲ್ಲದಿದ್ದರೆ (ಉದಾ—ಹಾಸಿಗೆ) ಅದರ ಮೇಲೆ ನೀರನ್ನು ಪ್ರೋಕ್ಷಿಸಿದರೆ ಶುದ್ಧಿಯಾಗುವುದು. ಮರದ ಪದಾರ್ಥವು ವಿಶೇಷವಾಗಿ ದುಷ್ಟವಾಗಿದ್ದರೆ ಆ ಭಾಗದ ಮೇಲ್ಮೈಯನ್ನು ಸವರಿಹಾಕುವುದರಿಂದ ಶುದ್ಧಿಯಾಗುವುದು

**ಅದ್ಭಿಸ್ತು ಪ್ರೋಕ್ಷಣಂ ಶೌಚಂ ಬಹೂನಾಂ ಧಾನ್ಯವಾಸಸಾಮ್ ।**
**ಪ್ರಕ್ಷಾಲನೇನ ತ್ವಲ್ಪಾನಾಮದ್ಭಿಃ ಶೌಚಂ ವಿಧೀಯತೇ ॥ ೨೬**

ಧಾನ್ಯ, ವಸ್ತ್ರಾದಿಗಳ ದೊಡ್ಡ ರಾಶಿಗಳು ಚಂಡಾಲಸ್ಪರ್ಶದಿಂದ ದೂಷಿತವಾದರೆ ಸ್ವಲ್ಪ ನೀರನ್ನು ಪ್ರೋಕ್ಷಣೆಮಾಡುವುದರಿಂದ ಶುದ್ಧವಾಗುವುವು. ಅವು ಸ್ವಲ್ಪವೇ ಇದ್ದಾಗ, ಅವನ್ನು ನೀರಿನಿಂದ ತೊಳೆದು ಶುದ್ಧಿಮಾಡಬೇಕು.

**ಸಂಮಾರ್ಜನೋಪಾಂಜನೇನ ಸೇಕೇನೋಲ್ಲೇಖನೇನ ಚ ।**
**ಗವಾಂ ಚ ಪರಿವಾಸೇನ ಭೂಮಿಃ ಶುದ್ಧ್ಯತಿ ಪಂಚಭಿಃ । ೨೭**

ಉಚ್ಛಿಷ್ಟ, ಮಲ, ಮೂತ್ರ, ಚಂಡಾಲವಾಸ ಮುಂತಾದುವುಗಳಿಂದ ದೂಷಿತವಾದ ನೆಲವನ್ನು (ದೋಷದ ಅಲ್ಪತ್ವ, ಗುರುತ್ವಗಳನ್ನು ಗಮನಿಸಿ), ಗುಡಿಸುವುದು, ಸಾರಿಸುವುದು, ನೀರು ಚಿಮುಕಿಸುವುದು, ಸ್ವಲ್ಪಭಾಗವನ್ನು ಅಗೆದುಹಾಕುವುದು ಮತ್ತು ಸ್ವಲ್ಪಕಾಲ ಅಲ್ಲಿ ಹಸುಗಳನ್ನು ಕಟ್ಟುವುದು ಎಂಬ ಐದು ವಿಧಾನಗಳಿಂದ ಶುದ್ಧಿಮಾಡಿಕೊಳ್ಳಬಹುದು.

**ನಿತ್ಯಂ ಶುದ್ಧಃ ಕಾರುಹಸ್ತಃ ಪಣ್ಯೇ ಯಚ್ಚ ಪ್ರಸಾರಿತಮ್ ।**
**ಬ್ರಹ್ಮಚಾರಿಗತಂ ಭೈಕ್ಷ್ಯಂ ನಿತ್ಯಂ ಮೇಧ್ಯಮಿತಿ ಸ್ಥಿತಿಃ ॥ ೨೮**

ಹೂವಾಡಿಗರೇ ಮೊದಲಾದ ಕುಶಲಕರ್ಮಕಾರರ ಕೈ ಯಾವಾಗಲೂ ಶುದ್ಧವೆಂದು ಭಾವಿಸಬೇಕು. ಹಾಗೆಯೇ ವ್ಯಾಪಾರಕ್ಕಾಗಿ ಅಂಗಡಿಗಳಲ್ಲಿ ಹರಡಲ್ಪಟ್ಟಿರುವ ವಸ್ತುಗಳೂ ಶುದ್ಧವೇ. ಬ್ರಹ್ಮಚಾರಿಯು ಅನೇಕ ಜನರ

ಮನೆಯಿಂದ ತಂದ ಭಿಕ್ಷಾನ್ನವೂ (ದಾರಿ ನಡೆದುಬಂದವೇಲೆಯೂ) ಶುದ್ಧವೆಂದೇ ನಿರ್ಣಯ.

**ನಿತ್ಯಮಾಸ್ಯಂ ಶುಚಿ ಸ್ತ್ರೀಣಾಂ ಶಕುನಿಃ ಫಲಪಾತನೇ ।**
**ಪ್ರಸ್ರವೇ ಚ ಶುಚಿರ್ವತ್ಸಃ ಶ್ವಾ ಮೃಗಗ್ರಹಣೇ ಶುಚಿಃ ॥ ೨೯**

ಸ್ತ್ರೀಯರ ಬಾಯಿ ಯಾವಾಗಲೂ ಶುಚಿಯೇ, ಹಣ್ಣನ್ನು ಕುಕ್ಕಿ ಕೆಡವುವ ಪಕ್ಷಿ ಶುಚಿಯೇ, ಹಾಲು ಕರೆಯುವಾಗ ಕರುವಿನ ಬಾಯಿಯು ಶುಚಿಯೇ, ಬೇಟೆಯಲ್ಲಿ ಜಿಂಕೆಯನ್ನು ಹಿಡಿಯುವಾಗ ನಾಯಿ ಶುಚಿ.

(ಈ ಕಾರ್ಯಗಳಲ್ಲಿ ಎಂಜಲೆಂಬ ದೋಷವಿಲ್ಲವೆಂದು ಅಭಿಪ್ರಾಯ. "ರತಿಕಾಲೇ ಮುಖಂ ಸ್ತ್ರೀಣಾಂ ಶುದ್ಧಮಾಖೇಟಕೇ ಶುನಾಂ" ಎಂಬ ವಾಕ್ಯದಿಂದ ಸಂಭೋಗಸಮಯದಲ್ಲಿ ಚುಂಬನಕಾರ್ಯಕ್ಕಾಗಿ ಸ್ತ್ರೀಮುಖ ಶುದ್ಧವೆಂದೂ, ಬೇಟೆಯಾಡುವಾಗ ಸಾಯುವ ಜಿಂಕೆಯನ್ನು ಮುಟ್ಟುವ ನಾಯಿಯ ಬಾಯಿ ಶುದ್ಧವೆಂದೂ ತಿಳಿಯಬೇಕು.)

**ವಸಾ ಶುಕ್ರಮಸೃಙ್ಮಜ್ಜಾ ಮೂತ್ರವಿಟ್ ಘ್ರಾಣಕರ್ಣವಿಟ್ ।**
**ಶ್ಲೇಷ್ಮಾಶ್ರು ದೂಷಿಕಾ ಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥**

ಮೈಯ ಕೊಬ್ಬು, ವೀರ್ಯ, ರಕ್ತ, ಮಜ್ಜಾ, ಮೂತ್ರ, ಮಲ, ಮೂಗು ಮತ್ತು ಕಿವಿಗಳೊಳಗೆ ಕಟ್ಟಿರುವ ಕೊಳೆ, ಶ್ಲೇಷ್ಮ, ಕಣ್ಣೀರು, ಕಣ್ಣಿನ ಕಿಸರು, ಬೆವರು, ಈ ಹನ್ನೆರಡೂ ಮನುಷ್ಯದೇಹದೊಳಗಿನ ಕೊಳೆಗಳು.

(ಇವು ದೇಹದಿಂದ ಹೊರಗೆ ಬಂದಾಗ ಆಯಾ ಅಂಗಗಳನ್ನು ಮಣ್ಣಿನಿಂದಾಗಲಿ, ನೀರಿನಿಂದಾಗಲಿ, ವಾಸನೆ ಹೋಗುವವರೆಗೆ ತೊಳೆದು ಶುದ್ಧಿಪಡಿಸಿಕೊಳ್ಳಬೇಕು.)

(ಶೌಚಧರ್ಮವನ್ನೂ ದ್ರವ್ಯಶುದ್ಧಿಕ್ರಮವನ್ನೂ ಹೇಳಿ ಮುಂದೆ ಎಲ್ಲ ವರ್ಣದವರಿಗೂ ಅನ್ವಯಿಸುವ ಸ್ತ್ರೀಧರ್ಮಗಳನ್ನು ಹೇಳುತ್ತಾರೆ.)

**ಬಾಲಯಾ ವಾ ಯುವತ್ಯಾ ವಾ ವೃದ್ಧಯಾ ವಾಪಿ ಯೋಷಿತಾ ।**
**ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ ॥ ೩೦**

ಹೆಂಗಸು ಹುಡುಗಿಯೇ ಆಗಿರಲಿ, ಪ್ರಾಯಬಂದ ತರುಣಿಯೇ ಆಗಿರಲಿ, ಮುದುಕಿಯೇ ಆಗಿರಲಿ, ಸ್ವಾತಂತ್ರ್ಯವನ್ನು ವಹಿಸಿ, ತನ್ನ ಮನೆಯಲ್ಲಿ ಕೂಡ ಯಾವ ಕಾರ್ಯವನ್ನೂ ಮಾಡಬಾರದು.

**ಬಾಲ್ಯೇ ಪಿತುರ್ವಶೇ ತಿಷ್ಠೇತ್ ಪಾಣಿಗ್ರಾಹಸ್ಯ ಯೌವನೇ ।**
**ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವತಂತ್ರತಾಮ್ ॥ ೩೨**

ಬಾಲ್ಯದಲ್ಲಿ ತಂದೆಯ ವಶದಲ್ಲಿಯೂ, ತಾರುಣ್ಯದಲ್ಲಿ ಕೈಹಿಡಿದ ಗಂಡನ ವಶದಲ್ಲಿಯೂ, ಪತಿಯು ಮೃತನಾದಮೇಲೆ ಗಂಡುಮಕ್ಕಳ ಅಧೀನದಲ್ಲಿಯೂ ಹೆಂಗಸು ಇರಬೇಕಲ್ಲದೆ ಯಾವಾಗಲೂ ಸ್ವಾತಂತ್ರ್ಯವನ್ನು ವಹಿಸಬಾರದು.

**ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।**
**ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ ೩೩**

ಗೃಹಿಣಿಯು ಯಾವಾಗಲೂ ಸಂತೋಷದಿಂದ ಇರಬೇಕು, ಮನೆಗೆಲಸವನ್ನು ನೋಡಿಕೊಳ್ಳುವುದರಲ್ಲಿ ಸಮರ್ಥಳಾಗಿರಬೇಕು, ಪಾತ್ರೆಪದಾರ್ಥಗಳನ್ನು ಚೊಕ್ಕಟವಾಗಿಟ್ಟುಕೊಳ್ಳಬೇಕು ಮತ್ತು ವೆಚ್ಚಮಾಡುವಾಗ ಕೈಹಿಡಿತವುಳ್ಳವಳಾಗಿರಬೇಕು.

**ಯಸ್ಮೈ ದದ್ಯಾತ್ಪಿತಾ ತ್ವೇನಾಂ ಭ್ರಾತಾ ಚಾನುಮತೇಃ ಪಿತುಃ ।**
**ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ಚ ನ ಲಂಘಯೇತ್ ॥ ೩೪**

ಯಾವಾತನಿಗೆ ತಂದೆಯು ತನ್ನನ್ನು ಪತ್ನಿಯನ್ನಾಗಿ ಕೊಡುತ್ತಾನೆಯೋ, ಅಥವಾ ತಂದೆಯ ಅನುಮತಿಪಡೆದು ಸಹೋದರನು ಕೊಡುತ್ತಾನೆಯೋ, ಆ ಪತಿಯನ್ನು ಆತನು ಬದುಕಿರುವವರೆಗೆ ಶುಶ್ರೂಷೆ ಮಾಡಬೇಕು. ಅವನ ಮರಣಾನಂತರವೂ ವ್ಯಭಿಚಾರಾದಿಗಳಿಂದ ಆತನನ್ನು ಮೀರಬಾರದು.

**ನಾಸ್ತಿ ಸ್ತ್ರೀಣಾಂ ಪೃಥಕ್ ಯಜ್ಞೋ ನ ವ್ರತಂ ನಾಪ್ಯುಪೋಷಿತಮ್**
**ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ ॥ ೩೫**

ಗಂಡನನ್ನು ಬಿಟ್ಟು ಸ್ತ್ರೀಯೊಬ್ಬಳಿಗೇ ಯಜ್ಞವು ವಿಹಿತವಾಗಿಲ್ಲ; ಆತನ ಅನುಮತಿಯಿಲ್ಲದೆ ವ್ರತೋಪವಾಸಗಳೂ ಇಲ್ಲ. ಆದರೆ ಪತಿಶುಶ್ರೂಷೆಯಿಂದಲೇ ಆಕೆಯು ಸ್ವರ್ಗಲೋಕದಲ್ಲಿ ಮನ್ನಣೆ ಪಡೆಯುವಳು.

**ಆಸೀತಾಮರಣಾತ್ ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ ।**
**ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಮ್ ॥ ೩೬**

(ಪತಿಯನ್ನು ಕಳೆದುಕೊಂಡ ಹೆಂಗಸು) ತನ್ನ ಮರಣಪರ್ಯಂತವಾಗಿ ಕ್ಷಮಾಗುಣಯುಕ್ತಳಾಗಿ, ನಿಯಮಗಳನ್ನು ಪಾಲಿಸುತ್ತಾ, ಬ್ರಹ್ಮಚಾರಿಣಿಯಾಗಿ ಜೀವನ ನಡೆಸಿ, ಪತಿವ್ರತೆಯರಿಗೆ ಯೋಗ್ಯವಾದ ಉತ್ತಮ ಧರ್ಮವನ್ನು ಅಪೇಕ್ಷಿಸುತ್ತಿರಬೇಕು.

**ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।**
**ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥ ೩೭**

ಸದಾಚಾರವುಳ್ಳ ಪತಿವ್ರತೆಯು ಗಂಡನು ಮೃತನಾದಮೇಲೆ ಬ್ರಹ್ಮಚರ್ಯವನ್ನು ಪಾಲಿಸುತ್ತಾ, ಅಪುತ್ರವತಿಯಾಗಿದ್ದರೂ ಸನಕ ವಾಲಖಿಲ್ಯಾದಿ ಬ್ರಹ್ಮಚಾರಿಗಳಂತೆ ಸ್ವರ್ಗಕ್ಕೆ ಹೋಗುತ್ತಾಳೆ.

(ಆದುದರಿಂದ ಮಕ್ಕಳಿಲ್ಲವೆಂದು ವಿಧವೆಯು ಪರಪುರುಷನನ್ನು ಕೂಡಬೇಕಾಗಿಲ್ಲ.)

**ಅಪತ್ಯಲೋಭಾದ್ಯಾ ತು ಸ್ತ್ರೀ ಭರ್ತಾರಮತಿವರ್ತತೇ ।**
**ಸೇಹ ನಿಂದಾಮವಾಪ್ನೋತಿ ಪತಿಲೋಕಾಚ್ಚ ಹೀಯತೇ ॥ ೩೮**

ಮಕ್ಕಳನ್ನು ಪಡೆಯುವುದಕ್ಕಾಗಿಯೇ ಯಾವಳು ವ್ಯಭಿಚಾರ ಮಾಡುತ್ತಾಳೆಯೋ, ಅವಳು ಈ ಲೋಕದಲ್ಲಿ ನಿಂದಿತಳಾಗುವಳು; ಪರಲೋಕವನ್ನು ಕಳೆದುಕೊಳ್ಳುವಳು.

**ಪತಿಂ ಹಿತ್ವಾಽಪಕೃಷ್ಟಂ ಸ್ವಮುತ್ಕೃಷ್ಟಂ ಯಾ ನಿಷೇವತೇ ।**
**ನಿಂದ್ಯೈವ ಸಾ ಭವೇಲ್ಲೋಕೇ ಪರಪೂರ್ವೇತಿ ಚೋಚ್ಯತೇ ॥ ೩೯**

ತನ್ನ ಪತಿ ತನಗಿಂತ ಹೀನನು ಎಂಬ ಕಾರಣದಿಂದ ಜಾತಿ, ವಿದ್ಯೆ, ಧನ, ರೂಪಾದಿಗಳಲ್ಲಿ ಉತ್ಕೃಷ್ಟನಾದವನನ್ನು ಯಾವಳು ಆಶ್ರಯಿಸುತ್ತಾಳೆಯೋ, ಅವಳು ಲೋಕದಲ್ಲಿ ನಿಂದಿತಳಾಗಿ "ಪರಪೂರ್ವಾ" (ಮೊದಲೊಬ್ಬ ಗಂಡನಿದ್ದವಳು) ಎನಿಸಿಕೊಳ್ಳುತ್ತಾಳೆ.

**ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಮ್**
**ಶೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ ೪೦**

*

ವ್ಯಭಿಚಾರಮಾಡುವ ಹೆಂಗಸು ಈ ಲೋಕದಲ್ಲಿ ನಿಂದೆಗೆ ಗುರಿಯಾಗುತ್ತಾಳೆ, ಕುಷ್ಠಾದಿ ಪಾಪರೋಗಗಳಿಂದ ಪೀಡಿತಳಾಗುತ್ತಾಳೆ; ಮುಂದೆ ನರಿಯ ಜನ್ಮವನ್ನು ಪಡೆಯುತ್ತಾಳೆ.

**ಭಾರ್ಯಾಯೈ ಪೂರ್ವಮಾರಿಣ್ಯೈ ದತ್ವಾಗ್ನೀನಂತ್ಯಕರ್ಮಣಿ ।**
**ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ ॥ ೪೧**

ತನಗಿಂತ ಮೊದಲೇ ಸತ್ತ ಪತ್ನಿಗೆ ಅಂತ್ಯಕರ್ಮಗಳನ್ನು ಮಾಡಿದಮೇಲೆ ಪುರುಷನು ಮತ್ತೆ ಮದುವೆಮಾಡಿಕೊಂಡು ಶ್ರೌತಸ್ಮಾರ್ತಕಾರ್ಯಗಳಿಗಾಗಿ ಅಗ್ನಿಯನ್ನು ಇಟ್ಟುಕೊಳ್ಳಬೇಕು.

(ಮಕ್ಕಳಿರಲಿ, ಇಲ್ಲದಿರಲಿ ಹೆಂಡತಿ ಸತ್ತಮೇಲೆ ಪುರುಷನು ಮದುವೆಯಾಗಬಹುದು; ಆದರೆ ಈ ಶ್ಲೋಕದಿಂದ ಅಗ್ನಿಹೋತ್ರದ ನಿರ್ವಾಹಕ್ಕಾಗಿಯೇ ದ್ವಿತೀಯ ವಿವಾಹ, ಎಂದು ತಾತ್ಪರ್ಯವಾಗುವುದು.)

## VI ಅಧ್ಯಾಯ

# ವಾನಪ್ರಸ್ಥ, ಸಂನ್ಯಾಸಿ

**ಗೃಹಸ್ಥಸ್ತು ಯದಾ ಪಶ್ಯೇದ್ವಲೀಪಲಿತಮಾತ್ಮನಃ ।**
**ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾಶ್ರಯೇತ್ ॥ ೧**

ಗೃಹಸ್ಥಧರ್ಮವನ್ನು ಪಾಲಿಸುತ್ತಿದ್ದ ಮನುಷ್ಯನು ತನ್ನ ದೇಹದಲ್ಲಿ ಮುಪ್ಪಿನ ಚಿಹ್ನೆಗಳಾದ ಮುಖಚರ್ಮದ ಸುಕ್ಕು ಮತ್ತು ಕೂದಲಿನ ನೆರೆಯನ್ನು ಕಂಡಮೇಲೆ, ಹಾಗೂ ಮಗನಿಗೆ ಮಗ ಹುಟ್ಟಿದಮೇಲೆ, ವಿಷಯಾಭಿಲಾಷೆಯನ್ನು ಬಿಟ್ಟು, ವಾನಪ್ರಸ್ಥನಾಗಲು ಅರಣ್ಯಕ್ಕೆ ಹೋಗಬೇಕು.

**ಸಂತ್ಯಜ್ಯ ಗ್ರಾಮ್ಯಮಾಹಾರಂ ಸರ್ವಂ ಚೈವ ಪರಿಚ್ಛದಮ್ ।**
**ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ ಸಹೈವ ವಾ ॥ ೨**

ಅಕ್ಕಿ, ಗೋಧಿ ಮೊದಲಾದ ಗ್ರಾಮನಿವಾಸಿಗಳ ಆಹಾರವನ್ನು ತ್ಯಜಿಸಿ, ಹಸು, ಹಾಸಿಗೆ, ಹೊದಿಕೆ ಮುಂತಾದ ಅವಶ್ಯಕ ವಸ್ತುಗಳನ್ನು

ಬಿಟ್ಟು, ತನ್ನ ಹೆಂಡತಿಯ ಪೋಷಣೆಯ ಭಾರವನ್ನು ಮಕ್ಕಳಿಗೆ ಒಪ್ಪಿಸಿ, ವನವಾಸಕ್ಕೆ ಹೊರಡಬೇಕು. ಹೆಂಡತಿಯು ವನವಾಸಕ್ಕೆ ಬರಲು ಇಷ್ಟಪಟ್ಟರೆ ಅವಳನ್ನೂ ಜೊತೆಗೆ ಕರೆದೊಯ್ಯಬೇಕು.

**ಅಗ್ನಿಹೋತ್ರಂ ಸಮಾದಾಯ ಗೃಹ್ಯಂ ಚಾಗ್ನಿಪರಿಚ್ಛದಮ್ ।**
**ಗ್ರಾಮಾದರಣ್ಯಂ ನಿಃಸೃತ್ಯ ನಿವಸೇನ್ನಿಯತೇಂದ್ರಿಯಃ ॥ ೩**

ಅಗ್ನಿಹೋತ್ರಮಾಡುವುದಕ್ಕಾಗಿ ಶ್ರೌತಾಗ್ನಿಯನ್ನೂ, ಮನೆಯಲ್ಲಿರುವ ಅದರ (ಸ್ರುಕ್ಸ್ರುವಾದಿ) ಸಾಮಾನುಗಳನ್ನೂ ತೆಗೆದುಕೊಂಡುಹೋಗಿ, ಗ್ರಾಮದ ಹೊರಗೆ ಅರಣ್ಯದಲ್ಲಿ ಜಿತೇಂದ್ರಿಯನಾಗಿ ವಾಸಮಾಡಬೇಕು.

**ಮುನ್ಯನ್ನೈರ್ವಿವಿಧೈರ್ಮೇಧ್ಯೈಃ ಶಾಕಮೂಲಫಲೇನ ವಾ ।**
**ಏತಾನೇವ ಮಹಾಯಜ್ಞಾನ್ನಿರ್ವಪೇದ್ವಿಧಿಪೂರ್ವಕಮ್ ॥ ೪**

ಯಜ್ಞಾದಿಗಳಿಗೆ ಪವಿತ್ರವಾದ ಮತ್ತು ಮುನಿಗಳು ತಿನ್ನುವ ನಾನಾ ವಿಧವಾದ ನೀವಾರಾದಿಧಾನ್ಯಗಳು, ಶಾಕಮೂಲ ಫಲಗಳು ಇವುಗಳಿಂದಲೇ ವಿಧಿಪೂರ್ವಕವಾಗಿ ಮಹಾಯಜ್ಞಗಳನ್ನು ಮಾಡಿಕೊಳ್ಳಬೇಕು.

**ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ದಾಂತೋ ಮೈತ್ರಃ ಸಮಾಹಿತಃ ।**
**ದಾತಾ ನಿತ್ಯಮನಾದಾತಾ ಸರ್ವಭೂತಾನುಕಂಪಕಃ ॥ ೫**

ಸದಾ ತನ್ನ ಅಧ್ಯಯನದಲ್ಲಿ ನಿರತನಾಗಿ, ಶೀತೋಷ್ಣಗಳನ್ನು ಸಹಿಸುವವನಾಗಿ, ಸಮಾಧಾನಚಿತ್ತವುಳ್ಳವನಾಗಿ, ಯಾವಾಗಲೂ ತಾನು ಮಾತ್ರ ಪರಿಗ್ರಹಮಾಡದೆ, ಇತರರಿಗೆ ದಾನಮಾಡುತ್ತಾ, ಎಲ್ಲ ಪ್ರಾಣಿಗಳಲ್ಲಿ ದಯಾಶೀಲನಾಗಿರಬೇಕು.

**ನ ಫಾಲಕೃಷ್ಟಮಶ್ನೀಯಾದುತ್ಸೃಷ್ಟಮಪಿ ಕೇನಚಿತ್ ।**
**ನ ಗ್ರಾಮಜಾತಾನ್ಯಾರ್ತೋಽಪಿ ಮೂಲಾನಿ ಚ ಫಲಾನಿ ಚ ॥ ೬**

ಯಾರಾದರೂ ಉತ್ತು ಭೂಮಿಯಲ್ಲಿ ಬೆಳೆದ ಅಥವಾ ಮತ್ತೊಬ್ಬರಿಂದ ಕೊಡಲ್ಪಟ್ಟ ಧಾನ್ಯಗಳನ್ನಾಗಲಿ, ಗ್ರಾಮಗಳಲ್ಲಿ ಮತ್ತೊಬ್ಬರ ಪರಿಶ್ರಮದಿಂದ ಬೆಳೆದ ಗೆಡ್ಡೆಗೆಣಸು ಹಣ್ಣುಗಳನ್ನಾಗಲಿ, ಹಸಿವಿನಿಂದ ಪೀಡಿತನಾಗಿದ್ದರೂ ತಿನ್ನಬಾರದು.

(ತಾನಾಗಿ ಕಾಡಿನಲ್ಲಿ ಬೆಳೆದುದನ್ನೇ ನೆಲದಿಂದ ಅಗೆದು ಅಥವಾ ಆರಿಸಿಕೊಂಡು ತಿನ್ನಬೇಕು.)

**ಅಗ್ನಿಪಾಕಾಶನೋ ವಾ ಸ್ಯಾತ್ಕಾಲಪಕ್ವಭುಗೇವ ವಾ ।**
**ಅಶ್ಮಕುಟ್ಟೋ ಭವೇದ್ವಾಪಿ ದಂತೋಲೂಖಲಿಕೋಽಪಿ ವಾ ॥ ೭**

ಅರಣ್ಯಧಾನ್ಯಗಳನ್ನು ಬೆಂಕಿಯಲ್ಲಿ ಬೇಯಿಸಿ ತಿನ್ನಬಹುದು ಅಥವಾ ಕಾಲವಶದಿಂದ ತಾನೇ ಪಕ್ವವಾದುವನ್ನು ಹಾಗೆಯೇ ತಿನ್ನಬಹುದು. ಒರಳು ಒನಕೆಗಳಿಲ್ಲದಿರುವುದರಿಂದ ಕಲ್ಲಿನಲ್ಲಿ ಕುಟ್ಟಿ ಅಥವಾ ಹಲ್ಲುಗಳಿಂದ ಅಗೆದು ಆಹಾರವನ್ನು ಪುಡಿಮಾಡಿಕೊಳ್ಳಬೇಕು.

**ಅಗ್ನೀನಾತ್ಮನಿ ವೈತಾನಾನ್ಸಮಾರೋಪ್ಯ ಯಥಾವಿಧಿ ।**
**ಅನಗ್ನಿರನಿಕೇತಃ ಸ್ಯಾನ್ಮುನಿರ್ಮೂಲಫಲಾಶನಃ ॥ ೮**

(ಆರು ತಿಂಗಳುಗಳು ಕಳೆದಮೇಲೆ) ವೈಖಾನಸಶಾಸ್ತ್ರದಲ್ಲಿ ಹೇಳಿರುವಂತೆ ಶ್ರೌತಾಗ್ನಿಗಳನ್ನು ಭಸ್ಮಪಾನಾದಿಗಳಿಂದ ತನ್ನಲ್ಲಿ ಆರೋಪಿಸಿಕೊಂಡು, ಎಲ್ಲ ಅಗ್ನಿಗಳನ್ನೂ ಬಿಟ್ಟು, ಮನೆಯೂ ಇಲ್ಲದೆ, ಮೌನವ್ರತವನ್ನು ಧರಿಸಿ, ಗೆಡ್ಡೆ ಹಣ್ಣುಹಂಪಲುಗಳನ್ನು ತಿಂದು ಜೀವಿಸುತ್ತಿರಬೇಕು.

**ತಾಪಸೇಷ್ವೇವ ವಿಪ್ರೇಷು ಯಾತ್ರಿಕಂ ಭೈಕ್ಷ್ಯಮಾಚರೇತ್ ।**
**ಗೃಹಮೇಧಿಷು ಚಾನ್ಯೇಷು ದ್ವಿಜೇಷು ವನವಾಸಿಷು ॥ ೯**

ಪ್ರಾಣಧಾರಣೆಗೆ ಅಗತ್ಯವಾದಷ್ಟೇ ಆಹಾರವನ್ನು, ತಪಸ್ಸುಮಾಡುತ್ತಿರುವ ವಿಪ್ರರಿಂದಲೋ ಅಥವಾ ಆ ಕಾಡಿನಲ್ಲಿ ವಾಸಮಾಡುತ್ತಿರುವ ಗೃಹಸ್ಥರಾದ ದ್ವಿಜರಿಂದಲೋ, ಬೇಡಿ ತರಬೇಕು.

**ಅಪರಾಜಿತಾಂ ವಾಸ್ಥಾಯ ವ್ರಜೇದ್ದಿಶಮಜಿಹ್ಮಗಃ ।**
**ಆನಿಪಾತಾಚ್ಛರೀರಸ್ಯ ಯುಕ್ತೋ ವಾರ್ಯನಿಲಾಶನಃ ॥ ೧೦**

(ಹೀಗೆಯೆ ವನವಾಸಿಯಾಗಿದ್ದು, ಕೊನೆಯಲ್ಲಿ ವಾಸಿಯಾಗದ ಖಾಯಿಲೆಗಳು ಹುಟ್ಟಿಕೊಂಡರೆ) ಯೋಗವನ್ನು ಆಚರಿಸುತ್ತಾ, ನೀರು ಮತ್ತು ಗಾಳಿಗಳನ್ನೇ ಆಹಾರವಾಗಿ ಸೇವಿಸುತ್ತಾ, ಈಶಾನ್ಯದಿಕ್ಕಿಗೆ ತಿರುಗಿ, ಶರೀರವು ತಾನೇ ಬಿದ್ದುಹೋಗುವವರೆಗೆ ನೇರವಾಗಿ ನಡೆಯುತ್ತಿರಬೇಕು.

**ವನೇಷು ಚ ವಿಹೃತ್ಯೈವಂ ತೃತೀಯಂ ಭಾಗಮಾಯುಷಃ ।**
**ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾ ಸಂಗಾನ್ಪರಿವ್ರಜೇತ್ ॥೧೧**

(ದೇಹದ ಖಾಯಿಲೆಗಳಿಂದ ಸಾಯದ) ವಾನಪ್ರಸ್ಥನು ಹೀಗೆ ವನಗಳಲ್ಲಿ ಜೀವನ ನಡೆಸುತ್ತಾ, ಆಯುಸ್ಸಿನ ಮೂರನೆಯ ವಿಭಾಗವನ್ನು ಕಳೆದ ಮೇಲೆ, ನಾಲ್ಕನೆಯ ಭಾಗದಲ್ಲಿ ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸಿಯಾಗಬೇಕು.

(ನಾಲ್ಕು ಭಾಗಗಳ ಕಾಲಪ್ರಮಾಣಗಳು ಸಮವಾಗಿರಲಾರವು.)

**ಆಶ್ರಮಾದಾಶ್ರಮಂ ಗತ್ವಾ ಹುತಹೋಮೋ ಜಿತೇಂದ್ರಿಯಃ ।**
**ಭಿಕ್ಷಾಬಲಿಪರಿಶ್ರಾಂತಃ ಪ್ರವ್ರಜನ್ಪ್ರೇತ್ಯ ವರ್ಧತೇ ॥ ೧೨**

ಮಾನವನು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥವೆಂಬುದಾಗಿ ಒಂದಾದಮೇಲೊಂದು ಆಶ್ರಮನ್ನು ಹೊಂದಿ, ಹೋಮಗಳನ್ನು ಮಾಡಿ, ಜಿತೇಂದ್ರಿಯನಾಗಿದ್ದು, ಭಿಕ್ಷೆ, ಬಲಿ, ದಾನಗಳನ್ನು ಬಹುಕಾಲ ನಡೆಸಿಕೊಂಡು ಬಂದು ಬಳಲಿದವನಾಗಿ, ನಾಲ್ಕನೆಯದಾದ ಸಂನ್ಯಾಸಾಶ್ರಮವನ್ನು ಹೊಂದಿ, ಮರಣಾನಂತರ ಮೋಕ್ಷಾದಿ ಫಲಗಳನ್ನು ಗಳಿಸುತ್ತಾನೆ.

(‘ ಬ್ರಹ್ಮಚಾರೀ ಭೂತ್ವಾ ಗೃಹೀ ಭವೇತ್ | ಗೃಹೀ ಭೂತ್ವಾ ವನೀ ಭವೇತ್ | ವನೀ ಭೂತ್ವಾ ಪ್ರವ್ರಜೇತ್ ” ಎಂದರೆ ಬ್ರಹ್ಮಚಾರಿಯು ಗೃಹಸ್ಥನಾಗಿ ಕಾಲಾಂತರದಲ್ಲಿ ವಾನಪ್ರಸ್ಥನಾಗಿ ಕಾಲಕ್ರಮದಲ್ಲಿ ಸಂನ್ಯಾಸಿಯಾಗಬೇಕು, ಎಂದು ಶ್ರುತಿ.)

**ಅಧೀತ್ಯ ವಿಧಿವದ್ವೇದಾನ್ಪುತ್ರಾಂಶ್ಚೋತ್ಪಾದ್ಯ ಧರ್ಮತಃ ।**
**ಇಷ್ಟ್ವಾ ಚ ಶಕ್ತಿತೋ ಯಜ್ಞೈರ್ಮನೋ ಮೋಕ್ಷೇ ನಿವೇಶಯೇತ್**

ವೇದಗಳನ್ನು ವಿಧಿವತ್ತಾಗಿ ಅಧ್ಯಯನಮಾಡಿ, ಧರ್ಮದಿಂದ ಪುತ್ರೋತ್ಪಾದನೆಮಾಡಿ, ಶಕ್ತ್ಯನುಸಾರವಾಗಿ ಯಜ್ಞಗಳನ್ನು ಮಾಡಿದಮೇಲೆ, ಮನಸ್ಸನ್ನು ಮೋಕ್ಷದ ಕಡೆಗೆ ತಿರುಗಿಸಬೇಕು.

(ಅಧೀತವೇದೋ ಜಪಕೃತ್ಪುತ್ರವಾನನ್ನದೋಽಗ್ನಿಮಾನ್ |
ಶಕ್ತ್ಯಾ ಚ ಯಜ್ಞಕೃನ್ಮೋಕ್ಷೇ ಮನಃ ಕುರ್ಯಾತ್ತು ನಾನ್ಯಥಾ ||

ವೇದವನ್ನು ಕಲಿತು, ಜಪಗಳನ್ನು ಮಾಡಿ, ಮಗನನ್ನು ಪಡೆದು, ಅತಿಥಿಗಳಿಗೆ ಅನ್ನ ಕೊಟ್ಟು ಅಗ್ನಿಹೋತ್ರವನ್ನು ಮಾಡುತ್ತಿದ್ದು, ತನ್ನ ಶಕ್ತಿಗೆ ಅನುಗುಣವಾಗಿ ಯಜ್ಞವನ್ನು ನಡೆಸಿ ತರುವಾಯ ಮೋಕ್ಷಪ್ರಾಪ್ತಿಗಾಗಿ ಮನಸ್ಸುಮಾಡಬೇಕು; ಇಷ್ಟಿಲ್ಲದೆ ಆ ಕಾರ್ಯ ಮಾಡಬಾರದು— ಶಾಂತಿಪರ್ವ.)

**ಅನಧೀತ್ಯ ದ್ವಿಜೋ ವೇದಾನನುತ್ಪಾದ್ಯ ತಥಾ ಸುತಾನ್ ।**
**ಅನಿಷ್ಟ್ವಾ ಚೈವ ಯಜ್ಞೈಶ್ಚ ಮೋಕ್ಷಮಿಚ್ಛನ್ವ್ರಜತ್ಯಧಃ ॥ ೧೪**

ವೇದಾಧ್ಯಯನಮಾಡದೆ, ಮಕ್ಕಳನ್ನು ಹುಟ್ಟಿಸದೆ, ಯಜ್ಞಗಳನ್ನು ಮಾಡದೆಯೇ ಮೋಕ್ಷವನ್ನು ಅಪೇಕ್ಷಿಸುವ ದ್ವಿಜನು ನರಕಕ್ಕೆ ಹೋಗುತ್ತಾನೆ.

**ಏಕ ಏವ ಚರೇನ್ನಿತ್ಯಂ ಸಿದ್ಧ್ಯರ್ಥಮಸಹಾಯವಾನ್ ।**
**ಸಿದ್ಧಿಮೇಕಸ್ಯ ಸಂಪಶ್ಯನ್ನ ಜಹಾತಿ ನ ಹೀಯತೇ ॥ ೧೫**

ಸಂನ್ಯಾಸಿಯು ಪುತ್ರಮಿತ್ರಾದಿ ಸರ್ವಸಂಗಪರಿತ್ಯಾಗಮಾಡಿ, ಯಾರ ಜೊತೆಯಲ್ಲಿಯೂ ಇರದೆ, ಸಿದ್ಧಿಗಾಗಿ ಸಂಚರಿಸುತ್ತಿರಬೇಕು. ಏಕಾಕಿಯಾಗಿರುವವನಿಗೇ ಸಿದ್ಧಿಯೆಂದು ಅರಿತರೆ ಅವನು ಯಾರನ್ನೂ ಬಿಡುವುದಿಲ್ಲ, ಯಾರಿಂದಲೂ ಬಿಡಲ್ಪಡುವುದಿಲ್ಲ.

(ಎಂದರೆ, ಸಂಗಪರಿತ್ಯಾಗಗಳಿಂದ ಅವನಿಗೆ ಸುಖದುಃಖಗಳಾಗುವುದಿಲ್ಲ.)

**ಅನಗ್ನಿರನಿಕೇತಃ ಸ್ಯಾದ್ಗ್ರಾಮಮನ್ನಾರ್ಥಮಾಶ್ರಯೇತ್ ।**
**ಉಪೇಕ್ಷಕೋಽಸಂಕುಸುಕೋ ಮುನಿರ್ಭಾವ ಸಮಾಹಿತಃ ॥ ೧೬**

ಸಂನ್ಯಾಸಿಯು ಅಗ್ನಿಯನ್ನು ಇಟ್ಟುಕೊಳ್ಳಬಾರದು; ಸ್ವಂತ ವಾಸಸ್ಥಾನವನ್ನು ಹೊಂದಿರಬಾರದು; ಅನ್ನಕ್ಕಾಗಿ ಗ್ರಾಮವನ್ನು ಆಶ್ರಯಿಸಬೇಕು; ಶರೀರವು ವ್ಯಾಧಿಗ್ರಸ್ಥವಾದರೆ ಉಪೇಕ್ಷಾಭಾವವನ್ನು ತಳೆದಿರಬೇಕು; ಸ್ಥಿರಬುದ್ಧಿಯುಳ್ಳವನಾಗಿ ಮೌನದಿಂದ ಬ್ರಹ್ಮನಲ್ಲಿ ಸಮಾಹಿತವಾದ ಚಿತ್ತವುಳ್ಳವನಾಗಿರಬೇಕು.

**ನಾಭಿನಂದೇತ ಮರಣಂ ನಾಭಿನಂದೇತ ಜೀವಿತಮ್ ।**
**ಕಾಲಮೇವ ಪ್ರತೀಕ್ಷೇತ ನಿರ್ದೇಶಂ ಭೃತಕೋ ಯಥಾ ॥ ೧೭**

ಸಾಯಬೇಕೆಂದು ಅವನು ಅಪೇಕ್ಷಿಸಬಾರದು; ಬದುಕಿಯೇ ಇರಬೇಕೆಂದು ಜೀವಿತದಲ್ಲಿ ಆಸಕ್ತನಾಗಿರಬಾರದು. ಸೇವಕನು ಅಪ್ಪಣೆಗಾಗಿ ಹೇಗೆ ಕಾಯುತ್ತಿರುವನೋ ಹಾಗೆ, ಅವನು ತನ್ನ ಕರ್ಮಾನುಸಾರಿಯಾದ ಅವಸಾನಕಾಲವನ್ನು ನಿರೀಕ್ಷಿಸುತ್ತಿರಬೇಕು

**ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।**
**ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥ ೧೮**

ದೃಷ್ಟಿಯಿಂದ ಶುದ್ಧವಾದ ಹಾದಿಯಲ್ಲಿ ನಡೆಯಬೇಕು. (ಕ್ರಿಮಿ ಕೀಟಾದಿಗಳನ್ನು ತುಳಿದು ಸಾಯಿಸದಂತೆ ನೋಡಿಕೊಂಡು ನಡೆಯಬೇಕು. ಕೂದಲು, ಮೂಳೆಗಳನ್ನು ತುಳಿಯದಂತೆ ನೋಡಬೇಕು) ಬಟ್ಟೆಯಿಂದ ಶೋಧಿಸಿದ ಜಲವನ್ನೇ ಕುಡಿಯಬೇಕು. ಸತ್ಯದಿಂದ ಪವಿತ್ರವಾದ ಮಾತನ್ನೇ ಆಡಬೇಕು. ಮನಸ್ಸಿನಿಂದ ಶುದ್ಧವಾದ ನಡೆವಳಿಕೆಯನ್ನು ಇಟ್ಟುಕೊಳ್ಳಬೇಕು.

(ದುಷ್ಟಸಂಕಲ್ಪಗಳಿಂದ ಬಾಧಿತನಾಗದಂತೆ ನಡೆದುಕೊಳ್ಳಬೇಕು.)

**ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।**
**ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ ೧೯**

ಮರ್ಯಾದೆಯನ್ನು ಮೀರಿ ಇತರರು ಆಡಿದ ಬಿರುನುಡಿಗಳನ್ನು ಸಹಿಸಿಕೊಳ್ಳಬೇಕು. ಯಾರಿಗೂ ಅಪಮಾನಮಾಡಬಾರದು. ಅಸ್ಥಿರವೂ ವ್ಯಾಧಿಗ್ರಸ್ತವೂ ಆದ ಈ ದೇಹವನ್ನು ಹೊಂದಿದ ಯತಿಯು ಯಾರೊಡನೆಯೂ ದ್ವೇಷಮಾಡಬಾರದು.

**ಕ್ರುದ್ಧ್ಯಂತಂ ನ ಪ್ರತಿಕ್ರುಧ್ಯೇದಾಕ್ರುಷ್ಟಃ ಕುಶಲಂ ವದೇತ್ ।**
**ಸಪ್ತದ್ವಾರಾವಕೀರ್ಣಾಂ ಚ ನ ವಾಚಮನೃತಾಂ ವದೇತ್ ॥ ೨೦**

ಕೋಪಿಸಿಕೊಂಡವನಿಗೆ ಪ್ರತಿಕೋಪ ತೋರಿಸಬಾರದು. ಬೈದವನ ಯೋಗಕ್ಷೇಮವನ್ನು ವಿಚಾರಿಸಬೇಕು. ಪಂಚಕರ್ಮೇಂದ್ರಿಯಗಳು, ಮನಸ್ಸು, ಬುದ್ಧಿಗಳಿಗೆ ವಿಷಯವಾದ ಲೌಕಿಕ ಮಾತನ್ನು ಆಡಬಾರದು; ಬ್ರಹ್ಮನ ವಿಷಯವನ್ನೇ ಆಡುತ್ತಿರಬೇಕು, ಯಾವಾಗಲೂ ಸುಳ್ಳನ್ನು ಆಡಬಾರದು.

**ಏಕಕಾಲಂ ಚರೇದ್ಭೈಕ್ಷಂ ನ ಪ್ರಸಜ್ಜೇತ ವಿಸ್ತರೇ ।**
**ಭೈಕ್ಷೇ ಪ್ರಸಕ್ತೋ ಹಿ ಯತಿರ್ವಿಷಯೇಷ್ವಪಿ ಸಜ್ಜತಿ ॥ ೨೧**

ಒಪ್ಪೊತ್ತೇ ಭಿಕ್ಷೆಗಾಗಿ ಸಂಚರಿಸಬೇಕು. ಅದರಲ್ಲಿಯೂ ಪ್ರಾಣ ಧಾರಣೆಗೆ ಆವಶ್ಯಕವಾದುದಕ್ಕಿಂತ ಹೆಚ್ಚು ವಿಸ್ತಾರವಾಗಿ ಭಿಕ್ಷೆ ಎತ್ತಬಾರದು. ಭಿಕ್ಷೆಯಲ್ಲಿ ಹೆಚ್ಚು ಆಸಕ್ತಿ ಹೊಂದುವ ಯತಿಯು ಇಂದ್ರಿಯ ವಿಷಯ ಗಳಲ್ಲಿಯೂ ಆಸಕ್ತಿಹೊಂದುವನು.

**ಅಲಾಭೇ ನ ವಿಷಾದೀ ಸ್ಯಾಲ್ಲಾಭೇ ಚೈವ ನ ಹರ್ಷಯೇತ್ ।**
**ಪ್ರಾಣಯಾತ್ರಿಕಮಾತ್ರಃ ಸ್ಯಾನ್ಮಾತ್ರಾಸಂಗಾದ್ವಿನಿರ್ಗತಃ ॥ ೨೨**

ಭಿಕ್ಷೆ ಸಿಗದೆ ಹೋದಾಗ ದುಃಖವನ್ನೂ, ಸಿಕ್ಕಾಗ ಸಂತೋಷವನ್ನೂ ಹೊಂದಬಾರದು; ಜೀವನಯಾತ್ರೆಗೆ ಸಾಕಾಗುವಷ್ಟನ್ನು ಮಾತ್ರ ತೆಗೆದು ಕೊಳ್ಳಬೇಕು. ತನ್ನ ದಂಡಕಮಂಡಲುಗಳ ವಿಷಯದಲ್ಲಿಯೂ 'ಇವು ಚೆನ್ನಾಗಿವೆ ಅಥವಾ ಇಲ್ಲ' ಎಂಬ ಆಸಕ್ತಿಯನ್ನು ಬಿಡಬೇಕು.

**ಅಲ್ಪಾನ್ನಾಭ್ಯವಹಾರೇಣ ರಹಃಸ್ಥಾನಾಸನೇನ ಚ ।**
**ಹ್ರಿಯಮಾಣಾನಿ ವಿಷಯೈರಿಂದ್ರಿಯಾಣಿ ನಿವರ್ತಯೇತ್ ॥ ೨೩**

ಸ್ವಲ್ಪವೇ ಭೋಜನಮಾಡುವುದರಿಂದಲೂ, ಸಂಗವನ್ನು ತ್ಯಜಿಸಿ ಏಕಾಂತವಾಸವನ್ನು ಮಾಡುವುದರಿಂದಲೂ (ವಿಷಯುಗಳಿಂದ ಆಕರ್ಷಿತ ವಾಗುವ) ಇಂದ್ರಿಯಗಳನ್ನು ವಿಷಯುಗಳಿಂದ ಹಿಂದಿರುಗಿಸಬೇಕು.

**ಅವೇಕ್ಷೇತ ಗತೀರ್ನೃಣಾಂ ಕರ್ಮದೋಷಸಮುದ್ಭವಾಃ ।**
**ನಿರಯೇ ಚೈವ ಪತನಂ ಯಾತನಾಶ್ಚ ಯಮಕ್ಷಯೇ ॥ ೨೪**

**ವಿಪ್ರಯೋಗಂ ಪ್ರಿಯೈಶ್ಚೈವ ಸಂಯೋಗಂ ಚ ತಥಾऽಪ್ರಿಯೈಃ ।**
**ಜರಯಾ ಚಾಭಿಭವನಂ ವ್ಯಾಧಿಭಿಶ್ಚೋಪಪೀಡನಮ್ ॥ ೨೫**

**ದೇಹಾದುತ್ಕ್ರಮಣಂ ಚೈವ ದುಃಖಯೋಗಂ ಶರೀರಿಣಾಮ್ ॥**
**ಧರ್ಮಾರ್ಥಪ್ರಭವಂ ಚೈವ ಸುಖಸಂಯೋಗಮಕ್ಷಯಮ್ ॥ ೨೬**

ಮನುಷ್ಯರಿಗೆ ಅವರವರ ಕರ್ಮದೋಷಗಳಿಂದ ಬರುವ ಗತಿಗಳನ್ನೂ, ಅವರು ನರಕದಲ್ಲಿ ಬೀಳುವುದನ್ನೂ, ಅವರಿಗೆ ಯಮಲೋಕದಲ್ಲಿ ಆಗುವ

ಯಾತನೆಗಳನ್ನೂ ಹಾಗೆಯೇ ಈ ಲೋಕದಲ್ಲಿ ತಮ್ಮ ಪ್ರಿಯವಾದ ವಸ್ತು ಅಥವಾ ಪ್ರಾಣಿಗಳೊಡನೆ ವಿಯೋಗಹೊಂದುವುದನ್ನೂ, ಅನಿಷ್ಟವಾದವುಗಳೊಡನೆ ಸಂಬಂಧ ಹೊಂದುವುದನ್ನೂ, ಮುಪ್ಪಿನಿಂದ ಸೋಲನ್ನು ಪಡೆಯುವುದನ್ನೂ, ವ್ಯಾಧಿಗೆ ತುತ್ತಾಗಿ ಹಿಂಸಿತರಾಗುವುದನ್ನೂ, ಕೊನೆಗೆ ತಮಗೆ ಪ್ರಿಯವಾದ ದೇಹದಿಂದಲೇ ಬಿಡುಗಡೆ ಹೊಂದುವುದನ್ನೂ, ಪ್ರಾಣಿಗಳು ದುಃಖಪಡುವುದನ್ನೂ ಮತ್ತು ಧರ್ಮದ ಪ್ರಯೋಜನವಾದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಅಕ್ಷಯಸುಖವನ್ನು (ಮೋಕ್ಷ) ಹೊಂದುವುದನ್ನೂ ಸಂನ್ಯಾಸಿಯು ಚೆನ್ನಾಗಿ ಪರೀಕ್ಷಿಸಿ ನೋಡಬೇಕು.

**ದೂಷಿತೋಽಪಿ ಚರೇದ್ಧರ್ಮಂ ಯತ್ರ ತತ್ರಾಶ್ರಮೇ ರತಃ ।**
**ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಮ್ ॥ ೨೭**

ಯಾವುದೇ ಆಶ್ರಮದಲ್ಲಿದ್ದವನು ಆಶ್ರಮಕ್ಕೆ ವಿರುದ್ಧವಾದ ಒಂದು ಆಚರಣೆಯಿಂದ ದೂಷಿತನಾದರೂ (ಆಶ್ರಮದ ಬಹಿಶ್ಚಿಹ್ನೆಗಳನ್ನು ಕಳೆದುಕೊಂಡರೂ), ಸರ್ವಪ್ರಾಣಿಗಳಲ್ಲಿಯೂ ಸಮಬುದ್ಧಿಯುಳ್ಳವನಾಗಿ ಧರ್ಮಾನುಷ್ಠಾನಮಾಡುತ್ತಲೇ ಇರಬೇಕು. ಆಶ್ರಮಧರ್ಮವೇ ಮುಖ್ಯವಲ್ಲದೆ ಹೊರಗೆ ಕಾಣುವ ಚಿಹ್ನೆಗಳಲ್ಲ.

(ದಂಡಾದಿ ಚಿಹ್ನೆಗಳನ್ನು ಬಿಡಬೇಕೆಂದಲ್ಲ, ಆಶ್ರಮಧರ್ಮವೇ ಮುಖ್ಯವೆಂದು ತಿಳಿಸಿದೆ.)

**ಪ್ರಾಣಾಯಾಮಾ ಬ್ರಾಹ್ಮಣಸ್ಯ ತ್ರಯೋಽಪಿ ವಿಧಿವತ್ಕೃತಾಃ ।**
**ವ್ಯಾಹೃತಿಪ್ರಣವೈರ್ಯುಕ್ತಾ ವಿಜ್ಞೇಯಂ ಪರಮಂ ತಪಃ ॥ ೨೮**

"ಓಂ ಭೂಃ....," ಇತ್ಯಾದಿಗಳನ್ನು ಹೇಳುತ್ತಾ, ಬ್ರಾಹ್ಮಣನು ಮೂರುಸಲ ಪ್ರಾಣಾಯಾಮಗಳನ್ನು ಮಾಡಿದರೂ ಅದು ಶ್ರೇಷ್ಠವಾದ ತಪಸ್ಸೆಂದು ತಿಳಿಯತಕ್ಕದ್ದು.

**ದಹ್ಯಂತೇ ಧ್ಮಾಯಮಾನಾನಾಂ ಧಾತೂನಾಂ ಹಿ ಯಥಾ ಮಲಾಃ ।**
**ತಥೇಂದ್ರಿಯಾಣಾಂ ದಹ್ಯಂತೇ ದೋಷಾಃ ಪ್ರಾಣಸ್ಯ ನಿಗ್ರಹಾತ್ ॥**

ಬೆಳ್ಳಿ, ಬಂಗಾರ ಮೊದಲಾದುವುಗಳಲ್ಲಿ ಸೇರಿರುವ ಕೊಳೆಗಳು (ಅವನ್ನು ಮೂಸೆಯಲ್ಲಿ ಕರಗಿಸಿ) ಊದುವುದರಿಂದ ಹೇಗೆ ಸುಟ್ಟು

ಹೋಗುವುವೋ, ಹಾಗೆಯೇ ಇಂದ್ರಿಯಗಳ ದೋಷಗಳು ಶ್ವಾಸೋಚ್ಛ್ವಾಸಗಳ ನಿಯಂತ್ರಣದಿಂದ (ಪೂರಕ, ಕುಂಭಕ, ರೇಚಕಾತ್ಮಕ ಪ್ರಾಣಾಯಾಮಗಳಿಂದ) ಸುಟ್ಟುಹೋಗುತ್ತವೆ.

**ಪ್ರಾಣಾಯಾಮೈರ್ದಹೇದ್ದೋಷಾನ್ಧಾರಣಾಭಿಶ್ಚ ಕಿಲ್ಬಿಷಮ್ ।**
**ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ ಗುಣಾನ್ ॥**

ಪ್ರಾಣಾಯಾಮದಿಂದ ಇಂದ್ರಿಯದೋಷಗಳನ್ನು ಸುಡಬಹುದು; ಯೋಗ್ಯವಾದ ಪ್ರದೇಶದಲ್ಲಿ ಕುಳಿತು ಪರಬ್ರಹ್ಮಾದಿ ವಿಷಯಗಳನ್ನು ಮನಸ್ಸಿನಲ್ಲಿ ಧರಿಸುವ 'ಧಾರಣಾ' ಎಂಬ ಉಪಾಯದಿಂದ ಪಾಪವನ್ನು ಕಳೆಯಬಹುದು; ವಿಷಯಗಳಕಡೆ ಓಡುತ್ತಿರುವ ಇಂದ್ರಿಯಗಳನ್ನು ತಡೆಹಿಡಿದು ಹಿಂದಿರುಗಿಸುವ ಪ್ರತ್ಯಾಹಾರದಿಂದ ದುಷ್ಟಸಂಪರ್ಕವನ್ನು ಪರಿಹರಿಸಿಕೊಳ್ಳಬಹುದು; ಆಮೇಲೆ ಪರಮಾತ್ಮನ ಧ್ಯಾನೋಪಾಸನೆಗಳಿಂದ ಈಶ್ವರಸಂಬಂಧವಿಲ್ಲದ ಲೋಭಾದಿ ಗುಣಗಳಿಂದ ಬಿಡುಗಡೆ ಹೊಂದಬಹುದು.

**ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನ ನಿಬಧ್ಯತೇ ।**
**ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೇ ॥** ೩೧

ಪರಮಾತ್ಮನ ಸಾಕ್ಷಾತ್ಕಾರಪಡೆದವನಿಗೆ ಕರ್ಮಬಂಧನವಿರುವುದಿಲ್ಲ; ಇತರರಿಗೆ ಈ ಸಂಸಾರವು ಪಾಪ, ಪುಣ್ಯಕರ್ಮಗಳ ಫಲರೂಪವಾಗಿ ಇದ್ದೇ ಇರುವುದು.

**ನದೀಕೂಲಂ ಯಥಾ ವೃಕ್ಷೋ ವೃಕ್ಷಂ ವಾ ಶಕುನಿರ್ಯಥಾ ।**
**ತಥಾ ತ್ಯಜನ್ನಿಮಂ ದೇಹಂ ಕೃಚ್ಛಾದ್ಗ್ರಾಹಾದ್ವಿಮುಚ್ಯತೇ ॥** ೩೨

ದಡದಮೇಲಿನ ಮರವು ತನ್ನ ಇಚ್ಛೆ ಇಲ್ಲದೆಯೇ, ತನಗೆ ಅರಿವಿಲ್ಲದೆಯೇ ನದೀಪ್ರವಾಹದಿಂದಾಗಿ ಬಿದ್ದುಹೋಗುವುದು. ಮರದಮೇಲಿನ ಪಕ್ಷಿಯು ತನ್ನ ಅಪೇಕ್ಷೆಯಂತೆಯೇ ಮರವನ್ನು ಬಿಟ್ಟು ಹಾರಿಹೋಗುವುದು. ದೇಹವನ್ನು ಬಿಡುವಾಗ ತನ್ನ ಕರ್ಮಾನುಸಾರವಾಗಿ ಪ್ರಾಣಬಿಡುವವನು ನದೀತೀರದ ಮರದಂತೆ ಆಗುತ್ತಾನೆ. ಆದರೆ ಯಾರಿಗೆ ಉತ್ಕೃಷ್ಟವಾದ ಜ್ಞಾನ ಕರ್ಮಗಳ ಬಲವಿರುವುದೋ ಅಂತಹವರು (ಭೀಷ್ಮಾದಿಗಳಂತೆ

ಇಚ್ಛಾಮರಣವುಳ್ಳವರಾಗಿ) ಈ ದೇಹವನ್ನು ತಾವಾಗಿ ಬಿಟ್ಟು, ಸಂಸಾರದ ಕಷ್ಟವೆಂಬ ಮೊಸಳೆಯಿಂದ ಪಾರಾಗುತ್ತಾರೆ.

**ಚತುರ್ಭಿರಪಿ ಚೈವೈತೈರ್ನಿತ್ಯಮಾಶ್ರಮಿಭಿರ್ದ್ವಿಜೈಃ ।**
**ದಶಲಕ್ಷಣಕೋ ಧರ್ಮಃ ಸೇವಿತವ್ಯಃ ಪ್ರಯತ್ನತಃ ॥ ೩೩**

**ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥ ೩೪**

ಸಂತೋಷ, ತಾಳ್ಮೆ, ವಿಕಾರಸಾಮಗ್ರಿಗಳಿದ್ದರೂ ಮನೋನಿಗ್ರಹ, ಕಳ್ಳತನಮಾಡದಿರುವುದು, ಶುಚಿತ್ವ, ಇಂದ್ರಿಯನಿಗ್ರಹ, ಶಾಸ್ತ್ರಜ್ಞಾನ ಪಡೆಯುವ ಬುದ್ಧಿ, ಆತ್ಮಜ್ಞಾನದಿಂದ ಸದ್ವಿದ್ಯೆ, ಸತ್ಯ, ಅಕ್ರೋಧ ಎಂಬ ಹತ್ತು ಲಕ್ಷಣವುಳ್ಳ ಧರ್ಮವನ್ನು ನಾಲ್ಕು ಆಶ್ರಮದ ದ್ವಿಜರೂ ಸರ್ವದಾ ಸೇವಿಸಬೇಕು.

## VII ಅಧ್ಯಾಯ

# ರಾಜಧರ್ಮಗಳು

**ಅರಾಜಕೇ ಹಿ ಲೋಕೇಽಸ್ಮಿನ್ಸರ್ವತೋ ವಿದ್ರುತೇ ಭಯಾತ್ ।**
**ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ಪ್ರಭುಃ ॥ ೧**

ರಾಜನಿಲ್ಲದ ಈ ಲೋಕದಲ್ಲಿ ಸಾಮಾನ್ಯ ಪ್ರಜೆಗಳು ಬಲಿಷ್ಠರಾದವರ ಆಕ್ರಮಣದ ದೆಸೆಯಿಂದ ಭಯಗೊಂಡು ಓಡುತ್ತಿದ್ದಾಗ, ಅವರ ರಕ್ಷಣೆಗಾಗಿ (ಕ್ಷತ್ರಿಯನಾದ) ರಾಜನನ್ನು ಸ್ವಾಮಿಯು ಸೃಷ್ಟಿಮಾಡಿದನು.

**ಕಾರ್ಯಂ ಸೋಽವೇಕ್ಷ್ಯ ಶಕ್ತಿಂ ಚ ದೇಶಕಾಲೌ ಚ ತತ್ತ್ವತಃ ।**
**ಕುರುತೇ ಧರ್ಮಸಿದ್ಧ್ಯರ್ಥಂ ವಿಶ್ವರೂಪಂ ಪುನಃ ಪುನಃ ॥ ೨**

ತನ್ನ ಶಕ್ತಿಯನ್ನೂ ದೇಶ ಕಾಲ ಪರಿಸ್ಥಿತಿಯನ್ನೂ ಯಥಾವತ್ತಾಗಿ ಅರಿತು, ರಾಜನು ಧರ್ಮಸಾಧನೆಗಾಗಿ ನಾನಾ ಬಗೆಯ ಕಾರ್ಯಗಳನ್ನು ಮತ್ತೆ ಮತ್ತೆ ಮಾಡುವನು.

**ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಮ್ ।**
**ಬ್ರಹ್ಮತೇಜೋಮಯಂ ದಂಡಮಸೃಜತ್ಪೂರ್ವಮೀಶ್ವರಃ ॥ ೩**

ಬ್ರಹ್ಮನು ರಾಜನ ಉಪಯೋಗಕ್ಕಾಗಿ ತನ್ನ ಪುತ್ರನೆನಿಸಿದ ದಂಡವನ್ನು ಮೊದಲು ಸೃಷ್ಟಿಮಾಡಿದನು. ಆ ದಂಡವು ಎಲ್ಲರನ್ನೂ ರಕ್ಷಿಸುವುದು ; ಅದು ಬ್ರಹ್ಮತೇಜೋರೂಪವಾದುದು. (ಪಾಂಚಭೌತಿಕ ಶರೀರವನ್ನು ಹೊಂದಿಲ್ಲ )

**ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ ।**
**ಭಯಾದ್ಭೋಗಾಯ ಕಲ್ಪಂತೇ ಸ್ವಧರ್ಮಾನ್ನ ಚಲಂತಿ ಚ ॥ ೪**

ಈ ದಂಡದ ಭಯದಿಂದಲೇ ಸಕಲ ಚರಾಚರವಸ್ತುಗಳೂ ಭೋಗಗಳನ್ನು ಅನುಸರಿಸಲು ಸಾಧ್ಯ ಮತ್ತು ಯಾರೂ ತಮ್ಮ ತಮ್ಮ ಧರ್ಮಗಳನ್ನು ಬಿಡುವುದಿಲ್ಲ.

(ದಂಡಭಯವಿಲ್ಲದಾಗ ಬಲಿಷ್ಠನು ಇತರರ ಸುಖವನ್ನು ನಾಶ ಮಾಡುವನು.)

**ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ ।**
**ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥ ೫**

ದಂಡವು ಪ್ರಜೆಗಳಿಗೆಲ್ಲ ಶಾಸಕವಾಗಿರುವುದು. ಅದೇ ಅವರನ್ನು ಕಾಪಾಡುವುದು. ರಕ್ಷಕರಾದ ಅಧಿಕಾರಿಗಳು ಮಲಗಿದ್ದಾಗ ದಂಡವು ಎಚ್ಚರವಾಗಿರುವುದು.

(ಧರ್ಮಸ್ಥಾಪನೆಗೆ ಕಾರಣವಾದ) ದಂಡವನ್ನು ಧರ್ಮವೆಂದೇ ವಿದ್ವಾಂಸರು ತಿಳಿಯುವರು.

**ಯದಿ ನ ಪ್ರಣಯೇದ್ರಾಜಾ ದಂಡಂ ದಂಡ್ಯೇಷ್ವತಂದ್ರಿತಃ ।**
**ಶೂಲೇ ಮತ್ಸ್ಯಾನಿವಾಪಕ್ಷ್ಯನ್ ದುರ್ಬಲಾನ್ಬಲವತ್ತರಾಃ ॥ ೬**

ಶಿಕ್ಷಾರ್ಹರಾದವರ ವಿಷಯದಲ್ಲಿ ಜಾಗರೂಕನಾಗಿದ್ದು ರಾಜನು ದಂಡವನ್ನು ಪ್ರಯೋಗಿಸದಿದ್ದರೆ, ಶೂಲದ ತುದಿಗೆ ಚುಚ್ಚಿ ಮೀನನ್ನು ಬೇಯಿಸುವಂತೆ ಬಲಿಷ್ಠರು ದುರ್ಬಲರನ್ನು ಹಿಂಸಿಸಿಯಾರು.

**ತಸ್ಯಾಹುಃ ಸಂಪ್ರಣೇತಾರಂ ರಾಜಾನಂ ಸತ್ಯವಾದಿನಮ್ ।**
**ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಮ್ ॥ ೭**

ಆ ದಂಡವನ್ನು ಯುಕ್ತರೀತಿಯಲ್ಲಿ ಪ್ರಯೋಗಮಾಡುವ ರಾಜನನ್ನು ಸತ್ಯವಾದಿ, ತತ್ವಾತತ್ವವಿಚಾರಮಾಡಿ ಕೆಲಸಮಾಡುವವ, ಧರ್ಮಾರ್ಥಕಾಮ ಗಳನ್ನು ತಿಳಿದವ ಎಂದು ಹೇಳುತ್ತಾರೆ.

**ತಂ ರಾಜಾ ಪ್ರಣಯನ್ ಸಮ್ಯಕ್ತ್ರಿವರ್ಗೇಣಾಭಿವರ್ಧತೇ ।**
**ಕಾಮಾತ್ಮಾ ವಿಷಮಃ ಕ್ಷುದ್ರೋ ದಂಡೇನೈವ ನಿಹನ್ಯತೇ ॥ ೮**

ಸರಿಯಾದ ರೀತಿಯಲ್ಲಿ ದಂಡವನ್ನು ಉಪಯೋಗಿಸಿಕೊಳ್ಳುವ ರಾಜನಿಗೆ ಧರ್ಮಾರ್ಥಕಾಮಗಳು ಅಭಿವೃದ್ಧಿಹೊಂದುವುವು. ಕಾಮವಶ ನಾಗಿ, ಕೋಪಿಷ್ಠನಾಗಿ, ಮೋಸಗಾರನಾಗಿರುವವನು ಅದೇ ದಂಡದಿಂದಲೇ ನಾಶಹೊಂದುತ್ತಾನೆ.

**ಬಹವೋಽವಿನಯಾನ್ನಷ್ಟಾ ರಾಜಾನಃ ಸಪರಿಚ್ಛದಾಃ ।**
**ವನಸ್ಥಾ ಅಪಿ ರಾಜ್ಯಾನಿ ವಿನಯಾತ್ಪ್ರತಿಪೇದಿರೇ ॥ ೯**

ವಿನಯವಿಲ್ಲದ ರಾಜರು ಕರಿತುರಗರಥಪದಾತಿಗಳಿಂದ ಸಮೃದ್ಧರಾಗಿ ದ್ದಾಗ್ಯೂ ನಾಶಹೊಂದಿದ್ದಾರೆ. ಪರಿವಾರವಾಗಲಿ, ಸಂಪತ್ತಿಯಾಗಲಿ ಇಲ್ಲದೆ ಇದ್ದರೂ ವನವಾಸಿಗಳಾಗಿದ್ದವರು ತಮ್ಮ ವಿನಯದಿಂದ ರಾಜ್ಯವನ್ನು ಪಡೆದಿದ್ದಾರೆ.

**ವೇನೋ ವಿನಷ್ಟೋಽವಿನಯಾನ್ನಹುಷಶ್ಚೈವ ಪಾರ್ಥಿವಃ ।**
**ಸುದಾಸೋ ಯವನಶ್ಚೈವ ಸುಮುಖೋ ನಿಮಿರೇವ ಚ ॥ ೧೦**

ಗರ್ವದಿಂದ ವೇನ, ನಹುಷ, ಯವನನಾದ ಸುದಾಸ, ನಿಮಿ ಇವರೆಲ್ಲ ನಾಶಹೊಂದಿದರು.

**ಪೃಥುಸ್ತು ವಿನಯಾದ್ರಾಜ್ಯಂ ಪ್ರಾಪ್ತವಾನ್ಮನುರೇವ ಚ ।**
**ಕುಬೇರಶ್ಚ ಧನೈಶ್ವರ್ಯಂ ಬ್ರಾಹ್ಮಣ್ಯಂ ಚೈವ ಗಾಧಿಜಃ ॥ ೧೧**

ತಮ್ಮ ವಿನಯದಿಂದ ಪೃಥು ಮತ್ತು ಮನು ರಾಜ್ಯವನ್ನು ಪಡೆದರು; ಕುಬೇರನು ಧನಾಧಿಪತಿಯಾದನು; ಕ್ಷತ್ರಿಯನಾದ ಗಾಧಿಪುತ್ರ ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನು ಪಡೆದನು.

**ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾಂ ದಂಡನೀತಿಂ ಚ ಶಾಶ್ವತೀಮ್ ।**
**ಆನ್ವೀಕ್ಷಿಕೀಂ ಚಾತ್ಮವಿದ್ಯಾಂ ವಾರ್ತಾರಂಭಾಂಶ್ಚ ಲೋಕತಃ ॥ ೧೨**

ವೇದತ್ರಯವಿದ್ವಾಂಸರಿಂದ ವೇದವಿದ್ಯೆಯನ್ನು ಬ್ರಹ್ಮಚಾರಿಯಾಗಿರುವಾಗ ಕಲಿಯಬೇಕು. ಪರಂಪರಾನುಗತವಾದುದರಿಂದ ಶಾಶ್ವತವಾದ ದಂಡನೀತಿಯನ್ನು (ಅರ್ಥಶಾಸ್ತ್ರ) ತಿಳಿದವರಿಂದ ಕಲಿಯಬೇಕು. ಹಾಗೆಯೇ ತರ್ಕ, ಬ್ರಹ್ಮವಿದ್ಯೆಗಳನ್ನೂ ಗುರುಗಳಿಂದ ಕಲಿಯಬೇಕು. ಲೋಕವಾರ್ತೆಯೆನಿಸಿಕೊಳ್ಳುವ ಕೃಷಿ, ವಾಣಿಜ್ಯಾದಿ ವಿಚಾರಗಳನ್ನೂ ಆ ವಿಷಯಗಳನ್ನು ಚೆನ್ನಾಗಿ ಬಲ್ಲವರಿಂದ ತಿಳಿದುಕೊಳ್ಳಬೇಕು.

**ದಶಕಾಮಸಮುತ್ಥಾನಿ ತಥಾಷ್ಟೌ ಕ್ರೋಧಜಾನಿ ಚ ।**
**ವ್ಯಸನಾನಿ ದುರಂತಾನಿ ಪ್ರಯತ್ನೇನ ವಿವರ್ಜಯೇತ್ ॥ ೧೩**

ದುಃಖವನ್ನು ಉಂಟುಮಾಡುವ ವ್ಯಸನಗಳಲ್ಲಿ ಹತ್ತು ಕಾಮದಿಂದಲೂ, ಎಂಟು ಕ್ರೋಧದಿಂದಲೂ ಹುಟ್ಟುವುವು. ಪ್ರಯತ್ನಪಟ್ಟು ಅವನ್ನು ಬಿಟ್ಟುಬಿಡಬೇಕು.

[ಬೇಟೆಯಾಡುವುದು, ದ್ಯೂತ, ಹಗಲುನಿದ್ದೆ, ಮತ್ತೊಬ್ಬರನ್ನು ಜರಿಯುವುದು, ಪರಸ್ತ್ರೀಸಂಗ, ಮದ್ಯಪಾನ, ನೃತ್ಯ, ಗೀತ, ವಾದನ, ವೃಥಾ ತಿರುಗಾಟ ಇವು ಹತ್ತು ಕಾಮಜವ್ಯಸನಗಳು. ಪೈಶುನ್ಯ (ದೋಷಗಳನ್ನು ಹುಡುಕಿ ಹುಡುಕಿ ಎತ್ತಿಡುವುದು), ಸಾಹಸ (ಸಜ್ಜನರಿಗೆ ತೊಂದರೆ ಮಾಡುವಂತಹವು), ದ್ರೋಹ, ಹೊಟ್ಟೆಕಿಚ್ಚು, ಅಸೂಯಾ (ಮತ್ತೊಬ್ಬರ ಗುಣದಲ್ಲಿ ದೋಷಗಳನ್ನು ತೋರಿಸುವುದು), ಮೋಸ, ಮಾತಿನಪೆಟ್ಟು (ಬೈಯುವುದು), ದಂಡದ ಪೆಟ್ಟು (ಹೊಡೆದಾಟ) ಇವೆಲ್ಲ ಕ್ರೋಧದ ದುಷ್ಪರಿಣಾಮಗಳು.]

**ಮೌಲಾನ್ ಶಾಸ್ತ್ರವಿದಃ ಶೂರಾನ್ ಲಬ್ಧಲಕ್ಷಾನ್ ಕುಲೋದ್ಗತಾನ್**
**ಸಚಿವಾನ್ ಸಪ್ತ ಚಾಷ್ಟೌ ವಾ ಪ್ರಕುರ್ವೀತ ಪರೀಕ್ಷಿತಾನ್ ॥ ೧೪**

ವಂಶಪಾರಂಪರ್ಯವಾಗಿ ರಾಜಸೇವೆಮಾಡಿರುವ, ಅರ್ಥಶಾಸ್ತ್ರವನ್ನು ತಿಳಿದ, ಶೂರರಾದ, ಆಯುಧವನ್ನು ಸಾರ್ಥಕವಾಗುವಂತೆ ಉಪಯೋಗಿಸಬಲ್ಲ

ಮತ್ತು ಸತ್ಕುಲಪ್ರಸೂತರಾದ ಏಳು ಅಥವಾ ಎಂಟು ಜನರನ್ನು ರಾಜನು ಚೆನ್ನಾಗಿ ಪರೀಕ್ಷೆಮಾಡಿ ಸಚಿವರನ್ನಾಗಿ ಇಟ್ಟುಕೊಳ್ಳಬೇಕು.

**ತೈಃ ಸಾರ್ಧಂ ಚಿಂತಯೇನ್ನಿತ್ಯಂ ಸಾಮಾನ್ಯಂ ಸಂಧಿವಿಗ್ರಹಮ್ |**
**ಸ್ಥಾನಂ ಸಮುದಯಂ ಗುಪ್ತಿಂ ಲಬ್ಧಪ್ರಶಮನಾನಿ ಚ ||** ೧೫

ಸಚಿವರೊಡನೆ ಈ ವಿಷಯಗಳನ್ನು ಕುರಿತು ಯಾವಾಗಲೂ ಮಂತ್ರಾಲೋಚನೆ ಮಾಡುತ್ತಿರಬೇಕು—ಸಾಮಾನ್ಯವಾದ (ವಿಶೇಷವಾಗಿ ಗೋಪ್ಯವಲ್ಲದ) ಸಂಧಿ ಮತ್ತು ಯುದ್ಧಗಳು; ದಂಡ, ಕೋಶ, ಪುರ, ರಾಷ್ಟ್ರ ಇವುಗಳ ಸ್ಥಿತಿ (ಪೋಷಣೆ, ರಕ್ಷಣೆ, ಇತ್ಯಾದಿ); ಸಮುದಯ (ಅಭಿವೃದ್ಧಿ ಕಾರ್ಯಗಳು, ಧಾನ್ಯ, ಸಂಪತ್ತುಗಳು ಹೆಚ್ಚುವ ವಿಧಾನ); ಗುಪ್ತಿ (ತನ್ನ ಸ್ವಂತರಕ್ಷಣೆ—ನಂಬಿಕೆಯಾದ ಪರಿವಾರಗಳನ್ನು ಹೊಂದಿ, ವಿಷ, ಅಪಘಾತ ಮುಂತಾದುವುಗಳಿಂದ ತಪ್ಪಿಸಿಕೊಳ್ಳುವುದು—ಮತ್ತು ರಾಷ್ಟ್ರದ ರಕ್ಷಣೆ); ಪ್ರಾಪ್ತವಾದ ಧನಕನಕಾದಿ ಐಶ್ವರ್ಯಗಳ ಸದ್ವಿನಿಯೋಗ.

**ತೇಷಾಂ ಸಂ ಸ್ವಮಭಿಪ್ರಾಯಮುಪಲಭ್ಯ ಪೃಥಕ್ ಪೃಥಕ್ |**
**ಸಮಸ್ತಾನಾಂ ಚ ಕಾರ್ಯೇಷು ವಿದಧ್ಯಾದ್ಧಿತಮಾತ್ಮನಃ ||** ೧೬

ಸಚಿವರಿಂದ ನಿರ್ಭಯವಾದ ಅಭಿಪ್ರಾಯವನ್ನು ತೆಗೆದುಕೊಳ್ಳುವುದಕ್ಕಾಗಿ, ಪ್ರತಿಯೊಬ್ಬರೊಡನೆಯೂ ಬೇರೆಬೇರೆಯಾಗಿ ವಿಷಯವನ್ನು ಚರ್ಚಿಸಿ, ಮತ್ತೊಮ್ಮೆ ಎಲ್ಲರನ್ನೂ ಒಟ್ಟಾಗಿ ಸೇರಿಸಿ ಸಭೆಯ ಮತವನ್ನು ತಿಳಿದು, ರಾಜನು ತನಗೆ ಹಿತವಾದುದೆಂದು ತೋರಿದುದನ್ನು ಕಾರ್ಯಗತಮಾಡಬೇಕು.

**ಸರ್ವೇಷಾಂ ತು ವಿಶಿಷ್ಟೇನ ಬ್ರಾಹ್ಮಣೇನ ವಿಪಶ್ಚಿತಾ |**
**ಮಂತ್ರಯೇತ್ಪರಮಂ ಮಂತ್ರಂ ರಾಜಾ ಷಾಡ್ಗುಣ್ಯಸಂಯುತಮ್ ||**

ಎಲ್ಲ ಸಚಿವರ ಪೈಕಿ ಗುಣವಿಶಿಷ್ಟನೂ ವಿದ್ವಾಂಸನೂ ಆದ ಬ್ರಾಹ್ಮಣನೊಡನೆ ರಾಜನು ಸಂಧಿ, ವಿಗ್ರಹ, ಸ್ಥಾನ, ಆಸನ, ದ್ವೈಧೀಭಾವ, ಸಂಶ್ರಯಗಳೆಂಬ ಷಡ್ಗುಣವುಳ್ಳ ಪರಮಮುಖ್ಯವಾದ ಮಂತ್ರಾಲೋಚನೆಯನ್ನು ಮಾಡಬೇಕು. (೫೮ನೇ ಶ್ಲೋಕ ನೋಡಿ.)

**ಅನ್ಯಾನಪಿ ಪ್ರಕುರ್ವೀತ ಶುಚೀನ್ ಪ್ರಾಜ್ಞಾನವಸ್ಥಿತಾನ್ |**
**ಸಮ್ಯಗರ್ಥಸಮಾಹರ್ತೄನಮಾತ್ಯಾನ್ ಸುಪರೀಕ್ಷಿತಾನ್ ||** ೧೮

ಅರ್ಥಶುಚಿಯಾಗಿಯೂ (ಲಂಚಕೋರರೂ, ಅನ್ಯಾಯದಿಂದ ಸಂಪಾದಿಸುವ ಆಸೆಯುಳ್ಳವರೂ ಅಲ್ಲದೆ), ಬುದ್ಧಿವಂತರಾಗಿಯೂ, ಕೋಶಕ್ಕೆ ಚೆನ್ನಾಗಿ ಹಣವನ್ನು ಗಳಿಸಿಕೊಡುವವರಾಗಿಯೂ, ಧರ್ಮಾದಿ ವಿಷಯಗಳಲ್ಲಿ ಚೆನ್ನಾಗಿ ಪರೀಕ್ಷಿಸಲ್ಪಟ್ಟವರಾಗಿಯೂ ಇರುವ ಮತ್ತೆ ಕೆಲವರನ್ನು ಕರ್ಮಸಚಿವರನ್ನಾಗಿ ನಿಯಮಿಸಬೇಕು.

**ತೇಷಾಮರ್ಥೇ ನಿಯುಂಜೀತ ಶೂರಾನ್ದಕ್ಷಾನ್ ಕುಲೋದ್ಗತಾನ್ ।**
**ಶುಚೀನಾಕರಕರ್ಮಾಂತೇ ಭೀರೂನಂತರ್ನಿವೇಶನೇ ॥ ೧೯**

ಹಣದ ಉತ್ಪತ್ತಿಸ್ಥಾನಗಳಾದ ಗಣಿಗಳು, ಧಾನ್ಯಸಂಗ್ರಹ ಸ್ಥಾನಗಳು ಇವುಗಳಲ್ಲಿ ಆ ಕರ್ಮಸಚಿವರ ಪೈಕಿ ಶೂರರಾಗಿಯೂ, ಸಮರ್ಥರಾಗಿಯೂ, ಸದ್ವಂಶಸಂಭೂತರಾಗಿಯೂ, ನಿಃಸ್ಪೃಹರಾಗಿಯೂ ಇರುವವರನ್ನು ನಿಯಮಿಸಬೇಕು. ಅರಮನೆಯೊಳಗೆ ಭೋಜನಶಯನಾದಿ ಕಾರ್ಯಗಳ ಪ್ರದೇಶಗಳ ರಕ್ಷಣೆಗೆ ಭಯಶಾಲಿಗಳನ್ನೇ ನಿಯಮಿಸಬೇಕು.

(ಅವರು ಶೂರರೂ ನಿರ್ಭಯರೂ ಆಗಿದ್ದು, ಶತ್ರುರಾಜರ ಪ್ರೇರಣೆಗೆ ಒಳಗಾದರೆ, ರಾಜನ ಪ್ರಾಣಗಳಿಗೇ ಅಪಾಯವಾದೀತು!)

**ದೂತಂ ಚೈವ ಪ್ರಕುರ್ವೀತ ಸರ್ವಶಾಸ್ತ್ರವಿಶಾರದಮ್ ।**
**ಇಂಗಿತಾಕಾರಚೇಷ್ಟಜ್ಞಂ ಶುಚಿಂ ದಕ್ಷಂ ಕುಲೋದ್ಗತಮ್ ॥ ೨೦**

ಪರರಾಜರೊಡನೆ ತನ್ನ ಪರವಾಗಿ ಮಾತುಕತೆ ನಡೆಸುವುದಕ್ಕಾಗಿ ದೂತನನ್ನು ನಿಯಮಿಸಬೇಕಾದರೆ, ಸರ್ವಶಾಸ್ತ್ರಗಳನ್ನೂ ತಿಳಿದು, ಆಕಾರ ಚೇಷ್ಟೆಗಳಿಂದ ಅಭಿಪ್ರಾಯವನ್ನು ಗ್ರಹಿಸಬಲ್ಲವನಾಗಿಯೂ, ಶುಚಿಯಾಗಿಯೂ, ಸಮರ್ಥನಾಗಿಯೂ, ಸತ್ಕುಲಪ್ರಸೂತನಾಗಿಯೂ ಇರುವವನನ್ನು ಆರಿಸಿಕೊಳ್ಳಬೇಕು.

**ಅನುರಕ್ತಃ ಶುಚಿರ್ದಕ್ಷಃ ಸ್ಮೃತಿಮಾನ್ ದೇಶಕಾಲವಿತ್ ।**
**ವಪುಷ್ಮಾನ್ವೀತಭೀರ್ವಾಗ್ಮೀ ದೂತೋ ರಾಜ್ಞಃ ಪ್ರಶಸ್ಯತೇ ॥ ೨೧**

ಪ್ರಜೆಗಳಲ್ಲಿ ಪ್ರೀತಿಯುಳ್ಳವನೂ, ಹಣಕಾಸು ಮತ್ತು ಸ್ತ್ರೀಸಂಬಂಧಗಳಲ್ಲಿ ಶುಚಿಯಾದವನೂ, ನಿರ್ದಿಷ್ಟಕಾರ್ಯವನ್ನು ಕ್ಲುಪ್ತಕಾಲದಲ್ಲಿಯೇ ಮುಗಿಸುವ ಸಾಮರ್ಥ್ಯವುಳ್ಳವನೂ, ದೇಶಕಾಲಜ್ಞನಾಗಿ ಅವುಗಳಿಗೆ ಅನುಗುಣವಾಗಿ

ಮಾತನಾಡಬಲ್ಲವನೂ, ಸುರೂಪನೂ (ನೋಡಿದಕೂಡಲೆ ಆದರ ಹುಟ್ಟ ಬಹುದಾದವನು), ನಿರ್ಭಯನೂ, ಸಮಯೋಚಿತವಾಗಿ ತಡೆಯಿಲ್ಲದೆ ಮಾತನಾಡಬಲ್ಲವನೂ ಆದ ದೂತನೇ ರಾಜನಿಗೆ ಪ್ರಶಸ್ತನು.

**ಸ ವಿದ್ಯಾದಸ್ಯ ಕೃತ್ಯೇಷು ನಿಗೂಢೇಂಗಿತಚೇಷ್ಟಿತೈಃ ।**
**ಆಕಾರಮಿಂಗಿತಂ ಚೇಷ್ಟಾಂ ಭೃತ್ಯೇಷು ಚ ಚಿಕೀರ್ಷಿತಮ್ । ೨೨**

ಪ್ರತಿಪಕ್ಷಿಯಾದ ರಾಜನ ಬಳಿಯಲ್ಲಿರುವ ದೂತನು ಆ ರಾಜನ ಕಾರ್ಯಗಳಿಂದ ಅವನ ಆಕಾರ, ಇಂಗಿತ, ನಡೆವಳಿಕೆಗಳನ್ನು ಗಮನಿಸಬೇಕು. ತಮ್ಮ ಗೂಢಚಾರರಾಗಿ ಆ ರಾಜನ ಸೇವೆಯಲ್ಲಿರುವವರ ಇಂಗಿತ, ಚೇಷ್ಟೆ, ಅಭಿಪ್ರಾಯಗಳನ್ನು ತಿಳಿಯಬೇಕು. ಪ್ರತಿರಾಜನ ಸೇವಕರಲ್ಲಿ ಹಣದಾಸೆಯಿಂದ ಮೋಸಮಾಡಬೇಕೆಂದಿರುವವರು, ರಾಜನ್ನಿಂದ ಅಪಮಾನಿತರು ಮುಂತಾದವರ ವಿಷಯದಲ್ಲಿ ರಾಜನು ಮಾಡಬೇಕೆಂದಿರುವ ಕಾರ್ಯವನ್ನೂ ತಿಳಿಯಬೇಕು.

**ಬುದ್ಧ್ವಾ ಚ ಸರ್ವಂ ತತ್ತ್ವೇನ ಪರರಾಜಚಿಕೀರ್ಷಿತಮ್ ।**
**ತಥಾ ಪ್ರಯತ್ನಮಾತಿಷ್ಠೇದ್ಯಥಾತ್ಮಾನಂ ನ ಪೀಡಯೇತ್ ॥ ೨೩**

ತನ್ನ ದೂತನಿಂದ ಪ್ರತಿರಾಜನು ತನ್ನ ವಿಷಯದಲ್ಲಿ ಮಾಡಬೇಕೆಂದಿರುವುದನ್ನೆಲ್ಲ ಯಥಾವತ್ತಾಗಿ ಚೆನ್ನಾಗಿ ತಿಳಿದು, ತನಗೆ ಯಾವ ಹಿಂಸೆಯೂ ಆಗದಂತೆ ನೋಡಿಕೊಳ್ಳಲು ಪ್ರಯತ್ನಮಾಡಬೇಕು.

**ಧನುರ್ದುರ್ಗಂ ಮಹೀದುರ್ಗಮಬ್ದುರ್ಗಂ ವಾರ್ಕ್ಷಮೇವ ವಾ ।**
**ನೃದುರ್ಗಂ ಗಿರಿದುರ್ಗಂ ವಾ ಸಮಾಶ್ರಿತ್ಯ ವಸೇತ್ಪುರಮ್ ॥ ೨೪**

ತನ್ನ ಕ್ಷೇಮಕ್ಕಾಗಿ ಶತ್ರುಗಳಿಗೆ ಅಗಮ್ಯವಾಗಿರುವಂತೆ ದುರ್ಗಗಳನ್ನು ನಿರ್ಮಿಸಿಕೊಂಡು, ರಾಜನು ದುರ್ಗದ ಮಧ್ಯದಲ್ಲಿನ ನಗರದಲ್ಲಿ ವಾಸಮಾಡಬೇಕು. ಆ ದುರ್ಗಗಳು ಈ ಬಗೆಯಾಗಿ ಇರಬಹುದು—ನಾಲ್ಕು ದಿಕ್ಕುಗಳಲ್ಲಿಯೂ ಐದು ಯೋಜನಗಳವರೆಗೆ ನೀರೇ ಸಿಗದಂತಿರುವ ಮರುಭೂಮಿಯಿಂದ ಸುತ್ತಲ್ಪಟ್ಟುದುದು ಧನುರ್ದುರ್ಗ. ಸುತ್ತಲೂ ಕಲ್ಲು ಇಟ್ಟಿಗೆಗಳಿಂದ ಎತ್ತರವಾದ ಕೋಟೆ ಕಟ್ಟಿ, ಮೇಲೆ ಸುತ್ತಲೂ ತಿರುಗುತ್ತಾ ಶತ್ರುಗಳನ್ನು ವೀಕ್ಷಿಸಲು ಅನುಕೂಲವಾದ ಕಾಲುದಾರಿಯುಳ್ಳದುದು ಮಹೀದುರ್ಗ.

*

ಸುತ್ತಲೂ ನೀರು ತುಂಬಿದ ಕಂದುಕವಿದ್ದರೆ ಅದು ಜಲದುರ್ಗ. ಎಲ್ಲ ದಿಕ್ಕುಗಳಲ್ಲಿಯೂ ದಟ್ಟವಾದ ಮರಗಿಡಗಳೂ ಪೊದೆಗಳೂ ಬೆಳೆದು, ಕೆಲವು ಗೊತ್ತಾದ ಕಾಲುದಾರಿಗಳಲ್ಲದೆ, ಬೇರೆ ಕಡೆಯಿಂದ ಪ್ರವೇಶಮಾಡಲು ಸಾಧ್ಯವಿಲ್ಲದುದು ಅರಣ್ಯದುರ್ಗ. ನಾಲ್ಕು ದಿಕ್ಕುಗಳಲ್ಲಿಯೂ ಹಸ್ತ್ಯಶ್ವರಥ ಪದಾತಿಗಳುಳ್ಳ ಪ್ರಬಲವಾದ ಸೈನ್ಯಗಳಿಂದ ರಕ್ಷಿತವಾಗಿದ್ದರೆ ಅದು ನೃದುರ್ಗ. ಎತ್ತರವಾಗಿಯೂ ಹತ್ತಿಹೋಗಲು ಸುಗಮವಲ್ಲದೆಯೂ ಇರುವ ಪರ್ವತ ಶ್ರೇಣಿಯಿಂದ ಸುತ್ತುಗಟ್ಟಲ್ಪಟ್ಟಿರುವುದು ಗಿರಿದುರ್ಗ.

("ದೇಶದ ಮೇರೆಯಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಆಪತ್ಕಾಲದಲ್ಲಿ ರಕ್ಷಣೆ ಪಡೆಯುವುದಕ್ಕಾಗಿ ದುರ್ಗಗಳನ್ನು ರಚಿಸಿಕೊಳ್ಳಬೇಕು. ದ್ವೀಪಗಳು, ತಗ್ಗಿನ ಪ್ರದೇಶಗಳು ಮುಂತಾದುವಲ್ಲಿ ಜಲದುರ್ಗಗಳನ್ನೂ, ಬಂಡೆಗಳಿಂದ ಆವೃತವಾದ ಬೆಟ್ಟಗುಡ್ಡಗಳಲ್ಲಿ ಗಿರಿದುರ್ಗಗಳನ್ನೂ, ಮರುಪ್ರದೇಶಗಳ ನಡುವೆ ದಟ್ಟವಾಗಿ ಬೆಳೆದ ಪೊದೆಗಳಿಂದ ಮರೆಮಾಡಲ್ಪಟ್ಟಿರುವ ಬಯಲು ದುರ್ಗಗಳನ್ನೂ, ಖನಿಜಗಳಿಂದಲೂ ಪೊದೆಗಳಿಂದಲೂ ತುಂಬಿದ ವನದುರ್ಗ ಗಳನ್ನೂ ಏರ್ಪಡಿಸಿಕೊಳ್ಳಬೇಕು"—ಕೌಟಿಲ್ಯ.)

**ಸರ್ವೇಣ ತು ಪ್ರಯತ್ನೇನ ಗಿರಿದುರ್ಗಂ ಸಮಾಶ್ರಯೇತ್ ।**
**ಏಷಾಂ ಹಿ ಬಾಹುಗುಣ್ಯೇನ ಗಿರಿದುರ್ಗಂ ವಿಶಿಷ್ಯತೇ ॥** ೨೫

ಎಲ್ಲ ಪ್ರಯತ್ನವನ್ನೂ ಮಾಡಿ ಗಿರಿದುರ್ಗವನ್ನೇ ಆಶ್ರಯಿಸಬೇಕು. ಏಕೆಂದರೆ, ಮೇಲೆ ಹೇಳಿದ ಎಲ್ಲ ದುರ್ಗಗಳಲ್ಲಿಯೂ ಬಹುಗುಣಯುಕ್ತವಾಗಿರುವುದರಿಂದ ಗಿರಿದುರ್ಗವೇ ಶ್ರೇಷ್ಠವಾದುದು.

**ಏಕಃ ಶತಂ ಯೋಧಯತಿ ಪ್ರಾಕಾರಸ್ಥೋ ಧನುರ್ಧರಃ ।**
**ಶತಂ ದಶಸಹಸ್ರಾಣಿ ತಸ್ಮಾದ್ದುರ್ಗಂ ವಿಧೀಯತೇ ॥** ೨೬

ಕೋಟೆಯ ಪ್ರಾಕಾರದಮೇಲೆ ನಿಂತು ಧನುರ್ಬಾಣಧಾರಿಯಾದವನು ತಾನೊಬ್ಬನೇ ಕೆಳಗಿರುವ ನೂರು ಜನರೊಡನೆ ಯುದ್ಧಮಾಡಬಲ್ಲನು; ಅಂತಹ ನೂರು ಜನರು ಹತ್ತುಸಾವಿರ ಸೈನಿಕರೊಡನೆ ಸೆಣಸಬಲ್ಲರು. ಆದುದರಿಂದ ದುರ್ಗಮಾಡಿಕೊಳ್ಳಬೇಕೆಂದು ವಿಧಿಸಲಾಗಿದೆ.

**ತತ್ ಸ್ಯಾದಾಯುಧಸಂಪನ್ನಂ ಧನಧಾನ್ಯೇನ ವಾಹನೈಃ ।**
**ಬ್ರಾಹ್ಮಣೈಃ ಶಿಲ್ಪಿಭಿರ್ಯಂತ್ರೈರ್ಯವಸೇನೋದಕೇನ ಚ ॥** ೨೭

ದುರ್ಗವನ್ನು ನಾನಾಬಗೆಯ ಆಯುಧಗಳಿಂದಲೂ, ಧನಧಾನ್ಯಗಳಿಂದಲೂ, ಕರಿತುರಗಾದಿ ವಾಹನಗಳಿಂದಲೂ, ಬ್ರಾಹ್ಮಣರು, ಶಿಲ್ಪಿಗಳು, ಯಂತ್ರಗಳು, ಆಹಾರಪದಾರ್ಥಗಳು, ನೀರು ಇವುಗಳಿಂದಲೂ ಸುಸಮೃದ್ಧವನ್ನಾಗಿ ಮಾಡಿಕೊಳ್ಳಬೇಕು.

**ತಸ್ಯ ಮಧ್ಯೇ ಸುಪರ್ಯಾಪ್ತಂ ಕಾರಯೇದ್ಗೃಹಮಾತ್ಮನಃ ।**
**ಗುಪ್ತಂ ಸರ್ವರ್ತುಕಂ ಶುಭ್ರಂ ಜಲವೃಕ್ಷಸಮನ್ವಿತಮ್ ॥** ೨೮

ಅಂತಹ ದುರ್ಗದ ಮಧ್ಯದಲ್ಲಿ ರಾಜನು ತನ್ನ ಅರಮನೆಯನ್ನು ಕಟ್ಟಿಸಿಕೊಳ್ಳಬೇಕು. ಅದು ಅಂತಃಪುರ, ದೇವಾಲಯ, ಆಯುಧಾಗಾರ, ಭೋಜನಾಲಯ ಮೊದಲಾದುವುಗಳಿಗೆಲ್ಲ ಸಾಕಾಗುವಷ್ಟು ಅವಕಾಶವುಳ್ಳದುದಾಗಿರಬೇಕು; ಸುರಕ್ಷಿತವಾಗಿಯೂ, ಸರ್ವ ಋತುಗಳಲ್ಲಿ ಅನುಕೂಲವಾಗಿಯೂ, ಸ್ವಚ್ಛವಾದ ನೀರು ಮತ್ತು ಯಥೇಚ್ಛವಾಗಿ ಗಿಡಮರಗಳು ಉಳ್ಳದುದಾಗಿಯೂ ಇರಬೇಕು.

**ತದಧ್ಯಾಸ್ಯೋದ್ವಹೇದ್ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್ ।**
**ಕುಲೇ ಮಹತಿ ಸಂಭೂತಾಂ ಹೃದ್ಯಾಂ ರೂಪಗುಣಾನ್ವಿತಾಮ್ ॥** ೨೯

ದುರ್ಗವನ್ನು ಆಶ್ರಯಿಸಿದಮೇಲೆ ಲಕ್ಷಣಸಂಪನ್ನಳಾಗಿ, ಸತ್ಕುಲಪ್ರಸೂತಳಾಗಿ, ಸುಂದರಳೂ ಸುಗುಣೆಯೂ ಆದ ಕ್ಷತ್ರಿಯ ಕನ್ಯೆಯನ್ನು ರಾಜನು ವರಿಸಬೇಕು.

**ಸಾಂವತ್ಸರಿಕಮಾಪ್ತೈಶ್ಚ ರಾಷ್ಟ್ರಾದಾಹಾರಯೇದ್ಬಲಿಮ್ ।**
**ಸ್ಯಾಚ್ಚಾಮ್ನಾಯಪರೋ ಲೋಕೇ ವರ್ತೇತ ಪಿತೃವನ್ನೃಷು ॥** ೩೦

ತನಗೆ ಆಪ್ತರಾದ ಅಮಾತ್ಯರಿಂದ ವರ್ಷಕ್ಕಾಗುವಷ್ಟು ಧಾನ್ಯಾದಿ ಕಪ್ಪಗಳನ್ನು ತರಿಸಿಕೊಳ್ಳಬೇಕು; ಶಾಸ್ತ್ರವಿಹಿತವಾದ ರೀತಿಯಲ್ಲಿಯೇ ಧನಧಾನ್ಯಾದಿಗಳ ಸಂಗ್ರಹವನ್ನು ರಾಜನು ಮಾಡಬೇಕು; ಪ್ರಜೆಗಳಿಗೆ ತಾನು ತಂದೆಯಂತೆ ನಡೆದುಕೊಳ್ಳಬೇಕು.

**ಅಧ್ಯಕ್ಷಾನ್ವಿವಿಧಾನ್ಕುರ್ಯಾತ್ತತ್ರ ತತ್ರ ವಿಪಶ್ಚಿತಃ ।**
**ತೇಽಸ್ಯ ಸರ್ವಾಣ್ಯವೇಕ್ಷೇರನ್ನೃಣಾಂ ಕಾರ್ಯಾಣಿ ಕುರ್ವತಾಮ್ ॥**

ಧನಧಾನ್ಯಗಳು, ಹಸು, ಕುದುರೆ, ಆನೆಗಳು ಮುಂತಾದುವನ್ನೆಲ್ಲ ಸಂಗ್ರಹಿಸಿಟ್ಟಿರುವ ಸ್ಥಳಗಳಲ್ಲಿ ಬುದ್ಧಿವಂತರಾದ ಅಧ್ಯಕ್ಷರನ್ನು ನಿಯಮಿಸ ಬೇಕು. ಅವರು ಅಲ್ಲಲ್ಲಿ ಕೆಲಸಮಾಡುವ ಜನರ ಎಲ್ಲ ಕಾರ್ಯಗಳನ್ನೂ ಪರಿಶೀಲಿಸುತ್ತಿರಬೇಕು.

**ಸಂಗ್ರಾಮೇಷ್ವನಿವರ್ತಿತ್ವಂ ಪ್ರಜಾನಾಂ ಚೈವ ಪಾಲನಮ್ ।**
**ಶುಶ್ರೂಷಾ ಬ್ರಾಹ್ಮಣಾನಾಂ ಚ ರಾಜ್ಞಾಂ ಶ್ರೇಯಸ್ಕರಂ ಪರಮ್ ॥**

ಯುದ್ಧದಲ್ಲಿ ಹಿಂದಿರುಗದಿರುವಿಕೆ, ಪ್ರಜಾಪಾಲನೆ, ಬ್ರಾಹ್ಮಣಶುಶ್ರೂಷೆ ಇವು ರಾಜರಿಗೆ ಪರಮ ಶ್ರೇಯಸ್ಕರವು.

**ನ ಕೂಟೈರಾಯುಧೈರ್ಹನ್ಯಾದ್ಯುಧ್ಯಮಾನೋ ರಣೇ ರಿಪೂನ್ ।**
**ನ ಕರ್ಣಿಭಿರ್ನಾಪಿ ದಿಗ್ಧೈರ್ನಾಗ್ನಿಜ್ವಲಿತತೇಜನೈಃ ॥** ೩೩
**ನ ಚ ಹನ್ಯಾತ್ಸ್ಥಲಾರೂಢಂ ನ ಕ್ಲೀಬಂ ನ ಕೃತಾಂಜಲಿಮ್ ।**
**ನ ಮುಕ್ತಕೇಶಂ ನಾಸೀನಂ ನ ತವಾಸ್ಮೀತಿವಾದಿನಮ್ ॥** ೩೪

ಮೇಲೆ ಕೋಲಿನಂತೆ ಕಾಣುತ್ತ, ಒಳಗೆ ಗುಪ್ತವಾದ ತೀಕ್ಷ್ಣ ಶಸ್ತ್ರಗಳುಳ್ಳ ಮೋಸದ ಆಯುಧಗಳಿಂದ ಯುದ್ಧಭೂಮಿಯಲ್ಲಿ ಶತ್ರುಗಳನ್ನು ಹೊಡೆಯಬಾರದು; ಹಾಗೆಯೇ ಕರ್ಣಾಕಾರದ ಮೊನಚಾದ ತುದಿಯುಳ್ಳ ಬಾಣಗಳಿಂದಲೂ, ವಿಷಲಿಪ್ತವಾದ ಬಾಣಗಳಿಂದಲೂ ಬೆಂಕಿಹೊತ್ತಿಸಿದ ಹಲಗೆ ಮುಂತಾದುವುಗಳಿಂದಲೂ ಶತ್ರುಗಳನ್ನು ಹೊಡೆಯಬಾರದು. ತಾನು ಆನೆ ಕುದುರೆಗಳ ಮೇಲೆ ಕುಳಿತು, ವಾಹನಗಳಿಂದ ಕೆಳಗೆ ಬಿದ್ದವನನ್ನು ಹೊಡೆಯಬಾರದು; ನಪುಂಸಕನನ್ನೂ, ಕೈಮುಗಿದು ಪ್ರಾಣಭಿಕ್ಷೆಬೇಡು ತ್ತಿರುವವನನ್ನೂ, ಬಿಚ್ಚಿಹೋದ ಕೂದಲುಗಳುಳ್ಳವನನ್ನೂ, ನೆಲದಮೇಲೆ ಕುಳಿತಿರುವವನನ್ನೂ, 'ನಾನು ನಿನ್ನ ಕಡೆಗೆ ಸೇರುವೆ' ಎಂದು ಶರಣಾಗತ ನಾದವನನ್ನೂ ಹೊಡೆಯಬಾರದು.

**ರಥಾಶ್ವಂ ಹಸ್ತಿನಂ ಛತ್ರಂ ಧನಂ ಧಾನ್ಯಂ ಪಶೂನ್ ಸ್ತ್ರಿಯಃ ।**
**ಸರ್ವದ್ರವ್ಯಾಣಿ ಕುಪ್ಯಂ ಚ ಯೋ ಯಜ್ಜಯತಿ ತಸ್ಯ ತತ್ ॥** ೩೦

ಯುದ್ಧದಲ್ಲಿ ರಥ, ಕುದುರೆ, ಆನೆ, ಛತ್ರ, ವಸ್ತ್ರಾದಿಗಳು, ಧನಧಾನ್ಯಗಳು, ಸ್ತ್ರೀಯರು, ತಾಮ್ರ ಮುಂತಾದ ನಾನಾಬಗೆಯ ಪದಾರ್ಥಗಳು ಯಾರು ಯಾರಿಗೆ ಸಿಗುವುವೋ ಅವೆಲ್ಲ ಅವರವರವೇ ಆಗುವುವು. (ಬೆಳ್ಳಿ, ಬಂಗಾರ, ಭೂಮಿ, ರತ್ನಗಳು ರಾಜನಿಗೆ ಸೇರತಕ್ಕವು.)

**ರಾಜ್ಞಶ್ಚ ದದ್ಯುರುದ್ಧಾರಮಿತ್ಯೇಷಾ ವೈದಿಕೀ ಶ್ರುತಿಃ ।**
**ರಾಜ್ಞಾ ಚ ಸರ್ವಯೋಧೇಭ್ಯೋ ದಾತವ್ಯಮಪೃಥಗ್ಜಿತಮ್ ॥ ೩೬**

ಹತ್ತಾರು ಸೈನಿಕರು ಒಟ್ಟಿಗೇ ಸೇರಿ ಗೆದ್ದು ಸಂಪಾದಿಸಿದ ಧನವನ್ನೆಲ್ಲ ರಾಜನಿಗೆ ಕೊಡಬೇಕೆಂದು ಶ್ರುತಿನಿಯಮ. ಆ ಒಟ್ಟುಸಂಪಾದನೆಯಲ್ಲಿ ಅವರ ಪೌರುಷ, ಸಾಹಸಗಳಿಗೆ ಅನುಗುಣವಾಗಿ ಯೋಧರಿಗೆ ರಾಜನು ಅವನ್ನು ಹಂಚಬೇಕು.

**ಅಲಬ್ಧಮಿಚ್ಛೇದ್ದಂಡೇನ ಲಬ್ಧಂ ರಕ್ಷೇದವೇಕ್ಷಯಾ ।**
**ರಕ್ಷಿತಂ ವರ್ಧಯೇದ್ವೃದ್ಧ್ಯಾ ವೃದ್ಧಂ ದಾನೇನ ನಿಃಕ್ಷಿಪೇತ್ ॥ ೩೭**

ತನ್ನಲ್ಲಿಲ್ಲದ ಹಸ್ತ್ಯಶ್ವರಥಪದಾತಿ ಧನಕನಕಾದಿಗಳನ್ನು ಯುದ್ಧಮಾಡಿ ಸಂಪಾದಿಸಲು ಅಪೇಕ್ಷಿಸಬೇಕು. ಸಂಪಾದಿಸಿದುದನ್ನು ಸರಿಯಾಗಿ ನೋಡಿಕೊಂಡು ಕಾಪಾಡಿಕೊಳ್ಳಬೇಕು. ಕಾಪಾಡಿದುದನ್ನು ವಾಣಿಜ್ಯಾದಿ ವಿಧಾನಗಳಿಂದ ಹೆಚ್ಚಿಸಿಕೊಳ್ಳಬೇಕು. ಹಾಗೆ ಹೆಚ್ಚಿದುದನ್ನು ಸತ್ಪಾತ್ರಗಳಲ್ಲಿ ಶಾಸ್ತ್ರವಿಹಿತರೀತಿಯಿಂದ ದಾನಮಾಡಿ ವಿನಿಯೋಗಿಸಬೇಕು.

**ನಿತ್ಯಮುದ್ಯತದಂಡಃ ಸ್ಯಾನ್ನಿತ್ಯಂ ವಿವೃತಪೌರುಷಃ ।**
**ನಿತ್ಯಂ ಸಂವೃತಸಂವಾರ್ಯೋ ನಿತ್ಯಂ ಛಿದ್ರಾನುಸಾರ್ಯರೇಃ ॥ ೩೮**

ರಾಜನ ಹಸ್ತ್ಯಶ್ವಾದಿ ಸೈನ್ಯಗಳು ಯುದ್ಧಾದಿ ಶಿಕ್ಷಣಗಳಿಂದ ಸದಾ ಸನ್ನದ್ಧವಾಗಿರಬೇಕು. ಶಸ್ತ್ರಾಸ್ತ್ರಪ್ರದರ್ಶನಗಳಿಂದ ರಾಜನು ಪೌರುಷವನ್ನು ಯಾವಾಗಲೂ ತೋರಿಸಿಕೊಳ್ಳಬೇಕು; ತನ್ನ ಮಂತ್ರಾಲೋಚನೆ, ಆಚಾರ, ಸಂಧಾನ ಚೇಷ್ಟೆಗಳನ್ನು ಯಾವಾಗಲೂ ಗೋಪ್ಯವಾಗಿಡಬೇಕು; ಶತ್ರುಗಳ ವ್ಯಸನಾದಿರೂಪ ಛಿದ್ರಗಳನ್ನು ಹುಡುಕಿ ತೆಗೆದು ತಿಳಿಯುತ್ತಲೇ ಇರಬೇಕು.

**ನಾಸ್ಯ ಛಿದ್ರಂ ಪರೋ ವಿದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು ।**
**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥ ೩೯**

ತನ್ನಲ್ಲಿರುವ ಒಡಕುಗಳನ್ನು ಶತ್ರುಗಳಿಗೆ ತಿಳಿಯಗೊಡಬಾರದು; ಅವರ ಛಿದ್ರಗಳನ್ನು ತಾನು ತಿಳಿದುಕೊಳ್ಳುತ್ತಿರಬೇಕು; ಈ ರೀತಿ ನಡೆದುಕೊಳ್ಳಬೇಕು. ಆಮೆಯು ತನ್ನ ಅವಯುವಗಳನ್ನು ಒಳಗೆಳೆದುಕೊಂಡು, ಅವು ಪ್ರಕಟವಾಗದಂತೆಮಾಡಿ ತನ್ನನ್ನು ರಕ್ಷಿಸಿಕೊಳ್ಳುವಂತೆ, ರಾಜನು ತನ್ನ ಛಿದ್ರಗಳನ್ನು ಗೋಪ್ಯವಾಗಿಟ್ಟುಕೊಳ್ಳಬೇಕಲ್ಲದೆ, ಅಕಸ್ಮಾತ್ತಾಗಿ ತನ್ನ ಗುಟ್ಟು ಶತ್ರುಗಳಿಗೆ ಗೊತ್ತಾದರೂ ಪ್ರಯತ್ನಪಟ್ಟು ಅವರಿಗೆ ಪ್ರತೀಕಾರ ಮಾಡಿ ತನ್ನನ್ನು ಕಾಪಾಡಿಕೊಳ್ಳಬೇಕು.

**ಸಾಮಾದೀನಾಮುಪಾಯಾನಾಂ ಚತುರ್ಣಾಮಪಿ ಪಂಡಿತಾಃ ।**
**ಸಾಮದಂಡೌ ಪ್ರಶಂಸಂತಿ ನಿತ್ಯಂ ರಾಷ್ಟ್ರಾಭಿವೃದ್ಧಯೇ ॥** ೪೦

ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳಲ್ಲಿ ರಾಷ್ಟ್ರದ ಅಭಿವೃದ್ಧಿಗಾಗಿ ಪಂಡಿತರು ಸಾಮ ಮತ್ತು ದಂಡ ಇವೆರಡನ್ನೇ ಹೊಗಳಿದ್ದಾರೆ.

(ಸಾಮದಲ್ಲಿ ಸೈನ್ಯಕ್ಷಯ, ಧನವ್ಯಯ, ಅತಿಪ್ರಯಾಸ ಮುಂತಾದುವು ಇರುವುದಿಲ್ಲ. ಅವೆಲ್ಲ ಇದ್ದರೂ ಯುದ್ಧಮಾತ್ರದಿಂದಲೇ ಕಾರ್ಯಸಿದ್ಧಿಯಾಗುವುದಾದರೆ, ಅವನ್ನು ಲಕ್ಷಿಸಬೇಕಾಗಿಲ್ಲ.)

**ಮೋಹಾದ್ರಾಜಾ ಸ್ವರಾಷ್ಟ್ರಂ ಯಃ ಕರ್ಷಯತ್ಯನವೇಕ್ಷಯಾ ।**
**ಸೋಽಚಿರಾದ್ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ॥** ೪೧

ದುಷ್ಟರು ಯಾರು, ಶಿಷ್ಟರು ಯಾರು ಎಂಬುದನ್ನು ಪರೀಕ್ಷಿಸದೆ ಅಜ್ಞಾನದಿಂದ ಯಾವ ರಾಜನು ತನ್ನ ಪ್ರಜೆಗಳನ್ನು, ಅವರ ಹಣ ಕಿತ್ತುಕೊಳ್ಳುವುದು ಅಥವಾ ಪ್ರಾಣ ತೆಗೆಯುವುದು ಮೊದಲಾದ ಕಷ್ಟಗಳಿಗೆ ಈಡು ಮಾಡುತ್ತಾನೆಯೋ, ಅವನು ತನ್ನ ರಾಜ್ಯವನ್ನು ಕಳೆದುಕೊಳ್ಳುವನು ಮತ್ತು ಬಂಧುಸಮೇತನಾಗಿ ಪ್ರಾಣಗಳನ್ನು ಕಳೆದುಕೊಳ್ಳಬಹುದು.

**ಗ್ರಾಮಸ್ಯಾಧಿಪತಿಂ ಕುರ್ಯಾದ್ದಶಗ್ರಾಮಪತಿಂ ತಥಾ ।**
**ವಿಂಶತೀಶಂ ಶತೇಶಂ ಚ ಸಹಸ್ರಪತಿಮೇವ ಚ ॥** ೪೨

ಪ್ರತಿಯೊಂದು ಗ್ರಾಮಕ್ಕೂ ಒಬ್ಬ ಅಧಿಪತಿಯನ್ನು ನಿಯಮಿಸಬೇಕು. ಹತ್ತು ಗ್ರಾಮಗಳಿಗೊಬ್ಬ ಅಧಿಕಾರಿಯೂ, ಇಪ್ಪತ್ತು ಗ್ರಾಮಗಳಿಗೊಬ್ಬನಂತೆ

ಮೇಲಿನ ಅಧಿಕಾರಿಯೂ, ಹಾಗೆಯೇ ನೂರು ಗ್ರಾಮಕ್ಕೆ ಒಬ್ಬ ಅಧಿಪತಿ ಮತ್ತು ಸಾವಿರ ಗ್ರಾಮಗಳಿಗೆ ಅಧಿಪತಿಯೊಬ್ಬನನ್ನೂ ನಿಯಮಿಸಬೇಕು.

**ಗ್ರಾಮದೋಷಾನ್ಸಮುತ್ಪನ್ನಾನ್ಗ್ರಾಮಿಕಃ ಶನಕೈಃ ಸ್ವಯಮ್ ।**
**ಶಂಸೇದ್ಗ್ರಾಮದಶೇಶಾಯ ದಶೇಶೋ ವಿಂಶತೀಶಿನಮ್ ॥ ೪೩**

**ವಿಂಶತೀಶಸ್ತು ತತ್ಸರ್ವಂ ಶತೇಶಾಯ ನಿವೇದಯೇತ್ ।**
**ಶಂಸೇದ್ಗ್ರಾಮಶತೇಶಸ್ತು ಸಹಸ್ರಪತಯೇ ಸ್ವಯಮ್ ॥ ೪೪**

ತನ್ನ ಗ್ರಾಮದಲ್ಲಿ ನಡೆದ ಚೌರ್ಯಾದಿ ಉಪದ್ರವಗಳನ್ನು ನಿವಾರಿಸಲು ಅಸಮರ್ಥನಾದ ಗ್ರಾಮಪತಿಯು ಅವನ್ನು ತಾನೇ ದಶಗ್ರಾಮಾಧಿಪತಿಗೆ ತಿಳಿಸಬೇಕು. ತನ್ನಿಂದ ನ್ಯಾಯದೊರಕಿಸಲು ಸಾಧ್ಯವಾಗದಾಗ ದಶಗ್ರಾಮೇಶನು ವಿಂಶತೀಶನಿಗೆ ವಿಷಯವನ್ನು ತಿಳಿಸಬೇಕು. ಹೀಗೆಯೇ ವಿಂಶತೀಶನು ಎಲ್ಲವನ್ನೂ ಶತೇಶನಿಗೂ, ಅವನು ಮುಂದೆ ಸಹಸ್ರಪತಿಗೂ ತಿಳಿಸಬೇಕು.

**ನಗರೇ ನಗರೇ ಚೈಕಂ ಕುರ್ಯಾತ್ಸರ್ವಾರ್ಥಚಿಂತಕಮ್ ।**
**ಉಚ್ಚೈಃಸ್ಥಾನಂ ಘೋರರೂಪಂ ನಕ್ಷತ್ರಾಣಾಮಿವ ಗ್ರಹಮ್ ॥ ೪೫**

ಪ್ರತಿಯೊಂದು ನಗರದಲ್ಲಿಯೂ ಕುಲ, ವಿದ್ಯೆ, ಹಣ ಮುಂತಾದುವುಗಳಲ್ಲಿ ಉನ್ನತಸ್ಥಾನವನ್ನು ಪಡೆದಿರುವ, ಕ್ರೂರಸ್ವರೂಪನಾದ (ಹೆಂಗರುಳಿನವನಲ್ಲದ), ಸರ್ವಾರ್ಥಚಿಂತಕನಾದ ಅಧಿಪತಿಯನ್ನು ನಿಯಮಿಸಬೇಕು. ಆ ನಗರಾಧಿಪತಿಯು ನಕ್ಷತ್ರಗಳ ಮಧ್ಯೆ ಪ್ರಕಾಶಿಸುವ ಗುರು ಅಥವಾ ಶುಕ್ರಗ್ರಹಗಳಂತೆ ತೋರುವನು.

**ರಾಜ್ಞೋ ಹಿ ರಕ್ಷಾಧಿಕೃತಾಃ ಪರಸ್ವಾದಾಯಿನಃ ಶಠಾಃ ।**
**ಭೃತ್ಯಾ ಭವಂತಿ ಪ್ರಾಯೇಣ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥ ೪೬**

ಪ್ರಜಾರಕ್ಷಕರಾಗಿ ಅರಸನಿಂದ ಅಧಿಕಾರ ಹೊಂದಿದ ಭೃತ್ಯರು, ಪ್ರಾಯಶಃ ಮತ್ತೊಬ್ಬರ ಸ್ವತ್ತನ್ನು ಅಪಹರಿಸುವವರಾಗಿಯೂ ವಂಚಕರಾಗಿಯೂ ಇರುತ್ತಾರೆ. ರಾಜನು ಅವರ ದೆಸೆಯಿಂದ ಪ್ರಜೆಗಳನ್ನು ಕಾಪಾಡಬೇಕು.

**ಯೇ ಕಾರ್ಯಿಕೇಭ್ಯೋಽರ್ಥಮೇವ ಗೃಹ್ಣೀಯುಃ ಪಾಪಚೇತಸಃ ।**
**ತೇಷಾಂ ಸರ್ವಸ್ವಮಾದಾಯ ರಾಜಾ ಕುರ್ಯಾತ್ಪ್ರವಾಸನಮ್ ॥**

ಯಾವ ರಕ್ಷಾಧಿಕಾರಿಗಳು ತಮ್ಮಲ್ಲಿ ಕಾರ್ಯಾರ್ಥಿಗಳಾಗಿ ಬಂದವರಿಂದ (ಸುಳ್ಳುಮಾತುಗಳನ್ನು ಹೇಳಿ) ಹಣವನ್ನು ಸುಲಿಯುವರೋ, ಪಾಪಬುದ್ಧಿಯುಳ್ಳ ಅಂತಹ ಅಧಿಕಾರಿಗಳ ಸರ್ವಸ್ವವನ್ನೂ ರಾಜನು ತೆಗೆದುಕೊಂಡು ಅವರನ್ನು ದೇಶದಿಂದಲೇ ಓಡಿಸಬೇಕು.

**ಕ್ರಯವಿಕ್ರಯಮಧ್ವಾನಂ ಭುಕ್ತಂ ಚ ಸಪರಿವ್ಯಯಮ್ ।**
**ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ವಣಿಜೋ ದಾಪಯೇತ್ಕರಮ್ ॥**

ಬಟ್ಟೆಬರೆ, ಆಹಾರಪದಾರ್ಥಗಳು ಎಷ್ಟು ಬೆಲೆಗೆ ಕೊಳ್ಳಲ್ಪಟ್ಟವು, ಎಷ್ಟಕ್ಕೆ ಮಾರಲ್ಪಟ್ಟವು, ಅವು ಎಷ್ಟು ದೂರದ ಮಾರುಕಟ್ಟೆಗೆ ಬಂದವು, ಆ ವ್ಯಾಪಾರಕ್ಕಾಗಿ ದಾರಿಯಲ್ಲಿ ವೆಚ್ಚ, ಶಿಬ್ಬಂದಿಗೆ ಊಟದ ಖರ್ಚು, ಸಂಚಾರಕ್ರಮದಲ್ಲಿ ಕಳ್ಳಕಾಕರ ತೊಂದರೆ ನಿವಾರಿಸಿಕೊಳ್ಳಲು ರಕ್ಷಣೋಪಾಯಗಳಿಗೆ ಎಷ್ಟು ಹಣ ವ್ಯಯವಾಯಿತು ಎಂಬುದನ್ನೆಲ್ಲ ಪರಿಶೀಲಿಸಿ, ಅನಂತರ ವರ್ತಕನ ಲಾಭವನ್ನು ನಿರ್ಣಯಿಸಿ, ಅವನಿಂದ ರಾಜನು ಕರವನ್ನು (ತೆರಿಗೆ) ತೆಗೆದುಕೊಳ್ಳಬೇಕು.

**ಯಥಾ ಫಲೇನ ಯುಜ್ಯೇತ ರಾಜಾ ಕರ್ತಾ ಚ ಕರ್ಮಣಾಮ್ ।**
**ತಥಾಽವೇಕ್ಷ್ಯ ನೃಪೋ ರಾಷ್ಟ್ರೇ ಕಲ್ಪಯೇತ್ಸತತಂ ಕರಾನ್ ॥** ೪೯

ವ್ಯಾಪಾರಕ್ಕೆ ರಾಜಮಾರ್ಗವನ್ನೂ ರಕ್ಷಣಸೌಕರ್ಯಗಳನ್ನೂ ಮಾಡಿಕೊಡುವುದರಿಂದ ರಾಜನಿಗೂ, ಶ್ರಮವಹಿಸಿ ಬುದ್ಧಿವಂತಿಕೆಯಿಂದ ಲಾಭಗಳಿಸುವ ವರ್ತಕನಿಗೂ ಸಾಕಷ್ಟು ಫಲ ಬರುವಂತೆ ನೋಡಿಕೊಂಡು ರಾಜನು ಯಾವಾಗಲೂ ರಾಜ್ಯದಲ್ಲಿ ತೆರಿಗೆಗಳನ್ನು ವಿಧಿಸಬೇಕು.

**ಯಥಾಲ್ಪಾಲ್ಪಮದಂತ್ಯಾದ್ಯಂ ವಾರ್ಯೋಕೋವತ್ಸಷಟ್ಪದಾಃ ।**
**ತಥಾಲ್ಪಾಲ್ಪೋ ಗ್ರಹೀತವ್ಯೋ ರಾಷ್ಟ್ರಾದ್ರಾಜ್ಞಾಽಬ್ದಿಕಃ ಕರಃ ॥** ೫೦

ಮೀನು ಮೊದಲಾದ ಜಲಜಂತುಗಳು, ಕರುಗಳು ಮತ್ತು ದುಂಬಿಗಳು ತಮ್ಮ (ರಕ್ತ, ಕ್ಷೀರ ಮತ್ತು ಮಧುರೂಪವಾದ) ಆಹಾರಗಳನ್ನು ಹೇಗೆ ಅತ್ಯಲ್ಪ ತುತ್ತುಗಳಾಗಿಯೇ ಸ್ವೀಕರಿಸುತ್ತವೆಯೋ, ಹಾಗೆಯೇ ರಾಜನು

ತನ್ನ ರಾಜ್ಯದಿಂದ ಸ್ವಲ್ಪಸ್ವಲ್ಪವಾಗಿ ಪ್ರತಿವರ್ಷವೂ ಕರವನ್ನು ತೆಗೆದುಕೊಳ್ಳಬೇಕು. (ಕೆಚ್ಚಲನ್ನು ಕೊಯ್ದು ಎಲ್ಲ ಹಾಲನ್ನೂ ಹಿಂಡುವ ಯೋಜನೆ ಮಾಡಬಾರದು.)

**ಪಂಚಾಶದ್ಭಾಗ ಆದೇಯೋ ರಾಜ್ಞಾ ಪಶುಹಿರಣ್ಯಯೋಃ ।**
**ಧಾನ್ಯಾನಾಮಷ್ಟಮೋ ಭಾಗಃ ಷಷ್ಠೋ ದ್ವಾದಶ ಏವ ವಾ ॥ ೫೧**

ಮೂಲಕ್ಕಿಂತ ಹೆಚ್ಚಿರುವ ಪಶು ಧನಾದಿಗಳಲ್ಲಿ ಅಭಿವೃದ್ಧಿಯ ಐವತ್ತನೆಯ ಒಂದು ಭಾಗವನ್ನು (2%) ರಾಜನು ತೆಗೆದುಕೊಳ್ಳಬೇಕು. ಧಾನ್ಯಗಳಲ್ಲಿ ಎಂಟನೆಯ ಒಂದು ಭಾಗವನ್ನು ತೆಗೆದುಕೊಳ್ಳಬೇಕು. ಆದರೆ ಭೂಗುಣವನ್ನೂ ಬೆಳೆಯ ಸಮೃದ್ಧಿಯನ್ನೂ ಪರಿಶೀಲಿಸಿ, ಹನ್ನೆರಡನೆಯ ಭಾಗದಿಂದ ಆರನೆಯ ಭಾಗದವರೆಗೆ ತೆಗೆದುಕೊಳ್ಳಬಹುದು.

**ಮ್ರಿಯಮಾಣೋಽಪ್ಯಾದದೀತ ನ ರಾಜಾ ಶ್ರೋತ್ರಿಯಾತ್ಕರಮ್ ।**
**ನ ಚ ಕ್ಷುಧಾಽಸ್ಯ ಸಂಸೀದೇಚ್ಛ್ರೋತ್ರಿಯೋ ವಿಷಯೇ ವಸನ್ ॥**

ತನ್ನ ಪ್ರಾಣಾಪಾಯ ಒದಗಿದಾಗಲೂ ರಾಜನು ಶ್ರೋತ್ರಿಯನಾದ ಬ್ರಾಹ್ಮಣನಿಂದ ಕರವನ್ನು ತೆಗೆದುಕೊಳ್ಳಬಾರದು. ಅವನ ರಾಜ್ಯದಲ್ಲಿ ವಾಸಮಾಡುವ ಯಾವ ಶ್ರೋತ್ರಿಯನೂ ಹಸಿವಿನಿಂದ ಸಾಯಬಾರದು.

**ನೋಚ್ಛಿಂದ್ಯಾದಾತ್ಮನೋ ಮೂಲಂ ಪರೇಷಾಂ ಚಾತಿತೃಷ್ಣಯಾ ।**
**ಉಚ್ಛಿಂದನ್ಹ್ಯಾತ್ಮನೋ ಮೂಲಮಾತ್ಮಾನಂ ತಾಂಶ್ಚ ಪೀಡಯೇತ್॥**

ಪ್ರಜೆಗಳಲ್ಲಿ ವಾತ್ಸಲ್ಯಾತಿರೇಕದಿಂದ ಅವರಿಂದ ಸಾಕಾದಷ್ಟು ಕರವನ್ನು ರಾಜನು ತೆಗೆದುಕೊಳ್ಳದಿದ್ದರೆ, ಕೋಶಬಲ ಕಡಿಮೆಯಾಗಿ ತನ್ನ ಮೂಲವನ್ನೇ ಕಡಿದುಕೊಂಡಂತೆ ಆಗುವುದು; ತನ್ನ ಮೂಲವನ್ನು ಕಡಿದುಕೊಂಡರೆ ತನಗೂ ಪರರಿಗೂ ಹಾನಿಯೇ ಆಗುವುದು. ಆದರೆ ಅತಿ ಆಸೆಯಿಂದ ತಡೆಯಲು ಸಾಧ್ಯವಿಲ್ಲದಷ್ಟು ಕರವನ್ನು ಪ್ರಜೆಗಳಿಂದ ತೆಗೆದುಕೊಂಡರೆ, ಅವರ ಮೂಲವನ್ನೇ ಕಡಿದಂತೆ ಆಗುವುದು. ಇವೆರಡೂ ಸರಿಯಾದ ಮಾರ್ಗಗಳಲ್ಲ.

**ಅಮಾತ್ಯಮುಖ್ಯಂ ಧರ್ಮಜ್ಞಂ ಪ್ರಾಜ್ಞಂ ದಾಂತಂ ಕುಲೋದ್ಗತಮ್**
**ಸ್ಥಾಪಯೇದಾಸನೇ ತಸ್ಮಿನ್ಖಿನ್ನಃ ಕಾರ್ಯೇಕ್ಷಣೇ ನೃಣಾಮ್ ॥ ೫೪**

ಆಯಾಸದಿಂದ ತನ್ನ ಕೆಲಸಗಳನ್ನೆಲ್ಲ ನೋಡಿಕೊಳ್ಳಲು ಅಸಮರ್ಥನಾದ ರಾಜನು, ಆ ಕಾರ್ಯಗಳನ್ನು ನೋಡಿಕೊಳ್ಳುವುದಕ್ಕಾಗಿ ಧರ್ಮಜ್ಞನೂ, ಪ್ರಾಜ್ಞನೂ, ದಾಂತನೂ, ಸತ್ಕುಲಪ್ರಸೂತನೂ ಆದ ಒಬ್ಬ ಪ್ರಮುಖ ಅಮಾತ್ಯನನ್ನು ನಿಯಮಿಸಬೇಕು.

**ವಿಕ್ರೋಶಂತ್ಯೋ ಯಸ್ಯ ರಾಷ್ಟ್ರಾದ್ಧ್ರಿಯಂತೇ ದಸ್ಯುಭಿಃ ಪ್ರಜಾಃ ।**
**ಸಂಪಶ್ಯತಃ ಸಭೃತ್ಯಸ್ಯ ಮೃತಃ ಸ ನ ತು ಜೀವತಿ ॥** ೫೫

ಅಮಾತ್ಯ, ಸೇನಾಪತಿ ಮೊದಲಾದವರಿಂದ ಕೂಡಿದ ರಾಜನ ಕಣ್ಣೆದುರಿಗೇ ದೇಶದ ಪ್ರಜೆಗಳು ಗೋಳಿಡುತ್ತಾ ದಸ್ಯು(ಕಳ್ಳ)ಗಳಿಂದಲೇ ಆಗಲಿ, ಪರರಾಷ್ಟ್ರದ ಭಟರಿಂದಲೇ ಆಗಲಿ, ಬಲಾತ್ಕಾರದಿಂದ ಎಳೆದೊಯ್ಯಲ್ಪಟ್ಟರೆ, ಆ ರಾಜನು ಬದುಕಿದ್ದರೂ ಸತ್ತಂತೆಯೇ. (ಪ್ರಜಾಪಾಲನೆಯೇ ರಾಜನ ಧರ್ಮ.)

**ಅನಂತರಮರಿಂ ವಿದ್ಯಾದರಿಸೇವಿನಮೇವ ಚ ।**
**ಅರೇರನಂತರಂ ಮಿತ್ರಮುದಾಸೀನಂ ತಯೋಃ ಪರಮ್ ॥** ೫೬

(ರಾಜ್ಯವಿಸ್ತರಣಕ್ಕಾಗಿ ಆಸೆ ಹೊಂದಿರುವ) ರಾಜನಿಗೆ ತನ್ನ ದೇಶದ (ಎಲ್ಲ ದಿಕ್ಕುಗಳಲ್ಲಿಯೂ) ಮಗ್ಗುಲಲ್ಲಿರುವ ನೆರೆರಾಜರು ಶತ್ರುಗಳು ಮತ್ತು ಆ ಶತ್ರುವನ್ನು ಆಶ್ರಯಿಸಿರುವವರೂ ಶತ್ರುಗಳೇ ಎಂದು ತಿಳಿಯಬೇಕು. ಅಂತಹ ಶತ್ರುಗಳಿಗೆ ಮತ್ತೊಂದು ಪಾರ್ಶ್ವದಲ್ಲಿರುವ ರಾಜರು (ಶತ್ರುಗಳಿಗೆ ಶತ್ರುವಾಗುವುದರಿಂದ) ತನಗೆ ಮಿತ್ರರೇ ಆಗುವರು. ಆ ಶತ್ರು ಮತ್ತು ಮಿತ್ರರಾಷ್ಟ್ರಗಳಿಗೂ ಆಚೆಯಿರುವವರನ್ನು ತನ್ನ ವಿಷಯದಲ್ಲಿ ಉದಾಸೀನರೆಂದು ಪರಿಗಣಿಸಬೇಕು.

**ತಾನ್ಸರ್ವಾನಭಿಸಂದಧ್ಯಾತ್ ಸಾಮಾದಿಭಿರುಪಕ್ರಮೈಃ ।**
**ವ್ಯಸ್ತೈಶ್ಚೈವ ಸಮಸ್ತೈಶ್ಚ ಪೌರುಷೇಣ ನಯೇನ ಚ ॥** ೫೭

ಆ ಎಲ್ಲ ರಾಜರನ್ನೂ ಸಾಮದಾನಭೇದದಂಡೋಪಾಯಗಳಿಂದ ತನ್ನ ವಶರನ್ನಾಗಿ ಮಾಡಿಕೊಳ್ಳಬೇಕು. ಅಥವಾ ಅವರನ್ನು ಬೇರೆಬೇರೆಯಾಗಲಿ, ಒಟ್ಟಾಗಿಯೇ ಆಗಲಿ ದಂಡದಿಂದಲೋ ಸಾಮದಿಂದಲೋ ತನ್ನವರನ್ನಾಗಿ ಮಾಡಿಕೊಳ್ಳಬೇಕು.

**ಸಂಧಿಂ ಚ ವಿಗ್ರಹಂ ಚೈವ ಯಾನಮಾಸನಮೇವ ಚ ।**
**ದ್ವೈಧೀಭಾವಂ ಸಂಶ್ರಯಂ ಚ ಷಡ್ಗುಣಾಂಶ್ಚಿಂತಯೇತ್ಸದಾ ॥ ೫೮**

ಶತ್ರುಗಳೊಡನೆ ಸಂಧಾನ ನಡೆಸುವಾಗ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯಗಳೆಂಬ ಆರು ಉಪಾಯಗಳನ್ನು ಕುರಿತು ಯಾವಾಗಲೂ ಚಿಂತಿಸಬೇಕು.

(ಇಬ್ಬರಿಗೂ ಅನುಕೂಲವಾಗಿರುವಂತೆ ತಮ್ಮ ತಮ್ಮ ಸೈನ್ಯಗಳ ಬಲಗಳು ಎಷ್ಟಿರಬೇಕು ಎಂದು ನಿಶ್ಚಯಿಸಿ, ಪರಸ್ಪರ ಸೌಹಾರ್ದ್ರದಿಂದಿದ್ದು, ಪರರಾಜರ ಆಕ್ರಮಣದಲ್ಲಿ ಪರಸ್ಪರ ಸಹಾಯ ಮಾಡಲು ಒಪ್ಪಂದಮಾಡಿಕೊಳ್ಳುವುದು ಸಂಧಿ. ಬಲಪ್ರಯೋಗದಿಂದ ಶತ್ರುವನ್ನು ಎದುರಿಸಿ ಯುದ್ಧ ಮಾಡುವುದು ವಿಗ್ರಹ. ಶತ್ರುವನ್ನು ಎದುರಿಸಲು ಅಥವಾ ಅವನಮೇಲೆ ದಾಳಿಮಾಡಲು ತನ್ನ ಸ್ಥಾನದಿಂದ ಸೈನ್ಯದೊಡನೆ ಚಲಿಸುವುದು ಯಾನ. ತನ್ನ ಸ್ವಾರ್ಥಸಾಧನೆಗಾಗಿ ತಾನಿರುವ ಜಾಗದಲ್ಲಿಯೇ ಜಾಗರೂಕನಾಗಿ ಕೂಡುವುದೇ ಆಸನ. ಯುದ್ಧಕ್ಕಾಗಿ ಚಾತುರ್ಯದಿಂದ ತನ್ನ ಸೈನ್ಯವನ್ನು ಎರಡು ಭಾಗವಾಗಿ ಮಾಡಿಕೊಂಡು ಸಂಚರಿಸುವುದು ದ್ವೈಧೀಭಾವ. ಶತ್ರುವಿನ ಹಿಂಸೆಗೆ ಒಳಗಾದ, ಆದರೆ ತನಗಿಂತ ಬಲಶಾಲಿಯಾದ ಮೂರನೆಯ ರಾಜನನ್ನು ಆಶ್ರಯುಮಾಡುವುದು ಸಂಶ್ರಯ.)

**ಯದಾವಗಚ್ಛೇದಾಯತ್ಯಾಮಾಧಿಕ್ಯಂ ಧ್ರುವಮಾತ್ಮನಃ ।**
**ತದಾತ್ವೇ ಚಾಲ್ಪಿಕಾಂ ಪೀಡಾಂ ತದಾ ಸಂಧಿಂ ಸಮಾಶ್ರಯೇತ್ ॥**

ಮುಂದೆ ಕೆಲವು ಕಾಲ ಕಳೆದನಂತರ, ತನಗೆ ಉತ್ತಮಸ್ಥಿತಿಯು ಖಂಡಿತವಾಗಿಯೂ ಒದಗುವುದೆಂದು ಖಚಿತವಾದರೆ, ಮತ್ತು ತತ್ಕಾಲದಲ್ಲಿ ಹಣದ ಕೊರತೆ, ಸೈನ್ಯದ ಅಸಿದ್ಧತೆ ಮುಂತಾದ ತೊಂದರೆಗಳಿರುವುದು ಸ್ಪಷ್ಟವಾದರೆ ಶತ್ರುವಿನೊಡನೆ ಸಂಧಿಯನ್ನು ಮಾಡಿಕೊಳ್ಳಬೇಕು.

**ಯದಾ ಪ್ರಹೃಷ್ಟಾ ಮನ್ಯೇತ ಸರ್ವಾಸ್ತು ಪ್ರಕೃತೀರ್ಭೃಶಮ್ ।**
**ಅತ್ಯುಚ್ಛ್ರಿತಂ ತಥಾऽತ್ಮಾನಂ ತದಾ ಕುರ್ವೀತ ವಿಗ್ರಹಮ್ ॥ ೬೦**

ತನ್ನ ಅಮಾತ್ಯ, ಸೇನಾಪತಿ ಮೊದಲಾದ ವಿವಿಧ ಅಧಿಕಾರಿಗಳು ತಾನು ಕೊಡುತ್ತಿರುವ ವೇತನ, ಬಹುಮಾನ ಮುಂತಾದುವುಗಳಿಂದ

ಸಂತುಷ್ಟರೂ, ಸುಪ್ರಸನ್ನರೂ, ಸ್ವವಶರೂ ಆಗಿರುವರೆಂದು ತಿಳಿದರೆ, ಮತ್ತು ತನ್ನ ಹಸ್ತ್ಯಶ್ವಕೋಶಾದಿಬಲಗಳು ಉತ್ತಮಸ್ಥಿತಿಯಲ್ಲಿರುವುವೆಂದು ತಿಳಿದು ಬಂದರೆ, ಆಗ ಯುದ್ಧವನ್ನು ಮಾಡಬೇಕು. (ಸಂಧಿ, ವಿಗ್ರಹಗಳು ಶತ್ರುವೇ ತನ್ನಮೇಲೇರಿ ಬಂದಾಗ.)

**ಯದಾ ಮನ್ಯೇತ ಭಾವೇನ ಹೃಷ್ಟಂ ಪುಷ್ಟಂ ಬಲಂ ಸ್ವಕಮ್ ।**
**ಪರಸ್ಯ ವಿಪರೀತಂ ಚ ತದಾ ಯಾಯಾದ್ರಿಪುಂ ಪ್ರತಿ ॥** ೬೧

ತನ್ನ ಅಮಾತ್ಯ, ಸೈನ್ಯ ಮುಂತಾದುವು ಸಂತುಷ್ಟವೂ ಬಲಯುತವೂ ವಾಸ್ತವವಾಗಿ ಇರುವುವು ಎಂದು ತಿಳಿದುಬಂದರೆ ಮತ್ತು ಶತ್ರುವಿನ ಸ್ಥಿತಿ ಇದಕ್ಕೆ ವಿಪರೀತವಾಗಿರುವುವೆಂದು ಗೊತ್ತಾದರೆ (ಪ್ರಜೆಗಳು ಅಸಂತುಷ್ಟರು ಮತ್ತು ಸೈನ್ಯವು ಬಲಹೀನ), ಆಗ ಶತ್ರುವಿನ ಅಭಿಮುಖವಾಗಿ ತಾನೇ ಪ್ರಯಾಣಮಾಡಬೇಕು

**ಯದಾ ತು ಸ್ಯಾತ್ಪರಿಕ್ಷೀಣೋ ವಾಹನೇನ ಬಲೇನ ಚ ।**
**ತದಾಸೀತ ಪ್ರಯತ್ನೇನ ಶನಕೈಃ ಸಾಂತ್ವಯನ್ನರೀನ್ ॥** ೬೨

ತನ್ನ ಹಸ್ತ್ಯಶ್ವಾದಿ ಸೈನ್ಯವು ದುರ್ಬಲವಾಗಿದ್ದು, ಅಮಾತ್ಯ, ಸೇನಾಪತಿ, ಪ್ರಜೆಗಳು ಬಹುಕಾಲ ತೊಂದರೆಗೆ ಒಳಗಾಗಿ ಪರಿಕ್ಷೀಣರಾಗಿ ಯುದ್ಧಕ್ಕೆ ಸಿದ್ಧರಾಗಿಲ್ಲದಾಗ, ಸಾಮೋಪಾಯದಿಂದಲೂ ಅಲ್ಪಸ್ವಲ್ಪ ಹಣ ಕೊಡುತ್ತಿರುವುದರಿಂದಲೂ ಪ್ರಯತ್ನಪಟ್ಟು ಮೆಲ್ಲಮೆಲ್ಲನೆ ಶತ್ರುವನ್ನು ಸಮಾಧಾನಪಡಿಸುತ್ತಾ, (ತನ್ನ ಒಳ್ಳೆಯ ದಿನಗಳನ್ನು ನಿರೀಕ್ಷಿಸುತ್ತಾ), ಇದ್ದಲ್ಲಿಯೇ ಸುಮ್ಮನೆ ಕುಳಿತಿರಬೇಕು. ಇದು ಆಸನವೆಂಬ ಉಪಾಯ.

**ಮನ್ಯೇತಾರಿಂ ಯದಾ ರಾಜಾ ಸರ್ವಥಾ ಬಲವತ್ತರಮ್ ।**
**ತದಾ ದ್ವಿಧಾ ಬಲಂ ಕೃತ್ವಾ ಸಾಧಯೇತ್ಕಾರ್ಯಮಾತ್ಮನಃ ॥** ೬೩

ಸರ್ವರೀತಿಯಿಂದಲೂ ಶತ್ರುವು ತನಗಿಂತ ಬಲಶಾಲಿಯಾಗಿದ್ದು, ಸಂಧಾನಗಳಿಗೆ ಒಳಗಾಗುವುದಿಲ್ಲವೆಂದು ತಿಳಿದಮೇಲೆ, ರಾಜನು ತನ್ನ ಬಲವನ್ನು ಎರಡು ಭಾಗ ಮಾಡಿಕೊಂಡು, ಒಂದನ್ನು ಶತ್ರುಗಳ ಮುನ್ನೋಟವನ್ನು ತಡೆಯಲು ನಿಯಮಿಸಿ, ತಾನು ಕೋಟೆಯೊಳಗಿದ್ದು ಇನ್ನೊಂದರಿಂದ ಆತ್ಮರಕ್ಷಣೆ ಮಾಡಿಕೊಳ್ಳಬೇಕು. ಈ ನೀತಿಗೆ ದ್ವೈಧೀಭಾವವೆಂದು ಹೆಸರು.

**ಯದಾ ಪರಬಲಾನಾಂ ತು ಗಮನೀಯತಮೋ ಭವೇತ್ ।**
**ತದಾ ತು ಸಂಶ್ರಯೇತ್ ಕ್ಷಿಪ್ರಂ ಧಾರ್ಮಿಕಂ ಬಲಿನಂ ನೃಪಮ್ ॥**

ಅಮಾತ್ಯಾದಿಗಳ ದೋಷದಿಂದ ತನ್ನ ಬಲವು ಶತ್ರುವನ್ನು ಎದುರಿಸಲಾರದೆ ಹಿಮ್ಮೆಟ್ಟುತ್ತಿದ್ದು, ಶತ್ರುಗಳು ಕೋಟೆಯಲ್ಲಿರುವ ತನ್ನ ಮೇಲೆ ಬಿದ್ದು ತನ್ನನ್ನು ಸೋಲಿಸಬಹುದೆಂದು ಗೊತ್ತಾದಾಗ, ರಾಜನು ಬಲಿಷ್ಠನೂ ಧಾರ್ಮಿಕನೂ ಆದ ಮತ್ತೊಬ್ಬ ರಾಜನ ಆಶ್ರಯವನ್ನು ಬೇಗನೇ ಹೊಂದಬೇಕು. ಇದು ಸಂಶ್ರಯ.

**ಸರ್ವೋಪಾಯೈಸ್ತಥಾ ಕುರ್ಯಾನ್ನೀತಿಜ್ಞಃ ಪೃಥಿವೀಪತಿಃ ।**
**ಯಥಾಸ್ಯಾಭ್ಯಧಿಕಾ ನ ಸ್ಯುರ್ಮಿತ್ರೋದಾಸೀನಶತ್ರವಃ ॥ ೬೫**

ತನಗೆ ಮಿತ್ರರು, ಶತ್ರುಗಳು, ಉದಾಸೀನರಾದವರು, ತನಗಿಂತ ಬಲಶಾಲಿಗಳಾಗದಹಾಗೆ ನೀತಿಜ್ಞನಾದ ರಾಜನು ಸಾಮದಾನಭೇದದಂಡೋಪಾಯಗಳಿಂದ ಪ್ರಯತ್ನಪಡಬೇಕು.

**ಆಯತ್ಯಾಂ ಗುಣದೋಷಜ್ಞಸ್ತದಾತ್ವೇ ಕ್ಷಿಪ್ರನಿಶ್ಚಯಃ ।**
**ಅತೀತೇ ಕಾರ್ಯಶೇಷಜ್ಞಃ ಶತ್ರುಭಿರ್ನಾಭಿಭೂಯತೇ ॥ ೬೬**

ಮುಂದೆ ಮಾಡುವ ಕಾರ್ಯಗಳ ಗುಣದೋಷಗಳನ್ನು ಮೊದಲೇ ಅರಿಯಬೇಕು. (ಹಾಗೆ ಮಾಡಿದರೆ ಗುಣಯುತವಾದ ಕಾರ್ಯಗಳನ್ನು ಮಾಡುವುದಕ್ಕೂ ದೋಷಯುತವಾದುವನ್ನು ಬಿಡುವುದಕ್ಕೂ ಸಾಧ್ಯವಾಗುವುದು.) ತತ್ಕಾಲದಲ್ಲಿ ಮಾಡುವ ಕಾರ್ಯಗಳ ವಿಷಯದಲ್ಲಿ ಏನು ಮಾಡಬೇಕು, ಹೇಗೆ ಮಾಡಬೇಕು ಎಂಬ ನಿರ್ಣಯವನ್ನು ಕ್ಷಿಪ್ರದಲ್ಲಿಯೇ ತೆಗೆದುಕೊಳ್ಳಬೇಕು. ಹಿಂದೆ ಮಾಡಿದ ಕಾರ್ಯಗಳಿಂದ ಸಂಭವಿಸಿದ ಫಲಾಫಲಗಳನ್ನು ಸಮಾಲೋಚನೆಮಾಡಿ, ಅವುಗಳಲ್ಲಿ ಉಳಿದುವನ್ನು ಹೇಗೆ ಮುಕ್ತಾಯಗೊಳಿಸಬೇಕೆಂದು ತಿಳಿದುಕೊಳ್ಳಬೇಕು. ಹೀಗೆ ಮಾಡಿದರೆ ಶತ್ರುಗಳಿಂದ ಸೋಲನ್ನು ಹೊಂದುವುದಿಲ್ಲ.

**ಶತ್ರುಸೇವಿನಿ ಮಿತ್ರೇ ಚ ಗೂಢೇ ಯುಕ್ತತರೋ ಭವೇತ್ ।**
**ಗತಪ್ರತ್ಯಾಗತೇ ಚೈವ ಸ ಹಿ ಕಷ್ಟತರೋ ರಿಪುಃ ॥ ೬೭**

ಮಿತ್ರನು ಗುಟ್ಟಾಗಿ ಸ್ನೇಹಮಾಡಿಕೊಂಡು ತನ್ನ ಶತ್ರುವಿನ ಹಿತವನ್ನು ಬಯಸುತ್ತಿದ್ದರೆ, ಅಂತಹ ಮಿತ್ರನ ವಿಷಯದಲ್ಲಿ ಜಾಗರೂಕನಾಗಿರಬೇಕು. ಹಾಗೆಯೇ ತನ್ನಲ್ಲಿದ್ದ ಅಮಾತ್ಯಾದಿ ಸೇವಕರು ತನ್ನ ವಿಷಯದಲ್ಲಿ ಬೇಸರ ಪಟ್ಟು, ಪ್ರತ್ಯಕ್ಷವಾಗಿ ಶತ್ರುವನ್ನು ಸೇರಿ, ಕೆಲವು ಕಾಲದಮೇಲೆ ಮತ್ತೆ ತನ್ನಲ್ಲಿಗೇ ಬಂದು ಸೇರಿಕೊಂಡರೆ, ಅವರ ವಿಷಯದಲ್ಲಿಯೂ ಜಾಗರೂಕ ನಾಗಿರಬೇಕು. ಅಂತಹವರು ಸಾಮಾನ್ಯ ಶತ್ರುಗಳಿಗಿಂತಲೂ ಹೆಚ್ಚು ತೊಂದರೆ ಕೊಡಬಲ್ಲರು.

**ಸಾಮ್ನಾ ದಾನೇನ ಭೇದೇನ ಸಮಸ್ತೈರಥವಾ ಪೃಥಕ್ ।**
**ವಿಜೇತುಂ ಪ್ರಯತೇತಾರೀನ್ನ ಯುದ್ಧೇನ ಕದಾಚನ ॥** ೭೮

ಸಾಮದಾನಭೇದೋಪಾಯಗಳನ್ನು ಒಟ್ಟಿಗೆಯಾಗಲಿ, ಬೇರೆಬೇರೆ ಯಾಗಲಿ ಪ್ರಯೋಗಮಾಡಿ ಶತ್ರುವನ್ನು ಗೆಲ್ಲಲು ಪ್ರಯತ್ನಮಾಡಬೇಕು; ಯಾವಾಗಲೂ ಯುದ್ಧದಿಂದಲ್ಲ.

**ಅನಿತ್ಯೋ ವಿಜಯೋ ಯಸ್ಮಾದ್ದೃಶ್ಯತೇ ಯುಧ್ಯಮಾನಯೋಃ ।**
**ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥** ೭೯

ಯುದ್ಧಮಾಡುವ ಉಭಯ ಸೈನ್ಯಗಳಲ್ಲಿ ಸಂಖ್ಯಾಬಲ, ಸಜ್ಜತೆ ಮೊದಲಾದ ಯಾವುದೇ ಒಂದು ನಿಯಮವನ್ನನುಸರಿಸಿ ನಿತ್ಯವಾಗಿ ಜಯವೂ ಆಗುವುದಿಲ್ಲ, ಸೋಲೂ ಆಗುವುದಿಲ್ಲ. ಹೀಗೆ ಯುದ್ಧದ ಫಲವು ಪೂರ್ವನಿಶ್ಚಿತವಲ್ಲವಾದುದರಿಂದ ಯುದ್ಧವನ್ನು ಬಿಟ್ಟುಬಿಡಬೇಕು.

(ಇದು ತಾನಾಗಿಯೇ ಶತ್ರುವಿನಮೇಲೆ ಬಿದ್ದು ಯುದ್ಧಮಾಡುವವರ ವಿಷಯ. ಶತ್ರುವೇ ತನ್ನ ಮೇಲೆ ಬಂದು ಬಿದ್ದಾಗ, ಸಾಮಾದಿ ಉಪಾಯ ಗಳು ಫಲಿಸದೆ ಹೋದರೆ, ಹಿಮ್ಮೆಟ್ಟದೆ ಯುದ್ಧಮಾಡಬೇಕು.)

**ಹಿರಣ್ಯಭೂಮಿಸಂಪ್ರಾಪ್ತ್ಯಾ ಪಾರ್ಥಿವೋ ನ ತಥೈಧತೇ ।**
**ಯಥಾಮಿತ್ರಂ ಧ್ರುವಂ ಲಬ್ಧ್ವಾ ಕೃಶಮಪ್ಯಾಯತಿಕ್ಷಮಮ್ ॥** ೭೦

ಧನ ಭೂಮಿಗಳನ್ನು ಸಂಪಾದಿಸಿ ಅಭಿವೃದ್ಧಿಹೊಂದುವುದಕ್ಕಿಂತ, ತತ್ಕಾಲದಲ್ಲಿ ಕೃಶನಾಗಿ ಕಂಡುಬಂದರೂ, ಮುಂದೆ ಸಮೃದ್ಧಿಸಂಪನ್ನನಾಗಬಲ್ಲ

ಸ್ಥಿರನಾದ ಮಿತ್ರನನ್ನು ಸಂಪಾದಿಸಿಕೊಳ್ಳುವುದರಿಂದ ರಾಜನು ಹೆಚ್ಚು ಅಭಿವೃದ್ಧಿಹೊಂದುವನು.

**ಆಪದರ್ಥಂ ಧನಂ ರಕ್ಷೇದ್ದಾರಾನ್ ರಕ್ಷೇದ್ಧನೈರಪಿ ।**
**ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥** ೭೧

ಮುಂದೆ ಬರುವ ಆಪತ್ತುಗಳನ್ನು ನಿವಾರಿಸಿಕೊಳ್ಳಲಿಕ್ಕಾಗಿ ಧನವನ್ನು ಕಾಪಾಡಿಕೊಳ್ಳಬೇಕು. ಅಗತ್ಯಬಿದ್ದಾಗ ಅಂತಹ ಧನವನ್ನು ಬಿಟ್ಟು ಕೊಟ್ಟಾದರೂ ಹೆಂಡತಿಯನ್ನು ಉಳಿಸಿಕೊಳ್ಳಬೇಕು. ಆವಶ್ಯಕವಾದರೆ ಆ ಧನ ಮತ್ತು ಹೆಂಡತಿಯರ ಪರಿತ್ಯಾಗವನ್ನಾದರೂ ಮಾಡಿ, ತನ್ನನ್ನು ತಾನು ಕಾಪಾಡಿಕೊಳ್ಳಬೇಕು.

**ಏವಂ ಸರ್ವಮಿದಂ ರಾಜಾ ಸಹ ಸಂಮಂತ್ರ್ಯ ಮಂತ್ರಿಭಿಃ ।**
**ವ್ಯಾಯಮ್ಯಾಪ್ಲುತ್ಯ ಮಧ್ಯಾಹ್ನೇ ಭೋಕ್ತುಮಂತಃಪುರಂ ವಿಶೇತ್ ॥**

ಈ ರೀತಿ ಎಲ್ಲ ರಾಜಕಾರ್ಯಗಳನ್ನೂ ಮಂತ್ರಿಗಳೊಡನೆ ಸಮಾಲೋಚನೆ ಮಾಡಿದಮೇಲೆ ಆಯುಧಾಭ್ಯಾಸಗಳಿಂದ ವ್ಯಾಯಾಮ ಮಾಡಿ, ಮಧ್ಯಾಹ್ನದಲ್ಲಿ ಸ್ನಾನಮಾಡಿ, ಭೋಜನಕ್ಕಾಗಿ ಅಂತಃಪುರವನ್ನು ಪ್ರವೇಶಿಸಬೇಕು.

**ತತ್ರಾತ್ಮಭೂತೈಃ ಕಾಲಜ್ಞೈರಹಾರ್ಯೈಃ ಪರಿಚಾರಿಕೈಃ ।**
**ಸುಪರೀಕ್ಷಿತಮನ್ನಾದ್ಯಮದ್ಯಾನ್ಮಂತ್ರೈರ್ವಿಷಾಪಹೈಃ ॥** ೭೩

ಅಂತಃಪುರದಲ್ಲಿ ತನ್ನ ಕಡೆಯವರೇ ಆಗಿರುವ, ಭೋಜನವೇಳೆಗಳನ್ನು ಚೆನ್ನಾಗಿ ಅರಿತು ಶತ್ರುಗಳ ಭೇದೋಪಾಯಗಳಿಗೆ ಒಳಗಾಗದ, ಆತ್ಮೀಯರಾದ ಅಡಿಗೆಯವರಿಂದ ಮಾಡಲ್ಪಟ್ಟ ಆಹಾರವನ್ನು ಪಶುಪಕ್ಷಿಗಳಿಗೆ ಹಾಕಿ ಪರೀಕ್ಷಿಸಿ, ವಿಷಪರಿಹಾರಕವಾದ ಮಂತ್ರಗಳನ್ನು ಜಪಿಸಿ, ಆಮೇಲೆ ಭೋಜನ ಮಾಡಬೇಕು.

(ಹೀಗೆಯೇ ಗೂಢಚಾರರನ್ನಿಟ್ಟು ಅರಮನೆಯೊಳಗಿನ ಸ್ತ್ರೀಯರು, ದಾಸದಾಸಿಯರು, ಎಲ್ಲರನ್ನೂ ಗೂಢವಾದ ಶಸ್ತ್ರಾಸ್ತ್ರಗಳೂ ವಿಷಲಿಪ್ತವಾದ ಆಭರಣಗಳೂ ಇವೆಯೇ ಎಂಬುವುದಕ್ಕಾಗಿ ಪರೀಕ್ಷಿಸುತ್ತಿರಬೇಕು.)

[ನ ಜಹ್ಯಾಚ್ಚ ತನುತ್ರಾಣಂ ರಕ್ಷೇದಾತ್ಮಾನಮಾತ್ಮನಾ |
ಚಾರಭೂಮಿಷ್ವಿವ ತಥಾನ್ಪಾಶಾಂಶ್ಚ ಪರಿವರ್ಜಯೇತ್ ||

"ತನ್ನ ಶರೀರವನ್ನು ಕಾಪಾಡುವ ಕವಚವನ್ನು ರಾಜನು ಯಾವಾಗಲೂ ಬಿಟ್ಟಿರಬಾರದು, ಜಾಗರೂಕನಾಗಿದ್ದು ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳಬೇಕು, ತನ್ನ ಚಾರರು ತೋರಿಸುವ ಸ್ಥಾನಗಳಲ್ಲಿ (ದಾಸಿಯರು, ಅಡುಗೆಯವರು ಮೊದಲಾದವರು ಕೆಲಸಮಾಡುವ ಪ್ರದೇಶಗಳಲ್ಲಿ) ಭೇದೋಪಾಯವನ್ನು ಅವಲಂಬಿಸಿ ಶತ್ರುಗಳಿಂದ ಹರಡಲ್ಪಟ್ಟಿರುವ ವಿಷಾದಿಪಾಶಗಳನ್ನು ಪರಿತ್ಯಜಿಸಬೇಕು." ಎಂದು ಭೀಷ್ಮನು ಯುಧಿಷ್ಠಿರನಿಗೆ ಉಪದೇಶಮಾಡಿದನು—ಶಾಂತಿಪರ್ವ]

**ಅಲಂಕೃತಶ್ಚ ಸಂಪಶ್ಯೇದಾಯುಧೀಯಂ ಪುನರ್ಜನಮ್ |**
**ವಾಹನಾನಿ ಚ ಸರ್ವಾಣಿ ಶಸ್ತ್ರಾಣ್ಯಾಭರಣಾನಿ ಚ ||** ೭೪

(ಭೋಜನಮಾಡಿ, ಅಂತಃಪುರದಲ್ಲಿ ಸ್ತ್ರೀಪುತ್ರಾದಿಗಳೊಡನೆ ಸುಖಸಲ್ಲಾಪಮಾಡುತ್ತಾ ವಿಶ್ರಾಂತಿಪಡೆದಮೇಲೆ) ರಾಜನು ಯೋಗ್ಯವಾದ ಉಡುಗೆತೊಡಿಗೆಗಳಿಂದ ಭೂಷಿತನಾಗಿ ತನ್ನ ಆಯುಧಪಾಣಿಗಳಾದ ಸೈನಿಕರು, ಅನೇಕ ಬಗೆಯ ಕರಿತುರಗಾದಿವಾಹನಗಳು, ನಾನಾ ಆಯುಧಗಳು, ಅಲಂಕಾರಗಳು ಇವನ್ನೆಲ್ಲ ಪರಿಶೀಲಿಸಬೇಕು.

**ಸಂಧ್ಯಾಂ ಚೋಪಾಸ್ಯ ಶೃಣುಯಾದಂತರ್ವೇಶ್ಮನಿ ಶಸ್ತ್ರಭೃತ್ |**
**ರಹಸ್ಯಾಖ್ಯಾಯಿನಾಂ ಚೈವ ಪ್ರಣಿಧೀನಾಂ ಚ ಚೇಷ್ಟಿತಮ್ ||** ೭೫

ಸಾಯಂಕಾಲದ ಸಂಧ್ಯಾವಂದನೆಯನ್ನು ಮುಗಿಸಿಕೊಂಡು, ಅರಮನೆಯ ಒಳಗೆ ಏಕಾಂತಸ್ಥಳದಲ್ಲಿ ಆಯುಧಗಳನ್ನು ಆತ್ಮರಕ್ಷಣೆಗಾಗಿ ಧರಿಸಿ, ಗುಟ್ಟಾಗಿ ಸುದ್ದಿಗಳನ್ನು ತಂದಿರುವ ಗೂಢಚಾರರಿಂದ ವೃತ್ತಾಂತವನ್ನು ಗ್ರಹಿಸಬೇಕು.

## VIII ಅಧ್ಯಾಯ

# ವ್ಯವಹಾರಗಳು

**ವ್ಯವಹಾರಾನ್ದಿದೃಕ್ಷುಸ್ತು ಬ್ರಾಹ್ಮಣೈಃ ಸಹ ಪಾರ್ಥಿವಃ |**
**ಮಂತ್ರಜ್ಞೈರ್ಮಂತ್ರಿಭಿಶ್ಚೈವ ವಿನೀತಃ ಪ್ರವಿಶೇತ್ಸಭಾಮ್ || ೧**

ಪ್ರಜೆಗಳಲ್ಲಿ ಹುಟ್ಟುವ ನಾನಾಬಗೆಯ ವಿವಾದಗಳ ವ್ಯವಹಾರವನ್ನು ಪರಿಶೀಲಿಸುವುದಕ್ಕಾಗಿ ರಾಜನು ಸತ್ಯವಾದಿಗಳಾದ ಬ್ರಾಹ್ಮಣರಿಂದಲೂ ಮಂತ್ರಜ್ಞರಾದ ಅಮಾತ್ಯರಿಂದಲೂ ಕೂಡಿ, ವಿನೀತನಾಗಿ ಸಭೆಯನ್ನು ಪ್ರವೇಶಮಾಡಬೇಕು.

(ನ್ಯಾಯವಿಮರ್ಶೆಗಾಗಿ ನಾನು ಭಗವಂತನ ಪ್ರತಿನಿಧಿಯಾಗಿ ಮಾತ್ರ ಇಲ್ಲಿಗೆ ಬಂದಿದ್ದೇನೆ ಎಂಬ ವಿನಯವಿಲ್ಲದೆ, ನನ್ನ ಮಹಿಮೆಯಿಂದಲೇ ಲೋಕದ ವ್ಯವಹಾರಗಳು ನಡೆಯುವುವು ಎಂಬ ಅಹಂಕಾರವನ್ನು ರಾಜನು ಪಡೆದಿದ್ದರೆ, ಅವನಿಗೆ ತಾಳ್ಮೆಯಿಲ್ಲದೆ, ವಾದಿಪ್ರತಿವಾದಿಗಳು ಹೇಳುವುದನ್ನು ಅವನು ಯಥಾವತ್ತಾಗಿ ಕೇಳದೆ, ತೀರ್ಪು ನ್ಯಾಯಸಮ್ಮತವಾಗದೆ ಹೋಗಬಹುದು.)

**ತತ್ರಾಸೀನಃ ಸ್ಥಿತೋ ವಾಪಿ ಪಾಣಿಮುದ್ಯಮ್ಯ ದಕ್ಷಿಣಮ್ |**
**ವಿನೀತವೇಷಾಭರಣಃ ಪಶ್ಯೇತ್ಕಾರ್ಯಾಣಿ ಕಾರ್ಯಿಣಾಮ್ || ೨**

**ಪ್ರತ್ಯಹಂ ದೇಶದೃಷ್ಟೈಶ್ಚ ಶಾಸ್ತ್ರದೃಷ್ಟೈಶ್ಚ ಹೇತುಭಿಃ |**
**ಅಷ್ಟಾದಶಸು ಮಾರ್ಗೇಷು ನಿಬದ್ಧಾನಿ ಪೃಥಕ್ ಪೃಥಕ್ || ೩**

ಸಭೆಯಲ್ಲಿ ರಾಜನು ಗರ್ವವನ್ನು ತೋರ್ಪಡಿಸುವ ವೇಷಭೂಷಣಗಳನ್ನು ಧರಿಸದೆ, ಕಾರ್ಯವು ಗುರುತರವಾದರೆ ಆಸನದಲ್ಲಿ ಕುಳಿತೋ, ಇಲ್ಲದಿದ್ದರೆ ನಿಂತುಕೊಂಡೋ ಬಲದ ತೋಳನ್ನು ಎತ್ತಿಹಿಡಿಯಬೇಕು. ಹದಿನೆಂಟು ಬಗೆಗಳಲ್ಲಿ ಹೇಳಲ್ಪಟ್ಟಿರುವ ವಾದಪ್ರತಿವಾದಿಗಳ ವ್ಯವಹಾರವನ್ನು ಪರಿಶೀಲಿಸಬೇಕು. ಅದಕ್ಕಾಗಿ ಶಾಸ್ತ್ರ, ದೇಶ, ಕಾಲ, ಕುಲಾಚಾರಗಳಿಂದಲೂ ಕಾರ್ಯವನ್ನು ವಿಚಾರಮಾಡಬೇಕು.

*

**ತೇಷಾಮಾದ್ಯಮೃಣಾದಾನಂ ನಿಕ್ಷೇಪೋಽಸ್ವಾಮಿವಿಕ್ರಯಃ ।**
**ಸಂಭೂಯ ಚ ಸಮುತ್ಥಾನಂ ದತ್ತಸ್ಯಾನಪಕರ್ಮ ಚ ॥** ೪
**ವೇತನಸ್ಯೈವ ಚಾದಾನಂ ಸಂವಿದಶ್ಚ ವ್ಯತಿಕ್ರಮಃ ।**
**ಕ್ರಯವಿಕ್ರಯಾನುಶಯೋ ವಿವಾದಃ ಸ್ವಾಮಿಪಾಲಯೋಃ ॥** ೫
**ಸೀಮಾವಿವಾದಧರ್ಮಶ್ಚ ಪಾರುಷ್ಯೇ ದಂಡವಾಚಕೇ ।**
**ಸ್ತೇಯಂ ಚ ಸಾಹಸಂ ಚೈವ ಸ್ತ್ರೀಸಂಗ್ರಹಣಮೇವ ಚ ॥** ೬
**ಸ್ತ್ರೀಪುಂಧರ್ಮೋ ವಿಭಾಗಶ್ಚ ದ್ಯೂತಮಾಹ್ವಯ ಏವ ಚ ।**
**ಪದಾನ್ಯಷ್ಟಾದಶೈತಾನಿ ವ್ಯವಹಾರಸ್ಥಿತಾವಿಹ ॥** ೭

(೧) ತೆಗೆದುಕೊಂಡ ಸಾಲವನ್ನು ಹಿಂದಕ್ಕೆ ಕೊಡದಿರುವುದು, (೨) ಒತ್ತೆಯಿಡುವುದು, (೩) ಹಕ್ಕಿಲ್ಲದವನು ಆಸ್ತಿಯನ್ನು ಮಾರುವುದು, (೪) ಒಟ್ಟುಗೂಡಿ ವ್ಯಾಪಾರಾದಿ ವ್ಯವಹಾರಗಳನ್ನು ಮಾಡುವುದು, (೫) ದಾನ ಕೊಟ್ಟ ಹಣ ಅಥವಾ ವಸ್ತುವನ್ನು ತನ್ನ ಮನಸ್ಸು ಬದಲಾಯಿಸಿ ಮತ್ತೆ ಕಿತ್ತುಕೊಳ್ಳುವುದು, (೬) ಕೆಲಸಮಾಡಿದವನಿಗೆ ವೇತನಕೊಡದಿರುವುದು, (೭) ಪರಸ್ಪರ ಮಾಡಿಕೊಂಡ ಒಪ್ಪಂದವನ್ನು ಒಬ್ಬನು ತಾನಾಗಿ ಮುರಿಯುವುದು, (೮) ಕ್ರಯವಿಕ್ರಯದ ವ್ಯಾಪಾರವಾದಮೇಲೆ ಪಶ್ಚಾತ್ತಾಪಪಟ್ಟು ಆ ವ್ಯವಹಾರವನ್ನು ಹಿಂದಿರುಗಿಸುವುದು, (೯) ಮಾಲಿಕ ಮತ್ತು ಪಶುಪಾಲಕ ಇವರ ಜಗಳ, (೧೦) ಗ್ರಾಮಗಳ ನಡುವಣ ಗಡಿಯ ಜಗಳ, (೧೧) ನೋಯಿಸುವಂತಹ ಬಿರುಸುಮಾತುಗಳು–ಹೊಡೆದಾಟಗಳು, (೧೨) ಕಳ್ಳತನ, (೧೩) ಬಲಪ್ರಯೋಗದಿಂದ (ದರೋಡೆ) ಧನಧಾನ್ಯಗಳನ್ನು ಅಪಹರಿಸುವುದು, (೧೪) ಸ್ತ್ರೀಯರೊಡನೆ ಅಕ್ರಮಸಂಪರ್ಕ, (೧೫) ಪತಿಪತ್ನಿಯರ ಧರ್ಮವ್ಯವಸ್ಥೆ, (೧೬) ಆಸ್ತಿಯ ವಿಭಾಗ, (೧೭) ದ್ಯೂತ, (೧೮) ಕೋಳಿ–ಟಗರುಕಾಳಗಗಳು (ಆಹ್ವಯ)—ಇವು ವ್ಯವಹಾರ ಹುಟ್ಟುವುದಕ್ಕೆ ಹದಿನೆಂಟು ಮಾರ್ಗಗಳು.

(ಇವುಗಳಲ್ಲಿ ವಿವಾದಮಾಡುವ ಜನರಿಗೆ ನ್ಯಾಯ ದೊರಕಿಸಿಕೊಡಲು ರಾಜನು ಪರಂಪರಾಗತವಾಗಿ ಬಂದ ಶಾಸ್ತ್ರನಿಯಮಗಳನ್ನು ಅನುಸರಿಸಿ ಕೆಲಸಮಾಡಬೇಕು.)

**ಯದಾ ಸ್ವಯಂ ನ ಕುರ್ಯಾತ್ತು ನೃಪತಿಃ ಕಾರ್ಯದರ್ಶನಮ್ ।**
**ತದಾ ನಿಯುಂಜ್ಯಾದ್ವಿದ್ವಾಂಸಂ ಬ್ರಾಹ್ಮಣಂ ಕಾರ್ಯದರ್ಶನೇ ॥ ೮**

ತನಗೆ ಬೇರೆ ಕೆಲಸವಿರುವುದರಿಂದಾಗಲಿ, ಕಾಯಿಲೆ ಮುಂತಾದ ಅನಿವಾರ್ಯ ತೊಂದರೆಗಳಿಂದಾಗಲಿ, ತಾನೇ ಕಾರ್ಯಗಳನ್ನು ನೋಡಿ ಕೊಳ್ಳಲು ಸಾಧ್ಯವಿಲ್ಲದಿದ್ದರೆ, ರಾಜನು ಅದಕ್ಕಾಗಿ ಶಾಸ್ತ್ರಜ್ಞನಾದ ಬ್ರಾಹ್ಮಣ ನನ್ನು ನಿಯಮಿಸಬೇಕು.

**ಸೋಽಸ್ಯ ಕಾರ್ಯಾಣಿ ಸಂಪಶ್ಯೇತ್ಸಭ್ಯೈರೇವ ತ್ರಿಭಿರ್ವೃತಃ ।**
**ಸಭಾಮೇವ ಪ್ರವಿಶ್ಯಾಗ್ರ್ಯಾಮಾಸೀನಃ ಸ್ಥಿತ ಏವ ವಾ ॥ ೯**

ಆ ಬ್ರಾಹ್ಮಣನು ಮೂರು ಜನ ಸಭ್ಯ(ಸದಸ್ಯ) ರೊಡನೆ ಉತ್ತಮವಾದ ಸಭಾಮಂದಿರವನ್ನು ಪ್ರವೇಶಿಸಿ, ಕುಳಿತಾಗಲಿ ನಿಂತಾಗಲಿ ರಾಜಕಾರ್ಯ ಗಳನ್ನು ಪರಾಮರ್ಶಿಸಬೇಕು.

**ಯಸ್ಮಿನ್ದೇಶೇ ನಿಷೀದಂತಿ ವಿಪ್ರಾ ವೇದವಿದಸ್ತ್ರಯಃ ।**
**ರಾಜ್ಞಶ್ಚಾಧಿಕೃತೋ ವಿದ್ವಾನ್ ಬ್ರಾಹ್ಮಣಸ್ತಾಂ ಸಭಾಂ ವಿದುಃ ॥೧೦**

ಯಾವ ಪ್ರದೇಶದಲ್ಲಿ ಋಗ್ಯಜುಃಸಾಮವೇದವಿದ್ಯಾಪಾರಂಗತರಾದ ಮೂವರು ಬ್ರಾಹ್ಮಣರು ಕೂಡುತ್ತಾರೆಯೋ ಮತ್ತು ರಾಜನಿಂದ ಅಧಿಕಾರ ವನ್ನು ಪಡೆದ ವಿದ್ವಾಂಸನಾದ ಬ್ರಾಹ್ಮಣನು ಕುಳಿತೋ ನಿಂತೋ ಉಪಸ್ಥಿತ ನಾಗಿರುವನೋ, ಆ ಪ್ರದೇಶಕ್ಕೆ ಸಭೆ ಎಂದು ಹೆಸರು.

**ಯತ್ರ ಧರ್ಮೋ ಹ್ಯಧರ್ಮೇಣ ಸತ್ಯಂ ಯತ್ರಾನೃತೇನ ಚ ।**
**ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥ ೧೧**

ಯಾವ ಸಭೆಯಲ್ಲಿ ವಾದಿ-ಪ್ರತಿವಾದಿಗಳ ಸಾಕ್ಷಿಗಳಿಂದ ಸಭಾಸದರ ಇದಿರಿನಲ್ಲಿಯೇ ಧರ್ಮವು ಅಧರ್ಮದಿಂದಲೂ, ಸತ್ಯವು ಸುಳ್ಳಿನಿಂದಲೂ ನಾಶಪಡಿಸಲ್ಪಡುತ್ತದೆಯೋ (ಆ ಸಭಾಸದರಿಗೆ ಅನ್ಯಾಯವನ್ನು ಪ್ರತ್ಯಕ್ಷವಾಗಿ ನೋಡಿಯೂ ತಡೆಯಲೂ ಸಾಧ್ಯವಿಲ್ಲವೋ), ಅಲ್ಲಿ ಸಭಾಸದರಾದವರು ಪಾಪಹತರಾಗುವರು.

**ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।**
**ತಸ್ಮಾದ್ಧರ್ಮೋ ನ ಹಂತವ್ಯೋ ಮಾ ನೋ ಧರ್ಮೋ**
**ಹತೋಽವಧೀತ್ ॥ ೧೨**

ಧರ್ಮವನ್ನು ನಾಶಮಾಡಿದರೆ, ಅದು ಇಷ್ಟಾನಿಷ್ಟಗಳಿಂದ ಕೂಡಿದುದಾಗಿ ನಾಶಮಾಡುತ್ತದೆ; ಅದು ರಕ್ಷಿತವಾದರೆ ನಮ್ಮನ್ನು ಕಾಪಾಡುತ್ತದೆ. ಆದುದರಿಂದ ಧರ್ಮವನ್ನು ಬಿಡಬಾರದು; ಅದು ನಷ್ಟವಾಗಿ ನಮ್ಮನ್ನು ನಾಶಮಾಡದಿರಲಿ.

**ಪಾದೋಽಧರ್ಮಸ್ಯ ಕರ್ತಾರಂ ಪಾದಃ ಸಾಕ್ಷಿಣಮೃಚ್ಛತಿ ।**
**ಪಾದಃ ಸಭಾಸದಃ ಸರ್ವಾನ್ ಪಾದೋ ರಾಜಾನಮೃಚ್ಛತಿ ॥ ೧೩**

ವ್ಯವಹಾರದಲ್ಲಿ ಅಧರ್ಮಸ್ಥಾಪನೆಯಾದರೆ ಅದರಿಂದ ಬರುವ ಪಾಪದ ಕಾಲುಭಾಗವು ಅಧರ್ಮವನ್ನು ಮಾಡಿದ ವಾದಿ ಅಥವಾ ಪ್ರತಿವಾದಿಗೂ, ಕಾಲುಭಾಗವು ಅಧರ್ಮಸಾಧನೆಗೆ ಸಹಾಯಕರಾದ ಸಾಕ್ಷಿಗಳಿಗೂ, ಕಾಲುಭಾಗವು ಆ ಅಧರ್ಮಸ್ಥಾಪನೆಯನ್ನು ತಡೆಯಲಾಗದ ಎಲ್ಲ ಸಭಾಸದರಿಗೂ, ಉಳಿದ ಕಾಲುಭಾಗವು ಸಭಾಧ್ಯಕ್ಷನಾದ ರಾಜನಿಗೂ ಸೇರುವುದು.

**ಧರ್ಮಾಸನಮಧಿಷ್ಠಾಯ ಸಂವೀತಾಂಗಃ ಸಮಾಹಿತಃ ।**
**ಪ್ರಣಮ್ಯ ಲೋಕಪಾಲೇಭ್ಯಃ ಕಾರ್ಯದರ್ಶನಮಾರಭೇತ್ ॥ ೧೪**

ಧರ್ಮಾಸನದಲ್ಲಿ ಕುಳಿತು, ವಸ್ತ್ರದಿಂದ ದೇಹವನ್ನು ಮುಚ್ಚಿಕೊಂಡು, ಸಮಾಧಾನಚಿತ್ತನಾಗಿ, ಇಂದ್ರಾದಿ ಲೋಕಪಾಲಕರನ್ನು ನಮಸ್ಕರಿಸಿ, ರಾಜನು ವಿಚಾರಣೆಯ ಕಾರ್ಯವನ್ನು ಆರಂಭಿಸಬೇಕು.

**ಬಾಹ್ಯೈರ್ವಿಭಾವಯೇಲ್ಲಿಂಗೈರ್ಭಾವಮಂತರ್ಗತಂ ನೃಣಾಮ್ ।**
**ಸ್ವರವರ್ಣೇಂಗಿತಾಕಾರೈಶ್ಚಕ್ಷುಷಾ ಚೇಷ್ಟಿತೇನ ಚ ॥ ೧೫**

ವಾದಿ, ಪ್ರತಿವಾದಿ, ಸಾಕ್ಷಿಗಳ ಅಂತರಂಗಭಾವಗಳನ್ನು ಅವರ ಧ್ವನಿ, ಮಾತುಗಳು, ಸಂಜ್ಞೆಗಳು, ಆಕಾರವಿಕಾರಗಳು, ಕಣ್ಣುಗಳ ಚಲನ ಮೊದಲಾದ ಬಾಹ್ಯವ್ಯಾಪಾರಗಳಿಂದ ಊಹಿಸಬೇಕು.

**ಬಾಲದಾಯಾದಿಕಂ ರಿಕ್ಥಂ ತಾವದ್ರಾಜಾನುಪಾಲಯೇತ್ ।**
**ಯಾವತ್ಸ ಸ್ಯಾತ್ಸಮಾವೃತ್ತೋ ಯಾವಚ್ಚಾತೀತಶೈಶವಃ ॥ ೧೬**

(ತಂದೆ ಇಲ್ಲದ) ಚಿಕ್ಕ ಹುಡುಗನ ಪಿತ್ರಾರ್ಜಿತ ಸ್ವತ್ತನ್ನು ದಾಯಾದಿಗಳು ಅಪಹರಿಸದಂತೆ, ತಾನೇ ರಕ್ಷಕನಾಗಿ ನಿಂತು, ಹುಡುಗನು ಶಕ್ತನಾಗುವವರೆಗೆ, ಅಂದರೆ ಬಾಲ್ಯಕಳೆಯುವವರೆಗೆ ರಾಜನು ಅವನ ಆಸ್ತಿಯನ್ನು ಕಾಪಾಡಬೇಕು.

('ಬಾಲ ಆಷೋಡಶಾದ್ವರ್ಷಾತ್' ಎಂಬ ನಾರದವಚನದಂತೆ ಹುಡುಗನಿಗೆ ಹದಿನಾರು ವರ್ಷಗಳಾಗುವವರೆಗೆ ರಾಜನು ಪೋಷಕನಾಗವನು )

**ವಶಾಪುತ್ರಾಸು ಚೈವಂ ಸ್ಯಾದ್ರಕ್ಷಣಂ ನಿಷ್ಕುಲಾಸು ಚ ।**
**ಪತಿವ್ರತಾಸು ಚ ಸ್ತ್ರೀಷು ವಿಧವಾಸ್ವಾತುರಾಸು ಚ ॥ ೧೭**

ಗಂಡಂದಿರು ಪುನಃ ಮದುವೆಯಾಗಿ ಹೆಂಡತಿಯರ ಜೀವನಕ್ಕೆ ಆಸ್ತಿಯನ್ನು ಬಿಟ್ಟಿದ್ದರೆ ಅಂತಹ ಬಂಜೆಯರು, ಗಂಡಂದಿರು ಬಹುಕಾಲ ಪರದೇಶಕ್ಕೆ ಹೋಗಿಬಿಟ್ಟು ಅನಾಥರಾದ ಮಕ್ಕಳಿಲ್ಲದ ಹೆಂಗಸರು, ವಂಶಕ್ಕೇ ಸಂತಾನವಿಲ್ಲದ ಹೆಂಗಸರು, ಪತಿವ್ರತೆಯರು, ವಿಧವೆಯರು, ರೋಗಿಣಿಯರು ಇವರ ಆಸ್ತಿಯನ್ನು ರಾಜನು ಬಾಲರ ಆಸ್ತಿಯಂತೆಯೇ ನೋಡಿಕೊಳ್ಳಬೇಕು.

**ಜೀವಂತೀನಾಂ ತು ತಾಸಾಂ ಯೇ ತದ್ಧರೇಯುಃ ಸ್ವಬಾಂಧವಾಃ ।**
**ತಾನ್ ಶಿಷ್ಯಾಚ್ಚೌರದಂಡೇನ ಧಾರ್ಮಿಕಃ ಪೃಥಿವೀಪತಿಃ ॥ ೧೮**

"ಅಸಹಾಯಕರಾದ ಅಂಥ ಸ್ತ್ರೀಯರ ಧನವನ್ನು ನಾವು ನೋಡಿಕೊಳ್ಳುತ್ತೇವೆ; ನಾವೇ ಅವರ ಉತ್ತರಾಧಿಕಾರಿಗಳಲ್ಲವೆ?" ಎಂದು ಹೇಳುತ್ತಾ ಬಂಧುಗಳು ಆಸ್ತಿಯನ್ನು ಅಪಹರಿಸಿದರೆ, ಕಳ್ಳರನ್ನು ಶಿಕ್ಷಿಸುವಂತೆ ಅವರನ್ನು ದಂಡಿಸಬೇಕು.

**ಪ್ರಣಷ್ಟಸ್ವಾಮಿಕಂ ರಿಕ್ಥಂ ರಾಜಾ ತ್ರ್ಯಬ್ದಂ ನಿಧಾಪಯೇತ್ ।**
**ಅರ್ವಾಕ್ ತ್ರ್ಯಬ್ದಾದ್ಧರೇತ್ ಸ್ವಾಮೀ ಪರೇಣ ನೃಪತಿರ್ಹರೇತ್ ॥**

ಸ್ವತ್ತಿನ ಯಜಮಾನನು ಪತ್ತೆಯಿಲ್ಲದೆ ಹೊರಟುಹೋದಾಗ ರಾಜನು ಡಂಗುರ ಹೊಡೆಸಿ, ಜನಗಳಿಗೆ ಯಜಮಾನನು ಪತ್ತೆಯಾಗದಿರುವುದನ್ನು ತಿಳಿಸಿ, ಮೂರು ವರ್ಷಗಳವರೆಗೆ ಆ ನಿಧಿಯನ್ನು ತನ್ನಲ್ಲಿಟ್ಟುಕೊಂಡು ಕಾಪಾಡಬೇಕು. ಆ ಕಾಲದೊಳಗೆ ಬಂದರೆ, ಸ್ವತ್ತಿನ ಒಡೆಯನು ಅದನ್ನು

ಪಡೆಯಬಹುದು. ಅವನು ಮೂರು ವರ್ಷವಾದರೂ ಬಾರದಿದ್ದರೆ ರಾಜನು ಅದನ್ನು ತಾನೇ ಉಪಯೋಗಿಸಿಕೊಳ್ಳಬಹುದು.

**ಮಮೇದಮಿತಿ ಯೋ ಬ್ರೂಯಾತ್ಸೋಽನುಯೋಜ್ಯೋ ಯಥಾವಿಧಿ**
**ಸಂವಾದ್ಯ ರೂಪಸಂಖ್ಯಾದೀನ್ ಸ್ವಾಮೀ ತದ್ದ್ರವ್ಯಮರ್ಹತಿ ॥ ೨೦**

ಯಾವನಾದರೂ ಬಂದು, "ಇದು ನನ್ನ ಧನ" ಎಂದು ಹೇಳಿದರೆ, ಅವನನ್ನು ಧನದ ಸ್ವರೂಪವೇನು (ನಗದು, ಒಡವೆ, ಇತ್ಯಾದಿ), ಮೊತ್ತವೇನು, ಎಂದು ಕೇಳಬೇಕು. ಸರಿಯಾದ ಉತ್ತರಕೊಟ್ಟರೆ ಅವನು ಅದನ್ನು ಪಡೆಯಬಹುದು. (ಹಾಗಿಲ್ಲದಿದ್ದರೆ ಅವನು ಅದಕ್ಕೆ ಸಮನಾದ ಧನವನ್ನು ದಂಡವಾಗಿ ಕೊಡಬೇಕು.)

**ಯಂ ತು ಪಶ್ಯೇನ್ನಿಧಿಂ ರಾಜಾ ಪುರಾಣಂ ನಿಹಿತಂ ಕ್ಷಿತೌ ।**
**ತಸ್ಮಾದ್ದ್ವಿಜೇಭ್ಯೋ ದತ್ವಾರ್ಧಮರ್ಧಂ ಕೋಶೇ ಪ್ರವೇಶಯೇತ್॥**

ಪೂರ್ವಕಾಲದಲ್ಲಿ ಭೂಮಿಯಲ್ಲಿ ಯಾರೋ ಅಜ್ಞಾತರು ಹುದುಗಿಟ್ಟಿದ್ದ ನಿಧಿಯನ್ನು ರಾಜನು ಕಂಡರೆ, ಅದರ ಅರ್ಧ ಭಾಗವನ್ನು ಬ್ರಾಹ್ಮಣರಿಗೆ ಹಂಚಿ, ಉಳಿದ ಅರ್ಧವನ್ನು ಬೊಕ್ಕಸಕ್ಕೆ ಸೇರಿಸಿಕೊಳ್ಳಬೇಕು.

**ನಿಧೀನಾಂ ತು ಪುರಾಣಾನಾಂ ಧಾತೂನಾಮೇವ ಚ ಕ್ಷಿತೌ ।**
**ಅರ್ಧಭಾಗ್ರಕ್ಷಣಾದ್ರಾಜಾ ಭೂಮೇರಧಿಪತಿರ್ಹಿ ಸಃ ॥ ೨೨**

ತಾನು ಭೂಮಿಯ ಪೂರ್ಣ ಒಡೆಯನೂ ಎಲ್ಲರ ರಕ್ಷಕನೂ ಆದುದರಿಂದ ರಾಜನು ಭೂಗತವಾದ ಪುರಾತನ ನಿಧಿಗಳು ಮತ್ತು ಸುವರ್ಣಾದಿ ಧಾತುಗಳ ಉತ್ಪತ್ತಿಸ್ಥಾನಗಳಿಂದ ಅರ್ಧಭಾಗವನ್ನು ತೆಗೆದುಕೊಳ್ಳಬಹುದು.

**ಯೈರ್ಯೈರುಪಾಯೈರರ್ಥಂ ಸ್ವಂ ಪ್ರಾಪ್ನುಯಾದುತ್ತಮರ್ಣಿಕಃ ।**
**ತೈಸ್ತೈರುಪಾಯೈಃ ಸಂಗೃಹ್ಯ ದಾಪಯೇದಧಮರ್ಣಿಕಮ್ ॥ ೨೩**

**ಧರ್ಮೇಣ ವ್ಯವಹಾರೇಣ ಛಲೇನಾಚರಿತೇನ ಚ ।**
**ಪ್ರಯುಕ್ತಂ ಸಾಧಯೇದರ್ಥಂ ಪಂಚಮೇನ ಬಲೇನ ಚ ॥ ೨೪**

ಸಾಲ ತೆಗೆದುಕೊಂಡವನು ಹಣವನ್ನು ತೀರಿಸದಿದ್ದರೆ, ಯಾವ ಯಾವ ಉಪಾಯಗಳಿಂದ ಹಣಕೊಟ್ಟವನು ತನ್ನ ಹಣವನ್ನು ಮತ್ತೆ ಪಡೆಯು

ಬಹುದೋ, ಅಂತಹವುಗಳನ್ನು ಪ್ರಯೋಗಮಾಡಿ ಹಣವನ್ನು ಗಳಿಸಿ, ಸಾಲಕೊಟ್ಟವನಿಗೆ ಕೊಡಿಸಬೇಕು. ಇದಕ್ಕೆ ಧರ್ಮ, ವ್ಯವಹಾರ, ಛಲ, ಆಚರಿತ, ಬಲಪ್ರಯೋಗ ಎಂಬ ಐದು ಉಪಾಯುಗಳಿವೆ. ಹಣ ತೆಗೆದು ಕೊಂಡವನ ನೆಂಟರು, ಇಷ್ಟರು, ಆಪ್ತರಿಂದ ಸಾಮದ ರೀತಿಯಲ್ಲಿ ಹೇಳಿಸಿ ಅವನನ್ನು ಒತ್ತಾಯಪಡಿಸಿ ಹಣವನ್ನು ತರಿಸಿಕೊಳ್ಳುವುದು ಧರ್ಮ. ತೆಗೆದು ಕೊಂಡ ಹಣ ಖರ್ಚಾಗಿ, ಅದನ್ನು ಹಿಂದಿರುಗಿ ಕೊಡಲು ಸಾಮರ್ಥ್ಯವಿಲ್ಲದವ ನಿಗೆ ಸಂಪಾದನೆಗಾಗಿ ಉದ್ಯೋಗ ಅಥವಾ ಹಣ ಕೊಟ್ಟು, ವ್ಯಾಪಾರ ಇವುಗಳಿಗೆ ಸೌಕರ್ಯವನ್ನು ಮಾಡಿಕೊಟ್ಟು, ಕಾಲಾಂತರದಲ್ಲಿ ಸಂಪಾದನೆ ಯಾದಮೇಲೆ ಅವನಿಂದ ಹಣಪಡೆಯುವುದು ವ್ಯವಹಾರ. ಹಣ ತೆಗೆದು ಕೊಂಡವನಿಂದಲೇ ನೆಪಮಾಡಿ ಪರರಿಗೆಂದು ಸಾಲ ತೆಗೆದುಕೊಂಡು, ಆಮೇಲೆ ಅದನ್ನು ಅವನು ಕೊಡಬೇಕಾದ ಹಣಕ್ಕೆ ಲೆಕ್ಕತೋರಿಸುವುದೂ, ಮತ್ತೊಬ್ಬರಿಂದ ಅವನಿಗೆ ಬರಬೇಕಾಗಿರವ ಹಣವನ್ನು ತಾವೇ ವಸೂಲು ಮಾಡಿಕೊಂಡು ಅವನ ಲೆಕ್ಕ ಬಗೆಹರಿಸಿಕೊಳ್ಳುವುದೂ ಛಲ (ಮೋಸ). ಅವನ ಹೆಂಡತಿ ಮಕ್ಕಳು, ದನಕರುಗಳನ್ನು ಹಿಡಿದಿಟ್ಟು, ಅಥವಾ ಅವನ ಬಾಗಿಲಲ್ಲಿ ಉಪವಾಸವಿದ್ದು, ಹಣ ವಸೂಲು ಮಾಡುವುದು ಆಚರಿತ. ಸಾಲಗಾರನನ್ನು ಹಿಡಿದು ಬಂಧನಕ್ಕೆ ಒಳಪಡಿಸಿ, ಹೊಡೆದು, ಬಡಿದು, ಹಿಂಸಿಸಿ, ಅವನಿಂದ ಬಾಕಿ ಹಣವನ್ನು ವಸೂಲುಮಾಡುವುದು ಬಲಪ್ರಯೋಗ. (ರಾಜನು ಸಾಲಗಾರನಿಂದ ನ್ಯಾಯವಾಗಿ ಬರಬೇಕಾದ ಹಣವನ್ನು ಈ ಉಪಾಯುಗಳಿಂದ ಸಾಲಕೊಟ್ಟವನಿಗೆ ವಸೂಲುಮಾಡಿಸಿಕೊಡಬೇಕು.)

**ಯಃ ಸ್ವಯಂ ಸಾಧಯೇದರ್ಥಮುತ್ತಮರ್ಣೋಽಧಮರ್ಣಿಕಾತ್ ।**
**ನ ಸ ರಾಜ್ಞಾಽಭಿಯೋಕ್ತವ್ಯಃ ಸ್ವಕಂ ಸಂಸಾಧಯನ್ ಧನಮ್ ॥೨೫**

ತನಗೆ ನ್ಯಾಯವಾಗಿ ಬರಬೇಕಾದ ಹಣವನ್ನು, ಸಾಲಕೊಟ್ಟವನು ಈ ಉಪಾಯುಗಳಿಂದ ತಾನೇ ವಸೂಲುಮಾಡಿಕೊಂಡರೆ, ರಾಜನು ಅವನನ್ನು ತಡೆಯಬಾರದು.

**ಸಾಕ್ಷಿಣಃ ಸಂತಿ ಮೇತ್ಯುಕ್ತ್ವಾ ದಿಶೇತ್ಯುಕ್ತೋ ದಿಶೇನ್ನ ಯಃ ।**
**ಧರ್ಮಸ್ಥಃ ಕಾರಣೈರೇತೈರ್ಹೀನಂ ತಮಪಿ ನಿರ್ದಿಶೇತ್ ॥ ೨೬**

ವ್ಯವಹಾರದಲ್ಲಿ "ನನಗೆ ಸಾಕ್ಷಿಗಳಿದ್ದಾರೆ" ಎಂದು ಹೇಳಿದವನು, "ಸಾಕ್ಷಿಗಳನ್ನು ತೋರಿಸು" ಎಂದಾಗ, ಹಾಗೆ ತೋರಿಸಲಾಗದಿದ್ದರೆ, ನ್ಯಾಯಾಧೀಶನು ಅವನನ್ನು ವ್ಯವಹಾರದಲ್ಲಿ ಪರಾಜಿತನೆಂದು ಘೋಷಿಸಬೇಕು.

**ಗೃಹಿಣಃ ಪುತ್ರಿಣೋ ಮೌಲಾಃ ಕ್ಷತ್ರವಿಟ್ಶೂದ್ರಯೋನಯಃ ।**
**ಅರ್ಥ್ಯುಕ್ತಾಃ ಸಾಕ್ಷ್ಯಮರ್ಹಂತಿ ನ ಯೇ ಕೇಚಿದನಾಪದಿ ॥ ೨೭**

ಹೆಂಡತಿ ಮಕ್ಕಳುಳ್ಳ ಸಂಸಾರವಂದಿಗರೂ, ಅದೇ ಸ್ಥಳದ ನಿವಾಸಿಗಳೂ ಆದ ಕ್ಷತ್ರಿಯ, ವೈಶ್ಯ, ಶೂದ್ರವರ್ಣದವರು ಸಾಮಾನ್ಯವಾಗಿ ವಾದಿಗೆ ಬೇಕಾದವರು ಋಣಾದಿ ವ್ಯವಹಾರಗಳಲ್ಲಿ ಸಾಕ್ಷಿಗಳಾಗಬಹುದು. ಆಪತ್ಕಾಲ ವಿರದಿದ್ದಾಗ ಯಾರು ಯಾರನ್ನೋ ಸಾಕ್ಷಿಗಳಾಗಿ ಭಾವಿಸಬಾರದು.

**ಸಾಹಸೇಷು ಚ ಸರ್ವೇಷು ಸ್ತೇಯಸಂಗ್ರಹಣೇಷು ಚ ।**
**ವಾಗ್ದಂಡಯೋಶ್ಚ ಪಾರುಷ್ಯೇ ನ ಪರೀಕ್ಷೇತ ಸಾಕ್ಷಿಣಃ ॥ ೨೮**

ದರೋಡೆ, ಕಳ್ಳತನ, ಹೆಂಗಸರ ಮಾನಾಪಹರಣ, ಬೈದಾಟ ಹೊಡೆದಾಟಗಳೆಂಬ ವಿಶೇಷ ಪರಿಸ್ಥಿತಿಯಲ್ಲಿ ಹೀಗೆ ಸಾಕ್ಷಿಗಳ ಕುಲಗೋತ್ರ-ಸ್ಥಿತಿಗತಿಗಳನ್ನು ಪರೀಕ್ಷಿಸದೆ, ಆಯಾ ದೇಶಕಾಲಗಳಲ್ಲಿ ಪ್ರತ್ಯಕ್ಷವಾಗಿ ಉಪಸ್ಥಿತರಾಗಿದ್ದವರನ್ನು ಸಾಕ್ಷ್ಯ ಹೇಳಲು ಕರೆಯಬಹುದು.

["ಸರ್ವಃ ಸಾಕ್ಷೀ ಸಂಗ್ರಹಣೇ ಚೌರ್ಯಪಾರುಷ್ಯಸಾಹಸೇ"

(ಹೆಂಗಸರ ಮಾನಾಪಹರಣ, ಕಳ್ಳತನ, ಬೈದಾಟ ಹೊಡೆದಾಟಗಳ ಸಂದರ್ಭದಲ್ಲಿ ಯಾರಾದರೂ ಸಾಕ್ಷಿಯಾಗಬಹುದು) ಎಂದು ಯಾಜ್ಞವಲ್ಕ್ಯನ ಮತ.]

**ಬಹುತ್ವಂ ಪರಿಗೃಹ್ಣೀಯಾತ್ಸಾಕ್ಷಿದ್ವೈಧೇ ನರಾಧಿಪಃ ।**
**ಸಮೇಷು ತು ಗುಣೋತ್ಕೃಷ್ಟಾನ್ಗುಣಿದ್ವೈಧೇ ದ್ವಿಜೋತ್ತಮಾನ್ ॥**

ಸಾಕ್ಷಿಗಳು ಪರಸ್ಪರ ವಿರೋಧಾರ್ಥವನ್ನು ಪ್ರತಿಪಾದಿಸಿದರೆ, ಬಹುಮತವನ್ನು ರಾಜನು ಸ್ವೀಕರಿಸಬೇಕು. ಸಾಕ್ಷ್ಯವು ಸಮವಾಗಿದ್ದರೆ, ಯಾವ ಕಡೆಯ ಸಾಕ್ಷಿಗಳು ಗುಣಾಧಿಕರೋ ಅದನ್ನು ಒಪ್ಪಬೇಕು. ಗುಣವಂತರು ಭಿನ್ನಾಭಿಪ್ರಾಯಗಳನ್ನು ಹೊಂದಿದ್ದಾಗ, ವಿದ್ಯಾವಿನಯಾದಿ ಉತ್ಕೃಷ್ಟಗುಣಗಳುಳ್ಳ ಬ್ರಾಹ್ಮಣರನ್ನು ಪ್ರಮಾಣವಾಗಿ ಸ್ವೀಕರಿಸಬೇಕು.

**ಸಭಾಂತಃ ಸಾಕ್ಷಿಣಃ ಪ್ರಾಪ್ತಾನರ್ಥಿಪ್ರತ್ಯರ್ಥಿಸಂನಿಧೌ ।**
**ಪ್ರಾಡ್ವಿವಾಕೋಽನುಯುಂಜೀತ ವಿಧಿನಾ ಽನೇನ ಸಾಂತ್ವಯನ್ ॥ ೩೦**
**ಯದ್ದ್ವಯೋರನಯೋರ್ವೇತ್ಥ ಕಾರ್ಯೇಽಸ್ಮಿಂಶ್ಚೇಷ್ಟಿತಂ ಮಿಥಃ ।**
**ತದ್ಬ್ರೂತ ಸರ್ವಂ ಸತ್ಯೇನ ಯುಷ್ಮಾಕಂ ಹ್ಯತ್ರ ಸಾಕ್ಷಿತಾ ॥ ೩೧**

ಸಭೆಯಲ್ಲಿ ವಾದಿಪ್ರತಿವಾದಿಗಳ ಸಮ್ಮುಖದಲ್ಲಿ ಅವರಿಗೆ ಸಾಕ್ಷಿಗಳಾಗಿ ಬಂದವರನ್ನು ಕುರಿತು, ನ್ಯಾಯಾಧೀಶನು ಸಮಾಧಾನರೀತಿಯಿಂದ ಹೀಗೆ ಹೇಳಬೇಕು: "ಈ ಇಬ್ಬರ ವ್ಯವಹಾರದಲ್ಲಿ ಇವರ ಪರಸ್ಪರ ವ್ಯಾಪಾರ ವೇನೆಂಬುದನ್ನು ಪೂರ್ಣವಾಗಿಯೂ ಸತ್ಯವಾಗಿಯೂ ಹೇಳಿ. ನಿಮ್ಮದೇ ಇದರಲ್ಲಿ ಸಾಕ್ಷ್ಯವಿರುವುದು."

**ಏಕೋಽಹಮಸ್ಮೀತ್ಯಾತ್ಮಾನಂ ಯತ್ತ್ವಂ ಕಲ್ಯಾಣ ಮನ್ಯಸೇ ।**
**ನಿತ್ಯಂ ಸ್ಥಿತಸ್ತೇ ಹೃದ್ಯೇಷ ಪುಣ್ಯಪಾಪೇಕ್ಷಿತಾ ಮುನಿಃ ॥ ೩೨**

"ಎಲೈ ಭದ್ರನೇ, ನಾನೊಬ್ಬನೇ ಇರುವೆನು ಎಂದು ತಿಳಿದುಕೊಳ್ಳುತ್ತೀಯಲ್ಲ! ಆದರೆ ನೀನು ಮಾಡುವ ಪಾಪಪುಣ್ಯಗಳಿಗೆ ಮೌನವಾಗಿ ಸಾಕ್ಷಿಯಾಗಿ ಸರ್ವಜ್ಞನಾದ ಪರಮಾತ್ಮನು ಯಾವಾಗಲೂ ನಿನ್ನ ಹೃದಯ ದಲ್ಲಿಯೇ ಇರುತ್ತಾನೆ"

**ಯಸ್ಯ ದೃಶ್ಯೇತ ಸಪ್ತಾಹಾದುಕ್ತವಾಕ್ಯಸ್ಯ ಸಾಕ್ಷಿಣಃ ।**
**ರೋಗೋಽಗ್ನಿರ್ಜ್ಞಾತಿಮರಣಮೃಣಂ ದಾಪ್ಯೋ ದಮಂ ಚ ಸಃ ॥ ೩೩**

ಸಾಕ್ಷಿಯು ಹೇಳಿಕೆಯಿತ್ತ ಒಂದು ವಾರದೊಳಗೆ ಅವನಿಗೆ ರೋಗ, ಬೆಂಕಿ, ಪುತ್ರಾದಿ ಜ್ಞಾತಿಗಳ ಮರಣ, ಮುಂತಾದ ವಿಪತ್ತುಗಳು ಸಂಭವಿಸಿದರೆ, ಸಾಕ್ಷಿ ನುಡಿದುದು ಸುಳ್ಳೆಂದು ಭಾವಿಸಿ, ಸಾಲಕೊಟ್ಟವನಿಗೆ ಹಣವನ್ನೂ, ತೆಗೆದುಕೊಂಡವನಿಂದ ಮತ್ತೆ ದಂಡವನ್ನೂ ಕೊಡಿಸಬೇಕು.

**ಅಸಾಕ್ಷಿಕೇಷು ತ್ವರ್ಥೇಷು ಮಿಥೋ ವಿವದಮಾನಯೋಃ ।**
**ಅವಿಂದನ್ತತ್ತ್ವತಃ ಸತ್ಯಂ ಶಪಥೇನಾಪಿ ಲಂಭಯೇತ್ ॥ ೩೪**

ಹಣಕಾಸಿನ ವ್ಯವಹಾರದಲ್ಲಿ ಸಾಕ್ಷ್ಯವಿಲ್ಲದೆ ಇಬ್ಬರು ಜಗಳವಾಡುತ್ತಿದ್ದು, ನಿಜವೃತ್ತಾಂತವನ್ನು ತಿಳಿಯಲಾಗದಿದ್ದರೆ ವಾದಿಪ್ರತಿವಾದಿಗಳಿಂದ ಪಥ (ಆಣೆ, ಪ್ರಮಾಣ) ಮಾಡಿಸಬೇಕು.

**ಮಹರ್ಷಿಭಿಶ್ಚ ದೇವೈಶ್ಚ ಕಾರ್ಯಾರ್ಥಂ ಶಪಥಾಃ ಕೃತಾಃ ।**
**ವಸಿಷ್ಠಶ್ಚಾಪಿ ಶಪಥಂ ಶೇಪೇ ಪೈ ಯವನೇ ನೃಪೇ ॥** ೩೫

ಸಪ್ತರ್ಷಿಗಳೇ ಮೊದಲಾದ ಮಹರ್ಷಿಗಳೂ ಇಂದ್ರಾದಿ ದೇವತೆಗಳೂ ಕೂಡ ಸಂದಿಗ್ಧವಾದ ಕಾರ್ಯಗಳನ್ನು ನಿರ್ಣಯಿಸುವಲ್ಲಿ ಶಪಥಗಳನ್ನು ಮಾಡಿದ್ದಾರೆ. ('ಇವನೇ ನನ್ನ ನೂರು ಜನ ಮಕ್ಕಳನ್ನು ಕೊಂದು ತಿಂದಿದ್ದಾನೆ' ಎಂದು ವಿಶ್ವಾಮಿತ್ರನು ರಾಜನಲ್ಲಿ ದೂರುಕೊಟ್ಟಾಗ) ತನ್ನ ಮೇಲೆ ಬಂದ ಅಪವಾದವನ್ನು ಕಳೆದುಕೊಳ್ಳಲು ವಸಿಷ್ಠನು ಯವನಪುತ್ರನಾದ ಸುದಾಸನೆಂಬ ರಾಜನಲ್ಲಿ ಶಪಥಮಾಡಿದನು.

**ಸತ್ಯೇನ ಶಾಪಯೇದ್ವಿಪ್ರಂ ಕ್ಷತ್ರಿಯಂ ವಾಹನಾಯುಧೈಃ ।**
**ಗೋಬೀಜಕಾಂಚನೈರ್ವೈಶ್ಯಂ ಶೂದ್ರಂ ಸರ್ವೈಸ್ತು ಪಾತಕೈಃ ॥** ೩೬

ಬ್ರಾಹ್ಮಣನು ಸತ್ಯದಮೇಲೆ ಆಣೆಮಾಡಬೇಕು (ಸತ್ಯವೇ ಅವನ ಸರ್ವಸ್ವ); ಕ್ಷತ್ರಿಯನು ರಥ ಆಯುಧಗಳ ಆಣೆಯಿಟ್ಟುಕೊಳ್ಳಬೇಕು; ವೈಶ್ಯನು ಗೋಸಂಪತ್ತಿ, ಧಾನ್ಯಗಳ ಬೀಜ ಮತ್ತು ಬಂಗಾರಗಳಮೇಲೆ ಆಣೆಯಿಟ್ಟುಕೊಳ್ಳಬೇಕು (ತಾನು ಸುಳ್ಳು ಹೇಳಿದರೆ ತನ್ನ ಆ ಸಂಪತ್ತೆಲ್ಲ ನಾಶವಾಗಲಿ, ಎಂದು); ಶೂದ್ರನು ಎಲ್ಲ ಪಾತಕಗಳಮೇಲೆ ಆಣೆಮಾಡಬೇಕು (ಸುಳ್ಳು ಹೇಳಿದರೆ ಇಂತಿಂತಹ ಮಹಾಪಾತಕಗಳು ತನಗೆ ಬರಲಿ ಎಂದು).

**ಅಗ್ನಿಂ ವಾಹಾರಯೇದೇನಮಪ್ಸು ಚೈನಂ ನಿಮಜ್ಜಯೇತ್ ।**
**ಪುತ್ರದಾರಸ್ಯ ವಾಪ್ಯೇನಂ ಶಿರಾಂಸಿ ಸ್ಪರ್ಶಯೇತ್ ಪೃಥಕ್ ॥** ೩೭

ಅಥವಾ ಬೆಂಕಿಯನ್ನು ಅಂಗೈಯಲ್ಲಿ ಹೊತ್ತು ಏಳು ಹೆಜ್ಜೆ ನಡೆಯುವಂತೆ ಮಾಡಬೇಕು; ಅಥವಾ ತಿಳಿಯಾದ ನೀರಿನಲ್ಲಿ ಅವನನ್ನು ಮುಳುಗಿಸಬೇಕು; ಅಥವಾ ಅವನ ಹೆಂಡತಿ ಮಕ್ಕಳ ತಲೆಯಮೇಲೆ ಅವನ ಕೈಯನ್ನು ಇಡಿಸಬೇಕು.

**ಯಮಿದ್ಧೋ ನ ದಹತ್ಯಗ್ನಿರಾಪೋ ನೋನ್ಮಜ್ಜಯಂತಿ ಚ ।**
**ನ ಚಾರ್ತಿಮೃಚ್ಛತಿ ಕ್ಷಿಪ್ರಂ ಸ ಜ್ಞೇಯಃ ಶಪಥೇ ಶುಚಿಃ ॥** ೩೮

ಶಪಥಮಾಡಿದವನನ್ನು ಪ್ರಜ್ವಲಿಸಿದ ಅಗ್ನಿಯು ಸುಡದಿದ್ದರೆ, ನೀರು ತೇಲಿಸದಿದ್ದರೆ, ಅವನಿಗೆ ಸ್ವಲ್ಪಕಾಲದಲ್ಲಿಯೇ ಯಾವ ಮಹಾವಿಪತ್ತೂ ಒದಗದಿದ್ದರೆ, ಅವನನ್ನು ನಿರ್ದೋಷಿಯೆಂದು ತಿಳಿಯಬೇಕು.

**ವತ್ಸಸ್ಯ ಹ್ಯಭಿಶಪ್ತಸ್ಯ ಪುರಾ ಭ್ರಾತ್ರಾ ಯವೀಯಸಾ ।**
**ನಾಗ್ನಿರ್ದದಾಹ ರೋಮಾಪಿ ಸತ್ಯೇನ ಜಗತಃ ಸ್ಪಶಃ ॥** ೩೯

ಹಿಂದೊಮ್ಮೆ ವತ್ಸನೆಂಬ ಋಷಿಯೊಡನೆ ಅವನ ಮಲತಾಯಿಯ ಮಗನಾದ ತಮ್ಮನು ಜಗಳವಾಡಿ, ಕೋಪದಿಂದ "ನೀನು ಬ್ರಾಹ್ಮಣನಲ್ಲ, ಶೂದ್ರಪುತ್ರ" ಎಂದು ಘೋಷಿಸಿದನು. "ಹಾಗೇನಲ್ಲ, ನೋಡು ಬೇಕಾದರೆ" ಎಂದು ಹೇಳುತ್ತ, ವತ್ಸನು ಪರೀಕ್ಷೆಗಾಗಿ ಅಗ್ನಿಪ್ರವೇಶಮಾಡಿದನು. ಸರ್ವ ಲೋಕಕ್ಕೆ ಗೂಢಚಾರನಂತಿರುವ ಅಗ್ನಿಯು ಸತ್ಯದ ಮಹಿಮೆಯಿಂದ ವತ್ಸನ ಒಂದು ಕೂದಲನ್ನೂ ಸುಡಲಿಲ್ಲ.

**ಲೋಭಾನ್ಮೋಹಾದ್ಭಯಾನ್ಮೈತ್ರಾತ್ಕಾಮಾತ್ಕ್ರೋಧಾತ್ತಥೈವ ಚ**
**ಅಜ್ಞಾನಾದ್ಬಾಲಭಾವಾಚ್ಚ ಸಾಕ್ಷ್ಯಂ ವಿತಥಮುಚ್ಯತೇ ॥** ೪೦

ಲೋಭ, ಮೋಹ, ಭಯ, ಸ್ನೇಹ, ಕಾಮ, ಕ್ರೋಧ, ಅಜ್ಞಾನ, ಹುಡುಗತನ, ಈ ಕಾರಣಗಳಿಂದ ಸಾಕ್ಷ್ಯವು ಅಸತ್ಯವಾಗಬಲ್ಲದು.

**ಅದಂಡ್ಯಾನ್ದಂಡಯನ್ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।**
**ಅಯಶೋ ಮಹದಾಪ್ನೋತಿ ನರಕಂ ಚೈವ ಗಚ್ಛತಿ ॥** ೪೧

ದಂಡಿಸಲ್ಪಡಬಾರದವರನ್ನು ಶಿಕ್ಷಿಸುವುದರಿಂದಲೂ, ಶಿಕ್ಷಾರ್ಹರನ್ನು ದಂಡಿಸದೆ ಬಿಡುವುದರಿಂದಲೂ ರಾಜನು ಮಹತ್ತರವಾದ ಅಪಕೀರ್ತಿಯನ್ನು ಹೊಂದಿ ನರಕಕ್ಕೇ ಹೋಗುತ್ತಾನೆ.

**ವಾಗ್ದಂಡಂ ಪ್ರಥಮಂ ಕುರ್ಯಾದ್ಧಿಗ್ದಂಡಂ ತದನಂತರಮ್ ।**
**ತೃತೀಯಂ ಧನದಂಡಂ ತು ವಧದಂಡಮತಃ ಪರಮ್ ॥** ೪೨

ಮೊದಲಸಲ ತಪ್ಪುಮಾಡಿದವನಿಗೆ 'ನೀನು ಮಾಡಿದುದು ನ್ಯಾಯವಲ್ಲ, ಮುಂದೆ ಹೀಗೆ ಮಾಡಬೇಡ' ಎಂದು ಬುದ್ಧಿಹೇಳಿ, ವಾಗ್ದಂಡವನ್ನು ವಿಧಿಸಬೇಕು, ಪುನಃ ಅದೇ ಬಗೆಯ ತಪ್ಪನ್ನು ಮಾಡಿದಾಗ ಛೀಮಾರಿ

ಹಾಕುತ್ತಾ, 'ಪಾಪಾಚರಣೆ ಮಾಡುವ ನಿನ್ನ ಜನ್ಮ ವ್ಯರ್ಥ' ಎಂದು ಹೇಳುತ್ತ ಧಿಕ್ಕಾರಮಾಡಿದರೆ ಅದೇ ದಂಡವಾಗುವುದು. ಮೂರನೆಯದಾಗಿ, ಬಾಯಿಮಾತಿಗೆ ಸಗ್ಗದವನಿಗೆ ಜುಲ್ಮಾನೆಯನ್ನು (ಹಣದ ದಂಡ) ವಿಧಿಸಬೇಕು. ಯಾವುದಕ್ಕೂ ಬಗ್ಗದಿದ್ದರೆ ಆಮೇಲೆ ಹೊಡೆಯುವುದು, ಕೈಕಾಲುಗಳನ್ನು ಕತ್ತರಿಸುವುದು ಮುಂತಾದ ವಧದಂಡವೆಂಬ ದೇಹಶಿಕ್ಷೆಯನ್ನು ವಿಧಿಸಬೇಕು

**ಯತ್ಕಿಂಚಿದ್ದಶ ವರ್ಷಾಣಿ ಸನ್ನಿಧೌ ಪ್ರೇಕ್ಷತೇ ಧನೀ ।**
**ಭುಜ್ಯಮಾನಂ ಪರೈಸ್ತೂಷ್ಣೀಂ ನ ಸ ತಲ್ಲಬ್ಧುಮರ್ಹತಿ ॥ ೪೩**

ಹತ್ತು ವರ್ಷಗಳವರೆಗೆ ತನ್ನ ಎದುರಿಗೆ ತನ್ನ ಸ್ವತ್ತನ್ನು ಅನುಭವಿಸುತ್ತಿರುವವನಿಗೆ ಅದನ್ನು ತಪ್ಪಿಸುವುದಕ್ಕಾಗಿ ಏನನ್ನೂ ಹೇಳದಿದ್ದರೆ, ಮಾಲೀಕನು ಆ ಸ್ವತ್ತನ್ನು ಮತ್ತೆ ಪಡೆಯುವ ಹಕ್ಕನ್ನು ಕಳೆದುಕೊಳ್ಳುತ್ತಾನೆ.

**ಮತ್ತೋನ್ಮತ್ತಾರ್ತಾಧ್ಯಧೀನೈರ್ಬಾಲೇನ ಸ್ಥವಿರೇಣ ವಾ ।**
**ಅಸಂಬದ್ಧಕೃತಶ್ಚೈವ ವ್ಯವಹಾರೋ ನ ಸಿಧ್ಯತಿ ॥ ೪೪**

ಪಾನಮತ್ತರು, ಹುಚ್ಚರು, ರೋಗಿಷ್ಠರು, ಅಸ್ವತಂತ್ರರು, ಹುಡುಗರು, ಮುದುಕರು—ಇವರುಗಳೊಡನೆ (ತಂದೆ, ಸಹೋದರ, ಚಿಕ್ಕಪ್ಪ ಮುಂತಾದವರನ್ನು ಬಿಟ್ಟು) ದೇಹಸಂಬಂಧಿಗಳಲ್ಲದವರು ಮಾಡಿದ ಸಾಲ, ಮೊದಲಾದ ವ್ಯವಹಾರಗಳು ಸಿದ್ಧಿಸುವುದಿಲ್ಲ.

**ಗ್ರಹೀತಾ ಯದಿ ನಷ್ಟಃ ಸ್ಯಾತ್ಕುಟುಂಬಾರ್ಥೇ ಕೃತೋ ವ್ಯಯಃ ।**
**ದಾತವ್ಯಂ ಬಾಂಧವೈಸ್ತತ್ ಸ್ಯಾತ್ಪ್ರವಿಭಕ್ತೈರಪಿ ಸ್ವತಃ ॥ ೪೫**

ಸಾಲ ತೆಗೆದುಕೊಂಡವನು ದೇಶಾಂತರಗತನಾಗಿದ್ದು, ಸಾಲವು ಕುಟುಂಬದ ಹಿತಕ್ಕಾಗಿ ಮಾಡಲ್ಪಟ್ಟಿದ್ದರೆ, ವಿಭಕ್ತರಾಗಲಿ, ಅವಿಭಕ್ತರಾಗಲಿ, ಅವನ ಬಂಧುಗಳು ತಮ್ಮ ಹಣದಿಂದ ಆ ಸಾಲವನ್ನು ತೀರಿಸಬೇಕು.

**ಬಲಾದ್ದತ್ತಂ ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಮ್ ।**
**ಸರ್ವಾನ್ಬಲಕೃತಾನರ್ಥಾನಕೃತಾನ್ಮನುರಬ್ರವೀತ್ ॥ ೪೬**

ಬಲಾತ್ಕಾರದಿಂದ ಕೊಡಲ್ಪಟ್ಟದ್ದು (ಪ್ರತಿಗ್ರಹಕ್ಕೆ ಅಯೋಗ್ಯವಾದುದು), ಬಲಾತ್ಕಾರದಿಂದ ಅನುಭವಿಸಿದ ಭೂಮಿ, ಮನೆ ಮೊದಲಾದ

ಆಸ್ತಿಗಳು, ಬಲಾತ್ಕಾರದಿಂದ ಬರೆಸಲ್ಪಟ್ಟ ಕಾಗದಪತ್ರಗಳು, ಹೀಗೆಯೇ ಬಲಾತ್ಕಾರದಿಂದ ಮಾಡಲ್ಪಟ್ಟ ಯಾವ ಕಾರ್ಯವೇ ಆಗಲಿ, ಅವೆಲ್ಲ ಮಾಡಿದ ಹಾಗೇ ಅಲ್ಲ (ಅಂತಹವುಗಳನ್ನು ವ್ಯವಹಾರದಿಂದ ಹಿಂದಿರುಗಿಸ ಬೇಕು) ಎಂದು ಮನು ಹೇಳಿದ್ದಾನೆ.

**ಕುಲಜೇ ವೃತ್ತಸಂಪನ್ನೇ ಧರ್ಮಜ್ಞೇ ಸತ್ಯವಾದಿನಿ ।**
**ಮಹಾಪಕ್ಷೇ ಧನಿನ್ಯಾರ್ಯೇ ನಿಕ್ಷೇಪಂ ನಿಕ್ಷಿಪೇದ್ಬುಧಃ ॥** ೪೭

ಬುದ್ಧಿವಂತನು ತನ್ನ ವಸ್ತುಗಳನ್ನು ಮತ್ತೊಬ್ಬನಲ್ಲಿ ನ್ಯಾಸವಾಗಿ ಇಡಬೇಕಾದಾಗ, ಸತ್ಕುಲಪ್ರಸೂತನೂ, ಸದಾಚಾರಿಯೂ, ಧರ್ಮಜ್ಞನೂ, ಸತ್ಯವನ್ನೇ ನುಡಿಯುವವನೂ, ಅನೇಕ ಜನ ಪುತ್ರಾದಿಪರಿವಾರವುಳ್ಳವನೂ, ಸ್ವತಃ ಹಣವಂತನೂ, ಗೌರವಸ್ಥನೂ ಆದ ಮನುಷ್ಯನ ಬಳಿಯಲ್ಲಿ ನಿಕ್ಷೇಪ ವಾಗಿ ಇಡಬೇಕು.

(ಹಾಗೆಮಾಡುವುದರಿಂದ ಮೋಸಕ್ಕೆ ಅವಕಾಶ ಕಡಿಮೆ; ಬೇಡಿದಾಗ ತನ್ನ ಪದಾರ್ಥವನ್ನು ಹಿಂದಿರುಗಿ ಪಡೆಯಬಹುದು.)

**ಯೋ ನಿಕ್ಷೇಪಂ ಯಾಚ್ಯಮಾನೋ ನಿಕ್ಷೇಪ್ತುರ್ನ ಪ್ರಯಚ್ಛತಿ ।**
**ಸ ಯಾಚ್ಯಃ ಪ್ರಾಡ್ವಿವಾಕೇನ ತನ್ನಿಕ್ಷೇಪ್ತುರಸಂನಿಧೌ ॥** ೪೮

**ಸಾಕ್ಷ್ಯಭಾವೇ ಪ್ರಣಿಧಿಭಿರ್ವಯೋರೂಪಸಮನ್ವಿತೈಃ ।**
**ಅಪದೇಶೈಶ್ಚ ಸಂನ್ಯಸ್ಯ ಹಿರಣ್ಯಂ ತಸ್ಯ ತತ್ತ್ವತಃ ॥** ೪೯

ಒಬ್ಬನು ಮತ್ತೊಬ್ಬನಲ್ಲಿ ಹಣ, ಒಡವೆ ಮುಂತಾದುವನ್ನು ನಿಕ್ಷೇಪ ವಾಗಿಟ್ಟು, ಕಾಲಾಂತರದಲ್ಲಿ ಅದನ್ನು ಹಿಂದಕ್ಕೆ ಪಡೆಯಲಾಗದೆ ನ್ಯಾಯಾ ಧೀಶನಲ್ಲಿ ದೂರುಕೊಡಬಹುದು. ನ್ಯಾಯಾಧೀಶನು ನಿಕ್ಷೇಪವಿಟ್ಟವನನ್ನು ಹೊರಗೆ ಕಳುಹಿಸಿ, ಆ ಪದಾರ್ಥಗಳನ್ನು ಇಟ್ಟುಕೊಂಡವನನ್ನು ವಿಚಾರಿಸ ಬೇಕು. ಅದಕ್ಕೆ ಸಾಕ್ಷಿಗಳಿರದೆ ಇರಬಹುದು. ಆಗ ನ್ಯಾಯಾಧೀಶನು ವಿಚಾರಣೆ ಗಾಗಿ ತನ್ನ ಕಡೆಯ ಗೂಢಚಾರರಲ್ಲಿ ಒಳ್ಳೆಯ ವಯಸ್ಸು ರೂಪಗಳುಳ್ಳ (ನಂಬಿಕೆ ಬರುವಂತೆ ತೋರುವ) ದೂತರನ್ನು ಆರಿಸಿ, ಅವರಿಂದ ಮತ್ತೆ ಅದೇ ಮನುಷ್ಯನಲ್ಲಿ ಬೇರೆ ನಿಕ್ಷೇಪವನ್ನು ಇಡಿಸಬೇಕು.

**ಸ ಯದಿ ಪ್ರತಿಪದ್ಯೇತ ಯಥಾನ್ಯಸ್ತಂ ಯಥಾಕೃತಮ್ ।**
**ನ ತತ್ರ ವಿದ್ಯತೇ ಕಿಂಚಿದ್ಯತ್ಪರೈರಭಿಯುಜ್ಯತೇ ॥ ೫೦**

ಕಾಲಾಂತರದಲ್ಲಿ ಆ ನಿಕ್ಷೇಪವನ್ನು ಹಿಂದಿರುಗಿಸಲು ಕೇಳಿದಾಗ, ಅವನು ಆ ವ್ಯವಹಾರವನ್ನು ಪೂರ್ಣವಾಗಿ ಒಪ್ಪಿಕೊಂಡು ನಿಕ್ಷೇಪವನ್ನು ಹಿಂದಕ್ಕೆ ಕೊಟ್ಟರೆ, ಮೊದಲನೇ ನಿಕ್ಷೇಪದ ವ್ಯವಹಾರದಲ್ಲಿ ಮಾಡಿದ ಆರೋಪ ಸುಳ್ಳೆಂದು ಭಾವಿಸಬೇಕು.

**ತೇಷಾಂ ನ ದದ್ಯಾದ್ಯದಿ ತು ತದ್ಧಿರಣ್ಯಂ ಯಥಾವಿಧಿ ।**
**ಉಭೌ ನಿಗೃಹ್ಯ ದಾಪ್ಯಃ ಸ್ಯಾದಿತಿ ಧರ್ಮಸ್ಯ ಧಾರಣಾ ॥ ೫೧**

ಅವನು ಆ ಗೂಢಚಾರರ ನಿಕ್ಷೇಪರೂಪವಾದ ಬಂಗಾರ ಮೊದಲಾದುವನ್ನು ಹಿಂದಕ್ಕೆ ಕೊಡದೆಹೋದರೆ, ಅವನು ಮೋಸಗಾರನೆಂದು ನಿಶ್ಚಯ ಮಾಡಿ ಅವನನ್ನು ಶಿಕ್ಷಿಸಿ, ಆ ಎರಡು ನಿಕ್ಷೇಪಗಳನ್ನೂ ಅವನಿಂದ ಕೊಡಿಸಿ ಕೊಡಬೇಕೆಂದು ಧರ್ಮದ ನಿರ್ಣಯ.

**ನಿಕ್ಷೇಪೋಪನಿಧೀ ನಿತ್ಯಂ ನ ದೇಯಂ ಪ್ರತ್ಯನಂತರೇ ।**
**ನಶ್ಯತೋ ವಿನಿಪಾತೇ ತಾವನಿಪಾತೇ ತ್ವನಾಶಿನೌ ॥ ೫೨**

(ಒಳಗೆ ಏನಿದೆಯೆಂದು ಹೇಳದೆ ಅಥವಾ ಎಣಿಸಿ ತೋರಿಸದೆ, ಮೇಲೆ ಮುದ್ರೆ ಒತ್ತಿದ ಚೀಲವನ್ನು ನ್ಯಾಸವಾಗಿ ಇಟ್ಟರೆ ಅದನ್ನು ಉಪನಿಧಿಯೆಂದೂ, ತೆಗೆದುಕೊಳ್ಳುವವನಿಗೆ ಎಲ್ಲವನ್ನೂ ತೋರಿಸಿ ಆಮೇಲೆ ಕೊಟ್ಟರೆ ಅದನ್ನು ನಿಕ್ಷೇಪವೆಂದೂ ಹೇಳಬಹುದು.)

ನಿಕ್ಷೇಪ ಅಥವಾ ಉಪನಿಧಿಗಳನ್ನು ತಂದಿಟ್ಟವನಿಗೆ ಮಾತ್ರವೇ ಕೊಡಬೇಕು, ಅವನು ಬದುಕಿರುವಾಗಲೇ ಅವನ ಅನಂತರ ಉತ್ತರಾಧಿಕಾರಿಗಳಿಗೆ (ಪುತ್ರಾದಿಗಳಿಗೆ) ಕೊಡಬಾರದು. ಒಂದು ವೇಳೆ ಆ ಉತ್ತರಾಧಿಕಾರಿಯು ನಷ್ಟನಾದರೆ (ಹಕ್ಕುದಾರನಾದ ನಿಕ್ಷೇಪವಿಟ್ಟ ತನ್ನ ಬಂಧುವಿಗೆ ಅದನ್ನು ತಲುಪಿಸದೆಯೇ ಓಡಿಹೋದರೆ ಅಥವಾ ಮೃತನಾದರೆ), ನಿಕ್ಷೇಪವು ಹಕ್ಕುದಾರನಿಗೆ ಸಿಗದೇ ಹೋಗುವುದು (ಅದು ಅನ್ಯಾಯವಾಗುವುದು). ಆ ಉತ್ತರಾಧಿಕಾರಿಯು ನಷ್ಟನಾಗದಿದ್ದರೂ ನಿಕ್ಷೇಪವು ಹಕ್ಕುದಾರನಿಗೆ ಸಿಗಬಹುದು ಅಥವಾ ಸಿಗದೆ ಹೋಗಬಹುದು. ಹೀಗೆ ವ್ಯವಹಾರವು

ಸಂದೇಹಾಸ್ಪದವಾಗಿಬಿಡುವುದರಿಂದ, ಹಕ್ಕುದಾರನಲ್ಲದವನ ಕೈಯಲ್ಲಿ ನಿಕ್ಷೇಪವನ್ನು ಹಿಂದಕ್ಕೆ ಕೊಡಬಾರದು.

**ಚೌರೈರ್ಹೃತಂ ಜಲೇನೋಢಮಗ್ನಿನಾ ದಗ್ಧಮೇವ ವಾ ।**
**ನ ದದ್ಯಾದ್ಯದಿ ತಸ್ಮಾತ್ಸ ನ ಸಂಹರತಿ ಕಿಂಚನ ॥** ೫೩

ತನ್ನಲ್ಲಿ ಇಡಲ್ಪಟ್ಟ ನಿಕ್ಷೇಪವು ಕಳ್ಳರ ವಶವಾದರೆ, ನೀರಿನ ಪ್ರವಾಹದಲ್ಲಿ ತೇಲಿಹೋದರೆ ಅಥವಾ ಬೆಂಕಿಗೆ ಸಿಕ್ಕಿ ಸುಟ್ಟುಹೋದರೆ, ಮತ್ತು ತಾನು ಅದರ ಅಲ್ಪಾಂಶವನ್ನಾದರೂ ಉಳಿಸಿಕೊಳ್ಳಲು ಆಗದಿದ್ದರೆ, ಅವನ ಯತ್ನ ಮೀರಿ ನಷ್ಟವಾಗಿರುವ ಆ ನಿಕ್ಷೇಪವನ್ನು ಹಿಂದಿರುಗಿ ಕೊಡಬೇಕಾಗಿರುವುದಿಲ್ಲ.

**ಯೋ ನಿಕ್ಷೇಪಂ ನಾರ್ಪಯತಿ ಯಶ್ಚಾನಿಕ್ಷಿಪ್ಯ ಯಾಚತೇ ।**
**ತಾವುಭೌ ಚೌರವಚ್ಛಾಸ್ಯೌ ದಾಪ್ಯೌ ವಾ ತತ್ಸಮಂ ಧನಮ್ ॥** ೫೪

ನಿಕ್ಷಿಪ್ತವಾದ ಹಣವನ್ನು ಯಾರು ಹಿಂದಿರುಗಿ ಕೊಡುವುದಿಲ್ಲವೋ, ಯಾವನು ನಿಕ್ಷೇಪವನ್ನು ಇಡದೆಯೇ ಸುಳ್ಳು ಹೇಳಿ ಅದನ್ನು ಕೇಳುತ್ತಾನೆಯೋ, ಅವರಿಬ್ಬರನ್ನೂ ಕಳ್ಳರಂತೆ ಭಾವಿಸಿ ಶಿಕ್ಷಿಸಬೇಕು. ನಿಕ್ಷೇಪವು ಬಂಗಾರ ಮೊದಲಾಗಿ ಬಹಳ ಬೆಲೆಬಾಳುವುದಾಗಿದ್ದರೆ, ಕಳ್ಳನಿಗೆ ವಿಧಿಸುವ ಶಿಕ್ಷೆಯನ್ನೇ ಅವರಿಗೂ ವಿಧಿಸಬೇಕು; ತಾಮ್ರದ ಪಾತ್ರೆಗಳೇ ಮೊದಲಾದ ಕಡಿಮೆ ಬೆಲೆಯ ವಸ್ತುಗಳಿದ್ದರೆ, ಅವುಗಳ ಬೆಲೆಯಾಗುವಷ್ಟು ಹಣವನ್ನು ದಂಡವಾಗಿ ತೆರಿಸಬೇಕು.

**ಉಪಾಧಿಭಿಶ್ಚ ಯಃ ಕಶ್ಚಿತ್ಪರದ್ರವ್ಯಂ ಹರೇನ್ನರಃ ।**
**ಸಸಹಾಯಃ ಸ ಹಂತವ್ಯಃ ಪ್ರಕಾಶಂ ವಿವಿಧೈರ್ವಧೈಃ ॥** ೫೫

"ನಿನ್ನಮೇಲೆ ಇರುವ ರಾಜನ ಕೋಪವನ್ನು ನಿವಾರಿಸುತ್ತೇನೆ", "ನಿನಗೆ ಕೆಲಸ ಕೊಡಿಸುತ್ತೇನೆ" ಅಥವಾ "ನಿನಗೆ ಮದುವೆ ಮಾಡಿಸುತ್ತೇನೆ" ಎಂಬುದಾಗಿ ಅನೇಕ ರೀತಿಯ ನೆಪಗಳಿಂದ ನಂಬಿಸಿ ಹಣವನ್ನು ಕಸಿದುಕೊಳ್ಳುವವರನ್ನು, ಆ ಕಾರ್ಯದಲ್ಲಿ ಅವರಿಗೆ ಸಹಾಯಕರಾಗಿರುವ ಜನರೊಡನೆ ಹಿಡಿಸಿ, ಕೈ, ಕಾಲು, ತಲೆ ಮೊದಲಾದ ಅಂಗಚ್ಛೇದಗಳಿಂದ ಅನೇಕ ಜನರು ಕಾಣುವಂತೆ ಹೊಡೆದು ಶಿಕ್ಷಿಸಬೇಕು.

**ಅಸ್ವಾಮಿನಾ ಕೃತೋ ಯಸ್ತು ದಾಯೋ ವಿಕ್ರಯ ಏವ ವಾ ।**
**ಅಕೃತಃ ಸ ತು ವಿಜ್ಞೇಯೋ ವ್ಯವಹಾರೇ ಯಥಾಸ್ಥಿತಿಃ ॥** ೫೬

ಸ್ವತ್ತಿನಮೇಲೆ ಹಕ್ಕಿಲ್ಲದವನು ಅದನ್ನು ವಿಭಾಗಮಾಡಿಕೊಡುವುದು, ಮಾರುವುದು ಮುಂತಾದ ಯಾವುದೇ ಕೆಲಸವನ್ನು ಮಾಡಿದರೂ ಅದು ಏನೂ ಮಾಡಿಲ್ಲದಂತೆಯೇ ಸರಿ. ವ್ಯವಹಾರದಲ್ಲಿ ಆ ಕಾರ್ಯ ನಿಲ್ಲಲಾರದು.

**ಸಂಭೋಗೋ ದೃಶ್ಯತೇ ಯತ್ರ ನ ದೃಶ್ಯೇತಾಗಮಃ ಕ್ವಚಿತ್ ।**
**ಆಗಮಃ ಕಾರಣಂ ತತ್ರ ನ ಸಂಭೋಗ ಇತಿ ಸ್ಥಿತಿಃ ॥** ೫೭

ಯಾವುದಾದರೂ ಆಸ್ತಿಯ ವಿಷಯದಲ್ಲಿ ಅದರ ಕ್ರಯಾದಿ ಸಂಬಂಧಿಯಾದ ಕಾಗದಪತ್ರಗಳಿಲ್ಲದೆ (ಅದರ ಹಕ್ಕು ಹೇಗೆ ಹುಟ್ಟಿತೆಂದು ಗೊತ್ತಾಗದೆ), ಸ್ವಾಧೀನಾನುಭವ ಮಾತ್ರ ಕಾಣಬರುವುದಾದರೆ, ಹಕ್ಕುಬಾಧ್ಯತೆಗಳಿಗಾಗಿ ಕಾಗದಪತ್ರವೇ ಪ್ರಮಾಣ, ಕೇವಲ ಅನುಭವವಲ್ಲ ಎಂದು ನಿರ್ಣಯ.

**ಅನ್ಯಾಂ ಚೇದ್ದರ್ಶಯಿತ್ವಾನ್ಯಾ ವೋಢುಃ ಕನ್ಯಾ ಪ್ರದೀಯತೇ ।**
**ಉಭೇ ತೇ ಏಕಶುಲ್ಕೇನ ವಹೇದಿತ್ಯಬ್ರವೀನ್ಮನುಃ ॥** ೫೮

(ಕನ್ಯಾಶುಲ್ಕವನ್ನು ತೆಗೆದುಕೊಂಡು) ಒಬ್ಬ ಕನ್ಯೆಯನ್ನು ತೋರಿಸಿ ಒಪ್ಪಿಸಿ, ವಿವಾಹಕಾಲದಲ್ಲಿ ಮತ್ತೊಬ್ಬ ಕನ್ಯೆಯನ್ನು ಕೊಟ್ಟರೆ, ಅವನು ಒಂದೇ ಶುಲ್ಕದಿಂದ ಆ ಇಬ್ಬರು ಕನ್ಯೆಯರನ್ನೂ ಮದುವೆಯಾಗಬಹುದೆಂದು ಮನುವಿನ ಮತ.

(ಕನ್ಯಾಶುಲ್ಕ ವ್ಯವಹಾರವು ವ್ಯಾಪಾರಕ್ಕೆ ಸಮ; ಹಣ ತೆಗೆದುಕೊಂಡ ವ್ಯವಹಾರದಲ್ಲಿ ಕೊಳ್ಳುವವನು ತಾನು ಇಷ್ಟಪಟ್ಟ ಪದಾರ್ಥಗಳನ್ನು ತೆಗೆದುಕೊಳ್ಳುವುದೇ ವ್ಯವಹಾರ, ಅದರಲ್ಲಿ ಮೋಸಕ್ಕೆ ಅವಕಾಶವಿರಬಾರದು.)

**ಧರ್ಮಾರ್ಥಂ ಯೇನ ದತ್ತಂ ಸ್ಯಾತ್ಕಸ್ಮೈಚಿದ್ಯಾಚತೇ ಧನಮ್ ।**
**ಪಶ್ಚಾಚ್ಚ ನ ತಥಾ ತತ್ಸ್ಯಾನ್ನ ದೇಯಂ ತಸ್ಯ ತದ್ಭವೇತ್ ॥** ೫೯

ಧರ್ಮಕಾರ್ಯ ಮಾಡುತ್ತೇನೆಂದು ಯಾವನಾದರೂ ಬೇಡಿ ಹಣ ತಂದು, ಮುಂದೆ ಆ ಕಾರ್ಯವನ್ನು ಅವನು ಮಾಡದೆಯೇ ಹೋದರೆ, ಹಣ ಕೊಟ್ಟವನು ತಾನು ಕೊಟ್ಟುದನ್ನು ಮತ್ತೆ ಹಿಂದಕ್ಕೆ ತೆಗೆದುಕೊಳ್ಳಬಹುದು;

ಹಾಗೂ ಇನ್ನಷ್ಟನ್ನು ಕೊಡುತ್ತೇನೆಂದು ವಾಗ್ದಾನಮಾಡಿದ್ದರೆ, ಅದನ್ನು ಕೊಡಬೇಕಾಗಿಲ್ಲ. (ಅಲ್ಲಿ ದತ್ತಾಪಹಾರದೋಷ ಹುಟ್ಟುವುದಿಲ್ಲ.)

**ಭೃತೋ ನಾರ್ತೋ ನ ಕುರ್ಯಾದ್ಯೋ ದರ್ಪಾತ್ಕರ್ಮ**
**ಯಥೋದಿತಮ್ ।**
**ಸ ದಂಡ್ಯಃ ಕೃಷ್ಣಲಾನಷ್ಟೌ ನ ದೇಯಂ ಚಾಸ್ಯ ವೇತನಮ್ ॥ ೬೦**

ತನ್ನ ಜೀವನವನ್ನು ನಡೆಸುವುದಕ್ಕೆ ಹಣಕ್ಕಾಗಿ ಕೂಲಿಮಾಡಲು ಒಪ್ಪಿದ ಸೇವಕನು, ಕಾಯಿಲೆ ಮೊದಲಾದ ತೊಂದರೆಗಳಿಲ್ಲದೆ ಇದ್ದರೂ ಅಹಂಕಾರದಿಂದ ತನ್ನ ಕೆಲಸವನ್ನು ಮಾಡದಿದ್ದರೆ, ಅವನು ಎಂಟು ಕೃಷ್ಣಲಗಳೆಂಬ ಹಣವನ್ನು ದಂಡವಾಗಿ ಕೊಡಬೇಕು ಅವನಿಗೆ ನಿಯುಕ್ತವಾದ ವೇತನವನ್ನು ಕೊಡಬಾರದು.

**ಆರ್ತಸ್ತು ಕುರ್ಯಾತ್ಸ್ವಸ್ಥಃ ಸನ್ಯಥಾಭಾಷಿತಮಾತ್ಮನಃ ।**
**ಸ ದೀರ್ಘಸ್ಯಾಪಿ ಕಾಲಸ್ಯ ತಲ್ಲಭೇತೈವ ವೇತನಮ್ ॥ ೬೧**

ರೋಗಪೀಡಿತನಾಗಿ ಒಪ್ಪಿಕೊಂಡ ಕೆಲಸವನ್ನು ಮಾಡಲಾಗದೆ, ಬಹುಕಾಲ ಕಳೆದಮೇಲೆಯಾದರೂ ಗುಣಹೊಂದಿದಮೇಲೆ ಅವನು ಆ ಕೆಲಸವನ್ನು ಮುಗಿಸಿದರೆ, ತನ್ನ ವೇತನವನ್ನು ಪಡೆಯಬಹುದು.

**ಕ್ರೀತ್ವಾ ವಿಕ್ರೀಯ ವಾ ಕಿಂಚಿದ್ಯಸ್ಯೇಹಾನುಶಯೋ ಭವೇತ್ ।**
**ಸೋಽಂತರ್ದಶಾಹಾತ್ತದ್ದ್ರವ್ಯಂ ದದ್ಯಾಚ್ಚೈವಾದದೀತ ಚ ॥ ೬೨**

ಕೊಳ್ಳುವ ಅಥವಾ ಮಾರುವ ವ್ಯಾಪಾರವನ್ನು ಮಾಡಿದವನಿಗೆ ಮುಂದೆ ತನ್ನ ವ್ಯಾಪಾರಕ್ಕಾಗಿ ಪಶ್ಚಾತ್ತಾಪ ಹುಟ್ಟಿದರೆ, ಅವನು ಹತ್ತು ದಿನಗಳೊಳಗೆ ವ್ಯಾಪಾರವನ್ನು ಹಿಂದಿರುಗಿಸಿ, ಆಯಾ ಪದಾರ್ಥಗಳನ್ನು (ಪಾತ್ರೆ, ನಗನಾಣ್ಯ, ಮನೆ, ಭೂಮಿ, ಇತ್ಯಾದಿ) ಅವುಗಳ ಬೆಲೆಯೊಂದಿಗೆ ಅದಲುಬದಲು ಮಾಡಿಕೊಳ್ಳಬಹುದು.

(ಸಾಮಾನು ಕೊಂಡವನಿಗೆ ತೃಪ್ತಿಯಾಗದಿದ್ದರೆ, ಅದನ್ನು ಹತ್ತು ದಿನಗಳೊಳಗೆ ಹಿಂದಕ್ಕೆ ಕೊಟ್ಟು ತಾನು ಕೊಟ್ಟಿದ್ದ ಹಣವನ್ನು ಹಿಂದಕ್ಕೆ ಪಡೆಯಬಹುದು. ಹೀಗೆಯೇ ಮನೆ ಭೂಮಿಗಳನ್ನು ಮಾರಿದವನೂ ತಾನು

*

ತೆಗೆದುಕೊಂಡಿದ್ದ ಹಣವನ್ನು ಹಿಂದಕ್ಕೆ ಕೊಟ್ಟು, ತನ್ನ ಮನಸ್ಸಿಗೆ ಬಾರದಿದ್ದ ವ್ಯಾಪಾರವನ್ನು ರದ್ದುಮಾಡಿ ಹತ್ತು ದಿನಗಳೊಳಗೆ ತನ್ನ ಸ್ವತ್ತನ್ನು ಪಡೆಯ ಬಹುದು.)

**ಯಸ್ತು ದೋಷವತೀಂ ಕನ್ಯಾಮನಾಖ್ಯಾಯ ಪ್ರಯಚ್ಛತಿ ।**
**ತಸ್ಯ ಕುರ್ಯಾನ್ನೃಪೋ ದಂಡಂ ಸ್ವಯಂ ಷಣ್ಣವತಿಂ ಪಣಾನ್ ॥ ೬೩**

ಹುಚ್ಚು, ಕ್ಷಯ, ಅಪಸ್ಮಾರ ಮುಂತಾದ ದೋಷಗಳಿಂದ ಕೂಡಿದ ಕನ್ಯೆಯನ್ನು ಯಾವನು ವಿಷಯವನ್ನು ತಿಳಿಸದೆಯೇ ಮದುವೆ ಮಾಡಿಕೊಡುತ್ತಾನೆಯೋ, ಅವನಿಗೆ ತೊಂಬತ್ತಾರು ಪಣಗಳ ದಂಡವನ್ನು ರಾಜನು ವಿಧಿಸಬೇಕು.

**ಅಕನ್ಯೇತಿ ತು ಯಃ ಕನ್ಯಾಂ ಬ್ರೂಯಾದ್ದ್ವೇಷೇಣ ಮಾನವಃ ।**
**ಸ ಶತಂ ಪ್ರಾಪ್ನುಯಾದ್ದಂಡಂ ತಸ್ಯಾ ದೋಷಮದರ್ಶಯನ್ ॥ ೬೪**

ಕನ್ಯೆಯಾಗಿರುವವಳನ್ನು ದ್ವೇಷದಿಂದ ಅಕನ್ಯೆ (ಋತುಮತಿ ಅಥವಾ ಕ್ಷತಯೋನಿ) ಎಂದು ಹೇಳಿದವನು ಆ ದೋಷವನ್ನು ಸಾಧಿಸಲಾರದೆ ಹೋದರೆ ಅವನಿಗೆ ನೂರು ಪಣಗಳ ದಂಡವನ್ನು ಹಾಕಬೇಕು.

**ಪಾಣಿಗ್ರಹಣಿಕಾ ಮಂತ್ರಾ ನಿಯತಂ ದಾರಲಕ್ಷಣಮ್ ।**
**ತೇಷಾಂ ನಿಷ್ಠಾ ತು ವಿಜ್ಞೇಯಾ ವಿದ್ವದ್ಭಿಃ ಸಪ್ತಮೇ ಪದೇ ॥ ೬೫**

ವೈವಾಹಿಕ ಮಂತ್ರಗಳು ನಿಜವಾಗಿಯೂ ಭಾರ್ಯಾತ್ವ ಸಾಧಕಗಳು "ಸಖಾ ಸಪ್ತಪದೀ ಭವ" ಎಂಬ ಮಂತ್ರದಿಂದ ಏಳನೆಯ ಹೆಜ್ಜೆಯನ್ನು ಪುರುಷನ ಜೊತೆಯಲ್ಲಿ ಇಟ್ಟಮೇಲೆಯೇ ಕನ್ಯೆಗೆ ಪತ್ನೀತ್ವವು ಸಿದ್ಧವಾಗುವುದು.

(ಸಪ್ತಪದಿ ಎಂಬ ಕಾರ್ಯವು ಆಗುವುದಕ್ಕಿಂತ ಮೊದಲೇ ಭಾರ್ಯಾತ್ವವು ಸಿದ್ಧವಾಗುವುದಿಲ್ಲವಾದುದರಿಂದ, ಅಷ್ಟರೊಳಗೆ ಹುಡುಗಿಯಲ್ಲಿ ಪ್ರಬಲದೋಷಗಳು ಕಂಡುಬಂದರೆ ಅವಳನ್ನು ಬಿಡಬಹುದು. ಸಪ್ತಪದಿ ಮುಗಿದಮೇಲೆ ಅದು ಸಾಧ್ಯವಿಲ್ಲ.)

**ತಡಾಗಾನ್ಯುದಪಾನಾನಿ ವಾಪ್ಯಃ ಪ್ರಸ್ರವಣಾನಿ ಚ ।**
**ಸೀಮಾಸಂಧಿಷು ಕಾರ್ಯಾಣಿ ದೇವತಾಯತನಾನಿ ಚ ॥** ೬೬

ಎರಡು ಗ್ರಾಮಗಳ ನಡುವಿನ ಮೇರೆಯನ್ನು ಗುರುತಿಸುವುದಕ್ಕಾಗಿ ಕೆರೆ, ಕೊಳ, ಬಾವಿ, ನೀರು ಹರಿಯುವ ಹಳ್ಳ, ದೇವಾಲಯ ಇವುಗಳನ್ನು ಕಲ್ಪಿಸಿಕೊಳ್ಳಬೇಕು.

(ನೀರಿನ ಸೌಕರ್ಯವಿರುವುದರಿಂದ ಅಥವಾ ಉತ್ಸವಗಳಿಗಾಗಿ ಜನರು ಅಲ್ಲಿಗೆ ಆಗಾಗ್ಯೆ ಬಂದು ಹೋಗಿ ಅನುಭವವಿರುವುದರಿಂದ, ಮುಂದೆ ಗಡಿ ವಿವಾದ ಬಂದರೆ ಸಾಕ್ಷಿಗಳನ್ನು ಒದಗಿಸಲು ಸುಲಭವಾಗುವುದು.)

**ಅಶ್ಮನೋಽಸ್ಥೀನಿ ಗೋವಾಲಾಂಸ್ತುಷಾನ್ ಭಸ್ಮ ಕಪಾಲಿಕಾಃ ।**
**ಕರೀಷಮಿಷ್ಟಕಾಂಗಾರಾನ್ ಶರ್ಕರಾವಾಲುಕಾಸ್ತಥಾ ॥** ೬೭

**ಯಾನಿ ಚೈವಂಪ್ರಕಾರಾಣಿ ಕಾಲಾದ್ಭೂಮಿರ್ನ ಭಕ್ಷಯೇತ್ ।**
**ತಾನಿ ಸಂಧಿಷು ಸೀಮಾಯಾಮಪ್ರಕಾಶಾನಿ ಕಾರಯೇತ್ ॥** ೬೮

ಕಲ್ಲುಚೂರುಗಳು, ಮೂಳೆ, ಹಸುವಿನ ಕೂದಲು, ಹೊಟ್ಟು, ಬೂದಿ, ಕಾಯಿಚಿಪ್ಪುಗಳು, ಒಣ ಸಗಣಿ, ಇಟ್ಟಿಗೆ, ಇದ್ದಿಲು, ಮರಳು ಮುಂತಾದವು ಬಹುಕಾಲ ಭೂಮಿಯೊಳಗೆ ಇದ್ದರೂ ನಾಶಹೊಂದುವುದಿಲ್ಲ. ಅಂಥವನ್ನು ಗಡಿಗೆಗಳಲ್ಲಿ ತುಂಬಿ ಗ್ರಾಮಗಳ ಸಂಧಿಪ್ರದೇಶದಲ್ಲಿ ಗಡಿ ತಿಳಿಯುವುದಕ್ಕಾಗಿ ನೆಲದಲ್ಲಿ ಹೂಳಬೇಕು. ('ಪ್ರಕ್ಷಿಪ್ಯ ಕುಂಭೇಷ್ವೇತಾನಿ ಸೀಮಾಂತೇಷು ನಿಧಾಪಯೇತ್' ಎಂದು ಬೃಹಸ್ಪತಿಯ ವಚನವಿದೆ.)

**ಸಾಕ್ಷ್ಯಭಾವೇ ತು ಚತ್ವಾರೋ ಗ್ರಾಮಾಃ ಸಾಮಂತವಾಸಿನಃ ।**
**ಸೀಮಾವಿನಿರ್ಣಯಂ ಕುರ್ಯುಃ ಪ್ರಯತಾ ರಾಜಸನ್ನಿಧೌ ॥** ೬೯

ಗ್ರಾಮಗಳ ವಿವಾದದಲ್ಲಿ ಪ್ರತ್ಯಕ್ಷ ಸಾಕ್ಷಿಗಳು ದೊರೆಯದಿದ್ದಾಗ, ಅಕ್ಕಪಕ್ಕದ ಗ್ರಾಮಗಳಲ್ಲಿ ವಾಸಮಾಡುವ ನಾಲ್ಕು ಜನರು ಸಾಕ್ಷಿಧರ್ಮದಿಂದ ರಾಜನ ಎದುರಿಗೆ ಕುಳಿತು ಗಡಿನಿರ್ಣಯವನ್ನು ಮಾಡಲು ಪ್ರಯತ್ನಪಡಬೇಕು.

**ಸಾಮಂತಾನಾಮಭಾವೇ ತು ಮೌಲಾನಾಂ ಸೀಮ್ನಿ ಸಾಕ್ಷಿಣಾಮ್ ।**
**ಇಮಾನಪ್ಯನುಯುಂಜೀತ ಪುರುಷಾನ್ವನಗೋಚರಾನ್ ॥** ೭೦

**ವ್ಯಾಧಾಂಶ್ಶಾಕುನಿಕಾನ್ಗೋಪಾನ್ಕೈವರ್ತಾನ್ಮೂಲಖಾನಕಾನ್ ।**
**ವ್ಯಾಲಗ್ರಾಹಾನುಂಛವೃತ್ತೀನನ್ಯಾಂಶ್ಚ ವನಚಾರಿಣಃ ॥ ೭೧**

ಸಾಕ್ಷಿಧರ್ಮದಿಂದ ರಾಜನ ಸಮಕ್ಷದಲ್ಲಿ ಗಡಿವಿವಾದದ ವ್ಯವಹಾರಕ್ಕೆ ನೆರವಾಗುವವರು ಮತ್ತು ಆ ಗ್ರಾಮಗಳು ಹುಟ್ಟಿಕೊಂಡಾಗಿನಿಂದ ವಂಶ ಪರಂಪರೆಯಾಗಿ ಅಲ್ಲೇ ಬೆಳೆದು ಸಾಕ್ಷ್ಯಹೇಳಬಲ್ಲವರು ಇಲ್ಲದಿರುವಾಗ, ಮುಂದೆ ಹೇಳಿರುವ ಜನರನ್ನು ಪ್ರಶ್ನೆಮಾಡಬಹುದು: ಬೇಟೆಗಾರರು, ಬೇಡರು, ದನಕಾಯುವವರು, ಮೀನು ಹಿಡಿಯುವವರು, ಬೇರುಗಳನ್ನು ಅಗೆದು ಜೀವನ ನಡೆಸುವವರು, ಹಾವುಗಳನ್ನು ಹಿಡಿಯುವವರು, ಕೆಳಗೆ ಬಿದ್ದ ಕಾಳುಗಳನ್ನು ತಿಂದು ಜೀವಿಸುವ ಉಂಛವೃತ್ತಿಯವರು.

(ಇವರೆಲ್ಲರೂ ತಮ್ಮ ವೃತ್ತಿಯಿಂದ ಅಲ್ಲಲ್ಲಿ ಸಂಚಾರಮಾಡುತ್ತಲೇ ಇರುವರು. ಊರು ಕಾಡುಗಳಲ್ಲಿ ದಿನವೂ ಅಲೆಯುತ್ತಿರುವ ಇವರಿಗೆ ಗಡಿಯ ಪರಿಚಯ ಇದ್ದೇ ಇರುವುದು.)

**ತೇ ಪೃಷ್ಟಾಸ್ತು ಯಥಾ ಬ್ರೂಯುಃ ಸೀಮಾಸಂಧಿಷು ಲಕ್ಷಣಮ್ ।**
**ತತ್ತಥಾ ಸ್ಥಾಪಯೇದ್ರಾಜಾ ಧರ್ಮೇಣ ಗ್ರಾಮಯೋರ್ದ್ವಯೋಃ॥**

ಗ್ರಾಮಗಳ ಎಲ್ಲೆಯಲ್ಲಿ ಇರುವ ಯಾವ ಯಾವ ಗುರುತುಗಳನ್ನು (ಮರ, ಬಾವಿ, ಇತ್ಯಾದಿ) ಅವರು ತಿಳಿಸುವರೋ, ಅದಕ್ಕೆ ಅನುಸಾರ ವಾಗಿಯೇ, ರಾಜನು ಧರ್ಮದಿಂದ ಆ ಎರಡು ಗ್ರಾಮಗಳ ಗಡಿಯನ್ನು ಸ್ಥಾಪಿಸಬೇಕು.

**ಶ್ರುತಂ ದೇಶಂ ಚ ಜಾತಿಂ ಚ ಕರ್ಮ ಶಾರೀರಮೇವ ಚ ।**
**ವಿತಥೇನ ಬ್ರುವನ್ದರ್ಪಾದ್ದಾಪ್ಯಃ ಸ್ಯಾದ್ದ್ವಿಶತಂ ದಮಮ್ ॥ ೭೩**

ವಿದ್ಯೆ, ದೇಶ, ಜಾತಿ, ಶರೀರಸಂಸ್ಕಾರಗಳನ್ನು ಕುರಿತು ("ನೀನು ಇವನ್ನೆಲ್ಲ ಓದಿಯೇ ಇಲ್ಲ, ನೀನು ಆ ಊರಿನವನಲ್ಲ, ನಿನ್ನ ಜಾತಿ ಹೀನ ವಾದುದು, ನಿನಗೆ ಉಪನಯನವಾಗಿಯೇ ಇಲ್ಲ" ಎಂದು ಮುಂತಾಗಿ) ಅಹಂಕಾರದಿಂದ ಸುಳ್ಳುಹೇಳುವವನಿಂದ ಇನ್ನೂರು ಪಣಗಳ ದಂಡವನ್ನು ತೆರಿಸಬೇಕು. (ಇದು ವಾಕ್ಪಾರುಷ್ಯಕ್ಕೆ ದಂಡ.)

**ಯೇನ ಕೇನಚಿದಂಗೇನ ಹಿಂಸ್ಯಾಚ್ಚೇಚ್ಛ್ರೇಷ್ಠಮಂತ್ಯಜಃ |**
**ಛೇತ್ತವ್ಯಂ ತತ್ತದೇವಾಸ್ಯ ತನ್ಮನೋರನುಶಾಸನಮ್ ||** ೭೪

ಶೂದ್ರನು ಬ್ರಾಹ್ಮಣನ ಯಾವ ಯಾವ ಅಂಗಗಳನ್ನು ಹೊಡೆದು ಬಡಿದು ಹಿಂಸಿಸುತ್ತಾನೆಯೋ, ಆಯಾ ಅಂಗಗಳನ್ನೇ (ಕೈ, ಕಾಲು, ಇತ್ಯಾದಿ) ಕತ್ತರಿಸಬೇಕೆಂದು ಮನುವಿನ ಶಾಸನವು.

(ಹಿಂದೆ ಯಹೂದಿಗಳ ಪ್ರವಾದಿ ಮೋಸೆಸ್‌ನೂ "ಕಣ್ಣು ಕಿತ್ತವನ ಕಣ್ಣು ಕೀಳು, ಹಲ್ಲು ಮುರಿದವನ ಹಲ್ಲು ಮುರಿ" ಎಂದು ತನ್ನ ಜನರಿಗೆ ಉಪದೇಶ ಮಾಡಿದ್ದನು. ಆದರೆ ಇಲ್ಲಿ ವಿಶೇಷವೇನೆಂದರೆ, ಕೀಳುವರ್ಣದ ಶೂದ್ರನು ತನ್ನ ಪಶುಬಲದಿಂದ ಉತ್ತಮವರ್ಣದವನಾದ ಮತ್ತು ಜ್ಞಾನ ಸಂಪನ್ನನಾದ ಬ್ರಾಹ್ಮಣನಿಗೆ ಹಿಂಸೆಮಾಡಿದುದಕ್ಕೆ ಮಾತ್ರ ತಕ್ಕ ಶಿಕ್ಷೆಯನ್ನು ಹೇಳಿದೆ.)

**ಭಾರ್ಯಾ ಪುತ್ರಶ್ಚ ದಾಸಶ್ಚ ಪ್ರೇಷ್ಯೋ ಭ್ರಾತಾ ಚ ಸೋದರಃ |**
**ಪ್ರಾಪ್ತಾಪರಾಧಾಸ್ತಾಡ್ಯಾಃ ಸ್ಯೂ ರಜ್ಜ್ವಾ ವೇಣುದಲೇನ ವಾ ||**
**ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗೇ ಕಥಂಚನ |**
**ಅತೋಽನ್ಯಥಾ ತು ಪ್ರಹರನ್ ಪ್ರಾಪ್ತಃ ಸ್ಯಾಚ್ಚೌರಕಿಲ್ಬಿಷಮ್ ||**

ತಪ್ಪುಮಾಡಿರುವ ಹೆಂಡತಿ, ಮಗ, ದಾಸ, ದೂತ, ತಮ್ಮ ಎಂಬ ಆಶ್ರಿತರನ್ನು ಸಣ್ಣ ಹಗ್ಗ, ಅಥವಾ ಬಿದುರಿನ ಸೀಳುಗಳಿಂದ ಶಿಕ್ಷಾರ್ಥವಾಗಿ ಬೆನ್ನಮೇಲೆ ಹೊಡೆಯಬೇಕು. ಯಾವಾಗಲೂ ತಲೆಯಮೇಲೆ ಹೊಡೆಯ ಬಾರದು. ತಲೆಯಮೇಲೆ ಅಥವಾ ಮತ್ತಾವುದಾದರೂ ಅಪಾಯಸ್ಥಳಗಳ ಮೇಲೆ ಹೊಡೆದರೆ, ಚೋರನಿಗಾಗುವ ವಾಗ್ದಂಡ, ಧನದಂಡರೂಪ ಶಿಕ್ಷೆ ಗಳನ್ನು ಪಡೆಯಬೇಕಾಗುವುದು.

**ಪರಮಂ ಯತ್ನಮಾತಿಷ್ಠೇತ್ ಸ್ತೇನಾನಾಂ ನಿಗ್ರಹೇ ನೃಪಃ |**
**ಸ್ತೇನಾನಾಂ ನಿಗ್ರಹಾದಸ್ಯ ಯಶೋ ರಾಷ್ಟ್ರಂ ಚ ವರ್ಧತೇ ||** ೭೭

ಕಳ್ಳರನ್ನು ಹಿಡಿದು ಶಿಕ್ಷಿಸುವುದರಲ್ಲಿ ರಾಜನು ಪರಮ ಪ್ರಯತ್ನವನ್ನು ಮಾಡಬೇಕು. ಅದರಿಂದ ರಾಜನಿಗೆ ಕೀರ್ತಿ ಬರುವುದು; ರಾಜ್ಯವೂ ಉತ್ತಮಗೊಳ್ಳುವುದು.

**ಸರ್ವತೋ ಧರ್ಮಷಡ್ಭಾಗೋ ರಾಜ್ಞೋ ಭವತಿ ರಕ್ಷತಃ ।**
**ಅಧರ್ಮಾದಪಿ ಷಡ್ಭಾಗೋ ಭವತ್ಯಸ್ಯ ಹ್ಯರಕ್ಷತಃ ॥ ೭೮**

ಪ್ರಜೆಗಳನ್ನು ಕಾಪಾಡುವ ರಾಜನಿಗೆ ವ್ಯಾಪಾರಿಗಳು, ಉದ್ಯಮ ಶೀಲರು, ಶ್ರೋತ್ರಿಯರು, ಅಬಲೆಯರು ಮುಂತಾದ ಎಲ್ಲರ ದೆಸೆಯಿಂದಲೂ, ನ್ಯಾಯವಾಗಿ ಅವರ ಧರ್ಮದ ಫಲದ ಆರನೆಯ ಭಾಗ ದೊರೆಯುವುದು. ಹಾಗೆಯೇ ಪ್ರಜೆಗಳನ್ನು ಕಾಪಾಡದ ರಾಜನಿಗೆ ಅವರು ಆಚರಿಸುವ ಅಧರ್ಮದ ಫಲದಲ್ಲಿಯೂ ಆರನೆಯ ಭಾಗ ಬರುವುದು.

**ಪುರುಷಾಣಾಂ ಕುಲೀನಾನಾಂ ನಾರೀಣಾಂ ಚ ವಿಶೇಷತಃ ।**
**ಮುಖ್ಯಾನಾಂ ಚೈವ ರತ್ನಾನಾಂ ಹರಣೇ ವಧಮರ್ಹತಿ ॥ ೭೯**

(ಹಣ ದೋಚುವುದಕ್ಕಾಗಿ) ಉತ್ತಮ ಕುಲಗಳಲ್ಲಿ ಹುಟ್ಟಿದ ಪುರುಷ ರನ್ನೂ, ವಿಶೇಷವಾಗಿ ಸ್ತ್ರೀಯರನ್ನೂ, ಹಾಗೆಯೇ ಪ್ರಮುಖ ರತ್ನಗಳಾದ ವಜ್ರ ವೈಡೂರ್ಯಾದಿಗಳನ್ನೂ ಅಪಹರಿಸುವವನಿಗೆ ಸಾವೇ ದಂಡ.

**ನ ಮಿತ್ರಕಾರಣಾದ್ರಾಜಾ ವಿಪುಲಾದ್ವಾ ಧನಾಗಮಾತ್ ।**
**ಸಮುತ್ಸೃಜೇತ್ಸಾಹಸಿಕಾನ್ ಸರ್ವಭೂತಭಯಾವಹಾನ್ ॥ ೮೦**

ಸ್ನೇಹಿತರ ಮಾತಿಗೆ ಬೆಲೆ ಕೊಟ್ಟೇ ಆಗಲಿ, ಬಹಳ ಹಣ ದೊರೆಯು ವುದೆಂಬ ಲೋಭದಿಂದಲೇ ಆಗಲಿ ಸರ್ವಪ್ರಾಣಿಗಳಿಗೂ ಭಯಂಕರರಾದ ಸಾಹಸಿಕರನ್ನು ರಾಜನು ದಂಡಿಸದೆ ಬಿಡಲೇಬಾರದು.

(ಹೊಡೆದು, ಬಡಿದು, ಕೊಂದು, ಕೊಳ್ಳೆಹೊಡೆಯುವ ದರೋಡೆಕಾರರು ಸಾಹಸಿಕರು.)

**ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ ಧರ್ಮೋ ಯತ್ರೋಪರುಧ್ಯತೇ ।**
**ದ್ವಿಜಾತೀನಾಂ ಚ ವರ್ಣಾನಾಂ ವಿಪ್ಲವೇ ಕಾಲಕಾರಿತೇ ॥ ೮೧**

**ಆತ್ಮನಶ್ಚ ಪರಿತ್ರಾಣೇ ದಕ್ಷಿಣಾನಾಂ ಚ ಸಂಗರೇ ।**
**ಸ್ತ್ರೀವಿಪ್ರಾಭ್ಯುಪಪತ್ತೌ ಚ ಘ್ನನ್ಧರ್ಮೇಣ ನ ದುಷ್ಯತಿ ॥ ೮೨**

ಧರ್ಮಕ್ಕೆ ಅಪಾಯ ಒದಗಿದಾಗ ದ್ವಿಜಾತಿಯವರೆಲ್ಲ ಧರ್ಮರಕ್ಷಣೆಗಾಗಿ ಶಸ್ತ್ರಧಾರಣೆಮಾಡಬಹುದು. ರಾಜನಿಲ್ಲದೆ ರಾಜ್ಯವು ಪರರಾಷ್ಟ್ರದವರಿಂದ

ಆಕ್ರಮಿಸಲ್ಪಟ್ಟು ಸ್ತ್ರೀಸಾಂಕರ್ಯದಿಂದ ವರ್ಣನಾಶವಾಗುವಾಗ, ತನ್ನನ್ನು ಕಾಪಾಡಿಕೊಳ್ಳಬೇಕಾದಾಗ, ಕಪ್ಪಕಾಣಿಕೆಗಳು, ಗೋಗ್ರಹಣ ಮೊದಲಾದ ವಿಷಯಗಳಲ್ಲಿ ವಿವಾದದಿಂದ ಯುದ್ಧವು ಪ್ರಾಪ್ತವಾದಾಗ, ಸ್ತ್ರೀಯರಿಗೂ ಬ್ರಾಹ್ಮಣರಿಗೂ ವಿಪತ್ತು ಒದಗಿದಾಗ, ಶಸ್ತ್ರವನ್ನು ಹಿಡಿದು ಶತ್ರುಗಳನ್ನು ಹೊಡೆದರೂ ಕೊಂದರೂ ಪಾಪ ತಟ್ಟುವುದಿಲ್ಲ.

**ಗುರುಂ ವಾ ಬಾಲವೃದ್ಧೌ ವಾ ಬ್ರಾಹ್ಮಣಂ ವಾ ಬಹುಶ್ರುತಮ್ ।**
**ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ॥** ೮೩

ನಿರಾಯುಧನೂ ನಿರಪರಾಧಿಯೂ ಆದ ತನ್ನನ್ನು ಕೊಲ್ಲಲು ಶಸ್ತ್ರವನ್ನು ಹಿಡಿದುಬಂದ (ಆತತಾಯಿಯಾದ) ಗುರುವನ್ನೇ ಆಗಲಿ, ಹುಡುಗ ಅಥವಾ ಮುದುಕನನ್ನೇ ಆಗಲಿ, ವೇದವಿದ್ಯಾಪಾರಂಗತನಾದ ಬ್ರಾಹ್ಮಣನನ್ನೇ ಆಗಲಿ ಯಾವ ವಿಚಾರವನ್ನೂ ಮಾಡದೆಯೇ ಕೊಂದುಬಿಡಬಹುದು.

(ಇದು ಕೈಮುತ್ಯನ್ಯಾಯ. ಸಾಮಾನ್ಯವಾಗಿ ಅಪಾಯಕ್ಕೆ ಗುರಿಯಾಗಲೇಬಾರದ ಗುರು, ಬಾಲ, ವೃದ್ಧ, ಶ್ರೋತ್ರಿಯರನ್ನೇ ಆತ್ಮರಕ್ಷಣೆಗಾಗಿ ಶಸ್ತ್ರ ಹಿಡಿದು ಎದುರಿಸಬಹುದೆಂದು ಹೇಳಿದರೆ, ಉಳಿದ ಸಾಮಾನ್ಯಜನರು ಅಂತಹ ಸಮಯದಲ್ಲಿ ಸರ್ವಥಾ ವಧಾರ್ಹರು ಎಂದು ಹೇಳಿದಹಾಗಾಯಿತು. ಬೆಂಕಿಯಿಟ್ಟು ಸುಡಲು ಬರುವವನು, ವಿಷಹಾಕಿ ಕೊಲ್ಲಬಯಸುವವನು, ನಿಶ್ಶಸ್ತ್ರನಾದವನನ್ನು ಶಸ್ತ್ರದಿಂದ ಹೊಡೆಯಲು ಮೇಲೆಬೀಳುವವನು—ಇಂಥ ಘಾತುಕರನ್ನು ಆತತಾಯಿಗಳೆಂದು ಕರೆಯುತ್ತಾರೆ. "ಆತತಾಯಿಗಳಾದ ಕೌರವರನ್ನು ಕೊಂದರೆ ನಿನಗೆ ಪಾಪವಿಲ್ಲ"ವೆಂದು ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಉಪದೇಶಮಾಡಿದ್ದಾನೆ.)

**ಪರದಾರಾಭಿಮರ್ಶೇಷು ಪ್ರವೃತ್ತಾನ್ನ್ನೄನ್ಮಹೀಪತಿಃ ।**
**ಉದ್ವೇಜನಕರೈರ್ದಂಡೈಶ್ಛಿನ್ನಯಿತ್ವಾ ಪ್ರವಾಸಯೇತ್ ॥** ೮೪

ರಾಜನು ಪರದಾರಾಸಕ್ತರಾದವರನ್ನು ಕಿವಿ ಮೂಗುಗಳನ್ನು ಕತ್ತರಿಸುವುದೇ ಮೊದಲಾದ ಉದ್ವೇಗಕರಗಳಾದ ದಂಡಗಳನ್ನು ವಿಧಿಸಿ, ಅವರನ್ನು ದೇಶದಿಂದಲೇ ಓಡಿಸಿಬಿಡಬೇಕು.

**ಉಪಚಾರಕ್ರಿಯಾ ಕೇಳಿಃ ಸ್ಪರ್ಶೋ ಭೂಷಣವಾಸಸಾಮ್ ।**
**ಸಹ ಖಟ್ವಾಸನಂ ಚೈವ ಸರ್ವಂ ಸಂಗ್ರಹಣಂ ಸ್ಮೃತಮ್ ॥** ೮೫

ಹೂ, ಗಂಧ ಮೊದಲಾದುವನ್ನು ಪರಸ್ತ್ರೀಗೆ ಕೊಟ್ಟು ಉಪಚಾರ ಮಾಡುವುದೂ, ಅವರೊಡನೆ ನಗೆಯಾಟ, ಆಲಿಂಗನಾದಿಗಳೂ, ಅವರ ಒಡವೆ ಬಟ್ಟೆಗಳನ್ನು ಬೇಕೆಂದೇ ಮುಟ್ಟುವುದೂ, ಅವರೊಡನೆ ಒಂದೇ ಮಂಚದಮೇಲೆ ಕೂಡುವುದೂ ಇವನ್ನೆಲ್ಲ ಸಂಗ್ರಹಣ ಅಥವಾ ಸ್ತ್ರೀ ಸಂಭೋಗಾಭಿಲಾಷೆ ಎನ್ನುತ್ತಾರೆ.

**ಭಿಕ್ಷುಕಾ ಬಂದಿನಶ್ಚೈವ ದೀಕ್ಷಿತಾಃ ಕಾರವಸ್ತಥಾ ।**
**ಸಂಭಾಷಣಂ ಸಹ ಸ್ತ್ರೀಭಿಃ ಕುರ್ಯುರಪ್ರತಿವಾರಿತಾಃ ॥** ೮೬

ಭಿಕ್ಷುಕರು, ಹೊಗಳುಭಟ್ಟರು, ಯಜ್ಞಮಾಡುವುದಕ್ಕೆ ದೀಕ್ಷೆವಹಿಸಿದವರು, ಅಡಿಗೆಯವರು, ಹೂವಾಡಿಗರು ಮುಂತಾದ ಕೆಲಸಗಾರರು, ಇಂತಹವರು ತಮ್ಮ ಕಾರ್ಯನಿರ್ವಾಹಣೆಗಾಗಿ ತಡೆಯಿಲ್ಲದೆ ಹೆಂಗಸರೊಡನೆ ಮಾತನಾಡಬಹುದು.

**ಯೋಽಕಾಮಾಂ ದೂಷಯೇತ್ಕನ್ಯಾಂ ಸ ಸದ್ಯೋ ವಧಮರ್ಹತಿ ।**
**ಸಕಾಮಾಂ ದೂಷಯಂಸ್ತುಲ್ಯೋ ನ ವಧಂ ಪ್ರಾಪ್ನುಯಾನ್ನರಃ ॥**

ತನ್ನನ್ನು ಪ್ರೀತಿಸದಿರುವ ಸಮಾನಜಾತಿಯ ಕನ್ಯೆಯನ್ನು ಕೆಡಿಸುವವನು ಅಂಗಚ್ಛೇದಾದಿ ದಂಡಗಳಿಗೆ ಅರ್ಹನಾಗುತ್ತಾನೆ; ಆದರೆ ಕನ್ಯೆಯು ಅವನನ್ನು ಪ್ರೀತಿಸಿದರೆ, ಅವಳ ಸಂಗದಿಂದ ಅವನು ವಧಾರ್ಹನಾಗುವುದಿಲ್ಲ.

**ಕನ್ಯಾಂ ಭಜಂತೀಮುತ್ಕೃಷ್ಟಂ ನ ಕಿಂಚಿದಪಿ ದಾಪಯೇತ್ ।**
**ಜಘನ್ಯಂ ಸೇವಮಾನಾಂ ತು ಸಂಯತಾಂ ವಾಸಯೇದ್ಗೃಹೇ ॥** ೮೮

ಸಂಭೋಗದಲ್ಲಿ ತನಗಿಂತ ಉತ್ತಮನಾದವನನ್ನು ಸೇವಿಸುವ ಕನ್ಯೆಯನ್ನು ಏನೂ ಮಾಡಬಾರದು. ತನಗಿಂತ ಕೀಳು ಪುರುಷನನ್ನು ಕೂಡುವ ಕನ್ಯೆಯನ್ನು (ಅವಳ ಕಾಮನಿವೃತ್ತಿಯಾಗುವಂತೆ) ಮನೆಯಲ್ಲಿ ತಡೆದು ಹಿಡಿದಿಡಬೇಕು.

**ಉತ್ತಮಾಂ ಸೇವಮಾನಸ್ತು ಜಘನ್ಯೋ ವಧಮರ್ಹತಿ ।**
**ಶುಲ್ಕಂ ದದ್ಯಾತ್ಸೇವಮಾನಃ ಸಮಾಮಿಚ್ಛೇತ್ಪಿತಾ ಯದಿ ॥** ೮೯

ತನಗಿಂತ ಉತ್ತಮ ಸ್ತ್ರೀಯನ್ನು, ಅವಳು ಇಷ್ಟಪಟ್ಟರೂ, ಕೂಡುವ ಪುರುಷನಿಗೆ ಅಂಗಚ್ಛೇದಾದಿ ವಧೆಯನ್ನು ವಿಧಿಸಬೇಕು. ಅವನು ಸಮಾನ ಜಾತಿಯವಳಲ್ಲಿ ಅನುರಕ್ತನಾಗಿದ್ದಾಗ, ಅವಳ ತಂದೆಯು ಇಷ್ಟಪಟ್ಟರೆ, ಆತನಿಗೆ ಶುಲ್ಕವನ್ನು ಕೊಟ್ಟು ಕನ್ಯೆಯನ್ನು ಮದುವೆಮಾಡಿಕೊಳ್ಳಬಹುದು.

**ಯಸ್ಯ ಸ್ತೇನಃ ಪುರೇ ನಾಸ್ತಿ ನಾನ್ಯಸ್ತ್ರೀಗೋ ನ ದುಷ್ಟವಾಕ್ ।**
**ನ ಸಾಹಸಿಕದಂಡಘ್ನೌ ಸ ರಾಜಾ ಶಕ್ರಲೋಕಭಾಕ್ ॥ ೯೦**

ಯಾವ ರಾಜನ ಆಡಳಿತದಲ್ಲಿರುವ ಊರಿನಲ್ಲಿ ಕಳ್ಳರು, ಪರಸ್ತ್ರೀಗಾಮಿಗಳು, ಕೆಟ್ಟಮಾತುಗಳನ್ನಾಡುವವರು, ದರೋಡೆ ಹಿಂಸೆಗಳನ್ನು ಮಾಡುವ ದುರ್ಜನರು, ಜಿದ್ದಿನಿಂದ ಹೊಡೆದಾಟ ಬೆಳೆಸುವವರು ಆದ ಪ್ರಜೆಗಳಿರುವುದಿಲ್ಲವೋ ಆ ರಾಜನು ಇಂದ್ರಲೋಕಕ್ಕೆ ಹೋಗಲು ಯೋಗ್ಯನಾಗುವನು.

**ವೈಶ್ಯಶೂದ್ರೌ ಪ್ರಯತ್ನೇನ ಸ್ವಾನಿ ಕರ್ಮಾಣಿ ಕಾರಯೇತ್ ।**
**ತೌ ಹಿ ಚ್ಯುತೌ ಸ್ವಕರ್ಮಭ್ಯಃ ಕ್ಷೋಭಯೇತಾಮಿದಂ ಜಗತ್ ॥ ೯೧**

ರಾಜನು ಪ್ರಯತ್ನಪಟ್ಟು ವೈಶ್ಯ ಮತ್ತು ಶೂದ್ರರಿಂದ ಅವರವರ ಕೆಲಸಗಳನ್ನು (ಕೃಷಿ, ವಾಣಿಜ್ಯ ಮತ್ತು ಸೇವೆ) ಮಾಡಿಸಬೇಕು. ಆ ಎರಡು ಜಾತಿಯ ಜನರು ತಮ್ಮ ಕೆಲಸಗಳನ್ನು ಮಾಡದೆಹೋದರೆ, ತಾವು ಅನ್ಯಾಯದಿಂದ ಗಳಿಸಿದ ಹಣದ ಬಲದಿಂದ ಜಗತ್ತನ್ನೇ ಪೀಡಿಸಬಲ್ಲರು.

(ನಾಲ್ಕು ವರ್ಣದವರೂ ಸ್ವವಿಹಿತಕರ್ಮಗಳನ್ನು ಮಾಡುತ್ತಿರಲೇಬೇಕೆಂದು ಅಭಿಪ್ರಾಯ.)

## IX ಅಧ್ಯಾಯ

# ಸ್ತ್ರೀಧರ್ಮ, ದಾಯಭಾಗ

**ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।**
**ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥** ೧

ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಪತಿಯೂ, ಮುಪ್ಪಿನಲ್ಲಿ ಮಕ್ಕಳೂ ಕಾಪಾಡುತ್ತಾರೆ. ಆದುದರಿಂದ ಯಾವ ಸ್ಥಿತಿಯಲ್ಲಿಯೂ ಹೆಂಗಸು ಸ್ವಾತಂತ್ರ್ಯವನ್ನು ವಹಿಸಲು ಅರ್ಹಳಲ್ಲ.

(ಗಂಡ, ಮಕ್ಕಳು ಇಲ್ಲದವರನ್ನು ತಂದೆ, ಸೋದರಮಾವ, ಭಾವ ಮೊದಲಾದ ಸಮೀಪ ಬಂಧುಗಳು ನೋಡಿಕೊಳ್ಳಬೇಕು.)

**ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾವಿಧಮ್ ।**
**ತಸ್ಮಾತ್ಪ್ರಜಾವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ ॥** ೨

ಸ್ತ್ರೀಯು ಎಂತಹ ಪುರುಷನನ್ನು ಕೂಡುತ್ತಾಳೆಯೋ ಅಂತಹ ಮಗನನ್ನೇ ಪಡೆಯುತ್ತಾಳೆ; ಆದುದರಿಂದ ತನ್ನ ಸಂತಾನದ ಶುದ್ಧಿಗೋಸ್ಕರವಾಗಿ ಪತ್ನಿಯನ್ನು ಪ್ರಯತ್ನಪಟ್ಟು ಕಾಪಾಡಿಕೊಳ್ಳಬೇಕು.

**ನ ಕಶ್ಚಿದ್ಯೋಷಿತಃ ಶಕ್ತಃ ಪ್ರಸಹ್ಯ ಪರಿರಕ್ಷಿತುಮ್ ।**
**ಏತೈರುಪಾಯಯೋಗೈಸ್ತು ಶಕ್ಯಾಸ್ತಾಃ ಪರಿರಕ್ಷಿತುಮ್ ॥** ೩
**ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ ।**
**ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹ್ಯಸ್ಯ ಚೇಕ್ಷಣೇ ॥** ೪

ಬಲಾತ್ಕಾರದಿಂದ ಮನೆಯೊಳಗೆ ಹಿಡಿದಿಟ್ಟು ಹೆಂಗಸರನ್ನು ಕಾಪಾಡಲು ಯಾರಿಗೂ ಸಾಧ್ಯವಿಲ್ಲ. ಆದರೆ ಈ ಉಪಾಯಗಳ ಪ್ರಯೋಗಗಳಿಂದ ಅವರನ್ನು ಕಾಪಾಡಲು ಸಾಧ್ಯ. ಹಣವನ್ನು ಕೂಡಿಡುವುದು, ಸರಿಯಾದ ರೀತಿಯಲ್ಲಿ ವೆಚ್ಚಮಾಡುವುದು, ಪಾತ್ರೆಪದಾರ್ಥ, ಬಟ್ಟೆಬರೆಗಳನ್ನು ಶುಚಿಯಾಗಿ ಇಟ್ಟುಕೊಳ್ಳುವುದು, ಪತಿಸೇವೆ ಮೊದಲಾದ ಧರ್ಮಕಾರ್ಯಗಳು, ಅಡಿಗೆ ಕೆಲಸ, ಮನೆಯ ಆವಶ್ಯಕ ವಸ್ತುಗಳಾದ ಹಾಸಿಗೆ, ಹೊದಿಕೆ,

ಪಾತ್ರೆಗಳು, ಮಂಚ, ಆಸನಗಳು ಮೊದಲಾದುವನ್ನು ನೋಡಿಕೊಳ್ಳುವುದು– ಇವುಗಳಿಗೆ ಹೆಂಗಸರನ್ನು ನಿಯಮಿಸಬೇಕು.

**ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಮ್ ।**
**ಸ್ವಪ್ನೋಽನ್ಯಗೇಹವಾಸಶ್ಚ ನಾರೀಸಂದೂಷಣಾನಿ ಷಟ್ ॥** ೫

ಮದ್ಯಪಾನ, ದುಷ್ಟಪುರುಷರ ಸಹವಾಸ, ಪತಿಯಿಂದ ಬೇರೆಯಾಗಿ ವಾಸ, ಅಲ್ಲಿಂದಿಲ್ಲಿಗೆ ತಿರುಗಾಟ, ಅಕಾಲಗಳಲ್ಲಿ ಮಲಗುವುದು, (ಸಮೀಪದ ನೆಂಟರಲ್ಲದ) ಮತ್ತೊಬ್ಬರ ಮನೆಯಲ್ಲಿ ವಾಸ ಇವೆಲ್ಲ ಸ್ತ್ರೀಯರು ವ್ಯಭಿಚಾರದಿಂದ ದೂಷಿತರಾಗಲು ಕಾರಣಗಳು

**ನೈತಾ ರೂಪಂ ಪರೀಕ್ಷಂತೇ ನಾಸಾಂ ವಯಸಿ ಸಂಸ್ಥಿತಿಃ ।**
**ಸುರೂಪಂ ವಾ ವಿರೂಪಂ ವಾ ಪುಮಾನಿತ್ಯೇವ ಭುಂಜತೇ ॥** ೬

ಇಂತಹ ಸ್ತ್ರೀಯರು ಪುರುಷನು ಸುಂದರನೊ ಅಲ್ಲವೊ ಎಂಬುದನ್ನು ಪರೀಕ್ಷಿಸುವುದಿಲ್ಲ; ಅವನ ವಯಸ್ಸನ್ನೂ ಗಮನಿಸುವುದಿಲ್ಲ. ಸುರೂಪಿಯಾಗಲಿ, ಕುರೂಪಿಯಾಗಲಿ ಅವನು ಪುರುಷಮಾತ್ರನೆಂದೇ ತಿಳಿದು ಅವನನ್ನು ಸೇವಿಸುತ್ತಾರೆ

**ನಾಸ್ತಿ ಸ್ತ್ರೀಣಾಂ ಕ್ರಿಯಾ ಮಂತ್ರೈರಿತಿ ಧರ್ಮೇ ವ್ಯವಸ್ಥಿತಿಃ ।**
**ನಿರಿಂದ್ರಿಯಾ ಹ್ಯಮಂತ್ರಾಶ್ಚ ಸ್ತ್ರಿಯೋಽನೃತಮಿತಿ ಸ್ಥಿತಿಃ ॥** ೭

ಜಾತಕರ್ಮಾದಿ ಸಂಸ್ಕಾರಗಳು ಮಂತ್ರಪೂರ್ವಕವಾಗಿ ಸ್ತ್ರೀಯರಿಗೆ ಇಲ್ಲವೆಂದು ಧರ್ಮಶಾಸ್ತ್ರದ ನಿಶ್ಚಯ. ಧರ್ಮಪ್ರಮಾಣವಾದ ಶ್ರುತಿಸ್ಮೃತಿಜ್ಞಾನರಹಿತರಾಗಿಯೂ ಮಾಡಿದ ಪಾಪಗಳನ್ನು ಕಳೆದುಕೊಳ್ಳಲು ಸಹಕಾರಿಗಳಾದ ಮಂತ್ರಜಪಾದಿಗಳಿಲ್ಲದವರಾಗಿಯೂ ಇರುವ ಸ್ತ್ರೀಯರು ಅನೃತದಂತೆ ಅಶುಭರೆಂದು ಶಾಸ್ತ್ರನಿರ್ಣಯ.

("ನ ಚೈತದ್ವಿದ್ಮೋ ಬ್ರಾಹ್ಮಣಾಃ ಸ್ಮೋಽಬ್ರಾಹ್ಮಣಾ ವಾ", "ಯನ್ಮೇ ಮಾತಾ ಪ್ರಲುಲುಭೇ ವಿಚರಂತ್ಯಪತಿವ್ರತಾ । ತನ್ಮೇ ರೇತಃ ಪಿತಾ ವೃಕ್ತಾಮಿತ್ಯಸ್ಯೈತನ್ನಿದರ್ಶನಮ್ ॥" ಇತ್ಯಾದಿ ವಾಕ್ಯಗಳಿಂದ ಶ್ರುತಿಸ್ಮೃತಿಗಳಲ್ಲಿಯೂ ಸ್ತ್ರೀಯರ ವ್ಯಭಿಚಾರಶೀಲತ್ವವು ಹೇಳಲ್ಪಟ್ಟಿದೆ. ಆದುದರಿಂದ ಪುರುಷರು ಇವರನ್ನು ಪ್ರಯತ್ನದಿಂದ ಕಾಪಾಡಿಕೊಳ್ಳಬೇಕು.)

**ಯಾದೃಗ್ಗುಣೇನ ಭರ್ತ್ರಾ ಸ್ತ್ರೀ ಸಂಯುಜ್ಯೇತ ಯಥಾವಿಧಿ ।**
**ತಾದೃಗ್ಗುಣಾ ಸಾ ಭವತಿ ಸಮುದ್ರೇಣೇವ ನಿಮ್ನಗಾ ॥** ೮

ಎಂತಹ ಗುಣಗಳುಳ್ಳ ಗಂಡನೊಡನೆ ಸ್ತ್ರೀಯು ವಿವಾಹವಿಧಿಯಿಂದ ಸೇರುತ್ತಾಳೆಯೋ, ಅಂತಹ ಗುಣಗಳನ್ನೇ ಅವಳು ಪಡೆಯುವಳು; ಅವಳು ಸಮುದ್ರದೊಡನೆ ಸೇರಿದ ನದಿಯಂತೆಯೇ (ತನ್ಮಯಳಾಗಿ) ಆಗುತ್ತಾಳೆ.

**ಅಕ್ಷಮಾಲಾ ವಸಿಷ್ಠೇನ ಸಂಯುಕ್ತಾಽಧಮಯೋನಿಜಾ ।**
**ಶಾರಂಗೀ ಮಂದಪಾಲೇನ ಜಗಾಮಾಭ್ಯರ್ಹಣೀಯತಾಮ್ ॥** ೯

ಅಕ್ಷಮಾಲಾ ಎಂಬ ಕೀಳುಜಾತಿಯ ಹೆಂಗಸು ವಸಿಷ್ಠನಿಂದ ಪರಿಣೀತಳಾಗಿ ಪೂಜ್ಯತೆಯನ್ನು ಪಡೆದಳು. ಹಾಗೆಯೇ ಶಾರಂಗಿಯು ಮಂದಪಾಲನ ಸಂಗದಿಂದ ಮನ್ನಣೆಯನ್ನು ಹೊಂದಿದಳು.

**ಏತಾಶ್ಚಾನ್ಯಾಶ್ಚ ಲೋಕೇಽಸ್ಮಿನ್ನಪಕೃಷ್ಟಪ್ರಸೂತಯಃ ।**
**ಉತ್ಕರ್ಷಂ ಯೋಷಿತಃ ಪ್ರಾಪ್ತಾಃ ಸ್ವೈಃ ಸ್ವೈರ್ಭರ್ತೃಗುಣೈಃ ಶುಭೈಃ**

ಇವರಲ್ಲದೆ, ಇನ್ನೂ ಇತರ ಕೀಳುಜಾತಿಯ ಹೆಂಗಸರು ತಮ್ಮ ಗಂಡಂದಿರ ಉತ್ತಮ ಗುಣಗಳಿಂದ ತಾವೂ ಲೋಕದಲ್ಲಿ ಉತ್ಕರ್ಷವನ್ನು ಪಡೆದಿದ್ದಾರೆ.

**ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ।**
**ದಾರಾಧೀನಸ್ತಥಾ ಸ್ವರ್ಗಃ ಪಿತೄಣಾಮಾತ್ಮನಶ್ಚ ಹ ॥** ೧೦

ಸಂತಾನೋತ್ಪತ್ತಿ, ಧರ್ಮಸಾಧನೆ, ತನ್ನ (ಗಂಡನ) ಶುಶ್ರೂಷೆ, ಉತ್ತಮವಾದ ಸುಖ ಮತ್ತು ಪಿತೃಗಳಿಗೂ ತನಗೂ ಮುಂದೆ ಸ್ವರ್ಗಪ್ರಾಪ್ತಿ, ಇವೆಲ್ಲವೂ ಹೆಂಡತಿಯಿಂದ ಆಗಬೇಕಾದವು.

**ಅನ್ಯದುಪ್ತಂ ಜಾತಮನ್ಯದಿತ್ಯೇತನ್ನೋಪಪದ್ಯತೇ ।**
**ಉಪ್ಯತೇ ಯದ್ಧಿ ಯದ್ಬೀಜಂ ತತ್ತದೇವ ಪ್ರರೋಹತಿ ॥** ೧೧

ಭೂಮಿಯಲ್ಲಿ ಹಾಕಿದ ಬೀಜವೇ ಒಂದು, ಬೆಳೆದ ಪೈರೇ ಮತ್ತೊಂದು ಎಂಬುದು ಯುಕ್ತವಲ್ಲ. (ರಾಗಿ ಹಾಕಿದರೆ ಬತ್ತ ಬೆಳೆದೀತೇ?) ಯಾವ ಬೀಜವು ನೆಡಲ್ಪಡುವುದೋ ಅದರದೇ ಬೆಳೆಯಾಗುವುದು.

ತಸ್ಮಾತ್ಪ್ರಜ್ಞೇನ ವಿನೀತೇನ ಜ್ಞಾನವಿಜ್ಞಾನವೇದಿನಾ ।
ಆಯುಷ್ಕಾಮೇನ ವಪ್ತವ್ಯಂ ನ ಜಾತು ಪರಯೋಷಿತಿ ॥ ೧೩

ಆದುದರಿಂದ, ವೇದಶಾಸ್ತ್ರಗಳನ್ನು ತಿಳಿದು ಬುದ್ಧಿವಂತನಾಗಿ ಆಯುಷ್ಕಾಮನಾದವನು ಪರಸ್ತ್ರೀಯರಲ್ಲಿ ಮಕ್ಕಳನ್ನು ಪಡೆಯಬಾರದು.

ಯೇಽಕ್ಷೇತ್ರಿಣೋ ಬೀಜವಂತಃ ಪರಕ್ಷೇತ್ರಪ್ರವಾಪಿಣಃ ।
ತೇ ವೈ ಸಸ್ಯಸ್ಯ ಜಾತಸ್ಯ ನ ಲಭಂತೇ ಫಲಂ ಕ್ವಚಿತ್ ॥ ೧೪

ತಮ್ಮ ಸ್ವಂತ ಹೊಲವಿಲ್ಲದೆ, ಬೀಜವನ್ನು ಮಾತ್ರ ಪಡೆದಿರುವವರು ಮತ್ತೊಬ್ಬರ ಹೊಲದಲ್ಲಿ ಬೀಜವನ್ನು ನೆಟ್ಟರೆ, ಬೆಳೆದ ಪೈರಿನಿಂದ ಎಲ್ಲಿಯೂ ಅವರು ಫಲವನ್ನು ಪಡೆಯಲಾರರು.

ಯದನ್ಯಗೋಷು ವೃಷಭೋ ವತ್ಸಾನಾಂ ಜನಯೇಚ್ಛತಮ್ ।
ಗೋಮಿನಾಮೇವ ತೇ ವತ್ಸಾ ಮೋಘಂ ಸ್ಕಂದಿತಮಾರ್ಷಭಮ್ ॥

ಒಂದು ಗೂಳಿಯು ಬೇರೆ ಬೇರೆ ಹಸುಗಳಲ್ಲಿ ನೂರಾರು ಕರುಗಳನ್ನು ಹುಟ್ಟಿಸಿದರೆ, ಆ ಕರುಗಳು ಹಸುಗಳ ಒಡೆಯರವೇ ಆಗುತ್ತವೆ. ಗೂಳಿಯ ವೀರ್ಯವು ನಷ್ಟವಾಗುವುದರಿಂದ, ಅದರ ಒಡೆಯನಿಗೆ ಏನೂ ಪ್ರಯೋಜನ ವಾಗುವುದಿಲ್ಲ.

ಭ್ರಾತುರ್ಜ್ಯೇಷ್ಠಸ್ಯ ಭಾರ್ಯಾ ಯಾ ಗುರುಪತ್ನ್ಯನುಜಸ್ಯ ಸಾ ।
ಯವೀಯಸಸ್ತು ಯಾ ಭಾರ್ಯಾ ಸ್ನುಷಾ ಜ್ಯೇಷ್ಠಸ್ಯ ಸಾ ಸ್ಮೃತಾ॥

ಅಣ್ಣನ ಹೆಂಡತಿಯು ತಮ್ಮನಿಗೆ ಗುರುಪತ್ನಿಯಂತೆ ಆಗುವಳು; ತಮ್ಮನ ಹೆಂಡತಿಯು ಅಣ್ಣನಿಗೆ ಸೊಸೆಯಾಗುವಳು.

ದೇವರಾದ್ವಾ ಸಪಿಂಡಾದ್ವಾ ಸ್ತ್ರಿಯಾ ಸಮ್ಯಙ್ನಿಯುಕ್ತಯಾ ।
ಪ್ರಜೇಪ್ಸಿತಾಧಿಗಂತವ್ಯಾ ಸಂತಾನಸ್ಯ ಪರಿಕ್ಷಯೇ ॥ ೧೭

ಮಕ್ಕಳಿಲ್ಲದವಳು ಸಂತಾನ ನಿಂತುಹೋದಾಗ, ಗಂಡ ಅಥವಾ ಹಿರಿಯರ ಅಪ್ಪಣೆಯನ್ನು ಪಡೆದು, ಭಾವ (ಗಂಡನ ಅಣ್ಣ) ಅಥವಾ (ಆತನಿಲ್ಲದಿದ್ದರೆ) ಸಪಿಂಡನಾದ ಬಂಧುವಿನಿಂದ ತನಗೆ ಇಷ್ಟವಾದ ಸಂತಾನ ವನ್ನು ಪಡೆಯಬಹುದು.

(‘ಇಷ್ಟವಾದ’ ಎಂದು ಹೇಳಿರುವುದರಿಂದ, ಹುಟ್ಟಿದ ಮಗುವು ತನ್ನ ಕಾರ್ಯಸಾಧನೆಗೆ ಸಮರ್ಥವಾಗದಿದ್ದಲ್ಲಿ, ಮತ್ತೊಮ್ಮೆ ಪ್ರಯತ್ನಮಾಡ ಬಹುದೆಂದು ಸೂಚಿತವಾಗುವುದು. ವೇದವ್ಯಾಸನಿಂದ ತನ್ನ ಸೊಸೆಯು ಪಡೆಯುವ ಮಗನು ಸಮರ್ಪಕವಾಗಿರುವುದಿಲ್ಲವೆಂದು ತಿಳಿದ ಸತ್ಯವತಿಯು ಅವಳನ್ನು ಮತ್ತೆ ವೇದವ್ಯಾಸನ ಬಳಿಗೆ ಹೋಗುವಂತೆ ಪ್ರೇರಣೆಮಾಡಿದಳೆಂದು ಭಾರತದ ಕಥೆ.)

**ವಿಧವಾಯಾಂ ನಿಯುಕ್ತಸ್ತು ಘೃತಾಕ್ತೋ ವಾಗ್ಯತೋ ನಿಶಿ ।**
**ಏಕಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ ॥ ೧೮**

ವಿಧವೆಯಲ್ಲಿ (ಹಾಗೂ ಪುತ್ರೋತ್ಪಾದನೆಮಾಡಲು ಅಸಮರ್ಥನಾದವನ ಹೆಂಡತಿಯಲ್ಲಿ) ಈ ನಿಯೋಗದಿಂದ ಸಂಭೋಗಮಾಡುವವನು ಮೈಗೆಲ್ಲ ತುಪ್ಪವನ್ನು ಸವರಿಕೊಂಡು, ರಾತ್ರಿಯಲ್ಲಿ ಮಾತ್ರ ಅವಳ ಸಂಗವನ್ನು ಹೊಂದಿ, ಒಬ್ಬನೇ ಮಗನನ್ನು ಪಡೆಯಬೇಕು; ಎರಡನೆಯ ಮಗನನ್ನು ಪಡೆಯಲೇಬಾರದು.

**ನೋದ್ವಾಹಿಕೇಷು ಮಂತ್ರೇಷು ನಿಯೋಗಃ ಕೀರ್ತ್ಯತೇ ಕ್ವಚಿತ್ ।**
**ನ ವಿವಾಹವಿಧಾವುಕ್ತಂ ವಿಧವಾವೇದನಂ ಪುನಃ ॥ ೧೯**

ವಿವಾಹಕ್ಕಾಗಿ ಬಳಸುವ ಮಂತ್ರಗಳಲ್ಲಿ ಎಲ್ಲಿಯೂ ನಿಯೋಗದ ವಿಷಯವನ್ನೇ ಹೇಳಿಲ್ಲ; ಹಾಗೂ ವಿವಾಹಕ್ಕೆ ವಿಧಾಯಕವಾದ ಶಾಸ್ತ್ರಗಳಲ್ಲಿ ವಿಧವೆಗೆ ಮತ್ತೊಬ್ಬನೊಡನೆ ಮದುವೆಯ ವಿಷಯವನ್ನೂ ಹೇಳಿಲ್ಲ.

**ಅಯಂ ದ್ವಿಜೈರ್ಹಿ ವಿದ್ವದ್ಭಿಃ ಪಶುಧರ್ಮೋ ವಿಗರ್ಹಿತಃ ।**
**ಮನುಷ್ಯಾಣಾಮಪಿ ಪ್ರೋಕ್ತೋ ವೇನೇ ರಾಜ್ಯಂ ಪ್ರಶಾಸತಿ ॥ ೨೦**

ಈ ನಿಯೋಗವು ಪಶುಧರ್ಮವೆಂದು ವಿದ್ವಾಂಸರಾದ, ದ್ವಿಜರಿಂದ ನಿಂದಿತವಾಗಿದೆ. ವೇನನೆಂಬ ದುಷ್ಟರಾಜನ ಕಾಲದಲ್ಲಿ ಇದನ್ನು ಮನುಷ್ಯರಿಗೂ ಅನ್ವಯಿಸುವಂತೆ ಹೇಳಲಾಯಿತು.

(ಅಂದರೆ, ಇದು ಅತಿಪ್ರಾಚೀನ ಪರಂಪರೆಯಿಂದ ಬಂದುದಲ್ಲ; ಈಗ ನಡೆಸಿಕೊಂಡು ಬರಲು ಅರ್ಹವೂ ಅಲ್ಲ.)

**ತತಃ ಪ್ರಭೃತಿ ಯೋ ಮೋಹಾತ್ಪ್ರಮೀತಪತಿಕಾಂ ಸ್ತ್ರಿಯಮ್ ।**
**ನಿಯೋಜಯತ್ಯಪತ್ಯಾರ್ಥಂ ತಂ ವಿಗರ್ಹಂತಿ ಸಾಧವಃ ॥ ೨೧**

ಆ ವೇನನ ಕಾಲದಿಂದ ಈಚೆಗೆ, ಶಾಸ್ತ್ರಾರ್ಥವನ್ನು ತಿಳಿಯದೆಯೇ ಪುತ್ರೋತ್ಪತ್ತಿಗಾಗಿ ಯಾವನು ವಿಧವೆಯ ನಿಯೋಗಕ್ಕೆ ಅನುಮತಿ ಕೊಡುತ್ತಾನೆಯೋ ಅವನನ್ನು ಸಜ್ಜನರು ನಿಂದಿಸುತ್ತಾರೆ.

**ವಿಧಿವತ್ಪ್ರತಿಗೃಹ್ಯಾಪಿ ತ್ಯಜೇತ್ಕನ್ಯಾಂ ವಿಗರ್ಹಿತಾಮ್ ।**
**ವ್ಯಾಧಿತಾಂ ವಿಪ್ರದುಷ್ಟಾಂ ವಾ ಛದ್ಮನಾ ಚೋಪಪಾದಿತಾಮ್ ॥ ೨೨**

ಕನ್ಯೆಯು ಸ್ಪಷ್ಟವಾದ ವೈಧವ್ಯಾದಿ ದುಷ್ಟಲಕ್ಷಣಗಳಿಂದ ಕೂಡಿದ್ದರೆ, ಕೆಟ್ಟರೋಗಗಳಿಂದ ಪೀಡಿತಳಾಗಿದ್ದರೆ, ಕ್ಷತಯೋನಿಯಾಗಿ ದೋಷಯುಕ್ತಳಾಗಿದ್ದರೆ, ಅಥವಾ ಮೊದಲೇ ತಿಳಿಸದೆ ಇದ್ದ ಅಂಗವೈಕಲ್ಯಾದಿಗಳಿದ್ದು ಮೋಸದಿಂದ ಪ್ರದತ್ತಳಾಗಿದ್ದರೆ, ಅಂಥವಳನ್ನು ಧಾರೆ ಎರೆಸಿಕೊಂಡು ಸ್ವೀಕರಿಸಿದಮೇಲೆಯೂ ಬಿಟ್ಟುಬಿಡಬಹುದು.

(ಸಪ್ತಪದಿಯು ಮುಗಿಯುವುದಕ್ಕೆ ಮೊದಲೇ ಹೀಗೆ ಬಿಡಬಹುದು. ಆಮೇಲೆ ಬಿಟ್ಟರೂ ತಪ್ಪಾಗುವುದಿಲ್ಲವೆಂದು ಹೇಳಿದೆಯಲ್ಲದೆ, ಆ ಕನ್ಯೆಯನ್ನು ಅಗತ್ಯವಾಗಿ ಬಿಟ್ಟೇಬಿಡಬೇಕೆಂದು ತಾತ್ಪರ್ಯವಲ್ಲ.)

**ವಿಧಾಯ ವೃತ್ತಿಂ ಭಾರ್ಯಾಯಾಃ ಪ್ರವಸೇತ್ಕಾರ್ಯವಾನ್ನರಃ ।**
**ಅವೃತ್ತಿಕರ್ಶಿತಾ ಹಿ ಸ್ತ್ರೀ ಪ್ರದುಷ್ಯೇತ್ ಸ್ಥಿತಿಮತ್ಯಪಿ ॥ ೨೩**

ಕಾರ್ಯಾರ್ಥಿಯಾಗಿ ಬಹುದಿವಸಗಳವರೆಗೆ ದೂರಪ್ರಯಾಣ ಮಾಡಬೇಕಾಗಿ ಬಂದವನು ತನ್ನ ಹೆಂಡತಿಗೆ ಆ ಕಾಲದಲ್ಲಿ ಸಾಕಾಗುವಷ್ಟು ಅನ್ನವಸ್ತ್ರಗಳಿಗೆ ಸೌಕರ್ಯವನ್ನು ಒದಗಿಸಿ ಹೊರಡಬೇಕು. ಆಹಾರಾದಿಗಳ ಅಭಾವದಿಂದ ಪೀಡಿತಳಾದರೆ ಶೀಲವತಿಯಾದ ಹೆಂಗಸೂ ಕೆಡಬಹುದು.

**ಪ್ರೋಷಿತೋ ಧರ್ಮಕಾರ್ಯಾರ್ಥಂ ಪ್ರತೀಕ್ಷ್ಯೋಷ್ಟೌ ನರಃ ಸಮಾಃ**
**ವಿದ್ಯಾರ್ಥಂ ಷಡ್ಯಶೋರ್ಥಂ ವಾ ಕಾಮಾರ್ಥಂ ತ್ರೀಂಸ್ತು ವತ್ಸರಾನ್**

ಗುರುದಕ್ಷಿಣೆಯನ್ನು ಕೊಡುವುದಕ್ಕಾಗಿ ಅಥವಾ ಯಾವುದಾದರೊಂದು ಧರ್ಮಕಾರ್ಯಕ್ಕಾಗಿ ಧನಸಂಪಾದನೆ ಮಾಡಲು ಪರದೇಶಕ್ಕೆ ಹೋದ

ಗಂಡನ ಬರುವಿಕೆಗಾಗಿ, ಸ್ತ್ರೀಯು ಎಂಟು ವರ್ಷಗಳವರೆಗೆ ನಿರೀಕ್ಷಿಸುತ್ತಿರಬೇಕು. (ಅನಂತರ ಅವನೊಡನೆ ಸೇರಿಕೊಳ್ಳಲು ಅಲ್ಲಿಗೇ ಹೋಗಬಹುದು.) ವಿದ್ಯಾರ್ಜನೆಗಾಗಿ ಅಥವಾ ತನ್ನಲ್ಲಿರುವ ವಿದ್ಯೆಯಿಂದ ಯಶಸ್ಸನ್ನು ಪಡೆಯುವುದಕ್ಕಾಗಿ ಹೋದ ಪತಿಗಾಗಿ ಆರು ವರ್ಷಗಳವರೆಗೆ ಕಾಯುತ್ತಿರಬೇಕು. ಮತ್ತೊಬ್ಬ ಹೆಂಗಸಿನೊಡನೆ ಸುಖಪಡುವುದಕ್ಕೆಂದು ಕಾಮದಿಂದ ಹೋದವನಿಗಾಗಿ ಮೂರು ವರ್ಷಗಳವರೆಗೆ ಕಾಯಬೇಕು.

**ಸಂವತ್ಸರಂ ಪ್ರತೀಕ್ಷೇತ ದ್ವಿಷಂತೀಂ ಯೋಷಿತಂ ಪತಿಃ ।**
**ಊರ್ಧ್ವಂ ಸಂವತ್ಸರಾತ್ತ್ವೇನಾಂ ದಾಯಂ ಹೃತ್ವಾ ನ ಸಂವಸೇತ್ ॥**

ತನ್ನಲ್ಲಿ ದ್ವೇಷ ಹೊಂದಿರುವ ಪತ್ನಿಗಾಗಿ ಒಂದು ವರ್ಷಕಾಲ ನಿರೀಕ್ಷಿಸಬೇಕು. ಅಷ್ಟುಕಾಲದೊಳಗೆ ಅವಳ ದ್ವೇಷವು ಕಡಿಮೆಯಾಗದಿದ್ದರೆ, ಸಂವತ್ಸರ ಕಳೆದಮೇಲೆ ತಾನು ಕೊಟ್ಟಿರುವ ನಗನಾಣ್ಯಗಳನ್ನು ಕಿತ್ತುಕೊಂಡು, ಅವಳ ಸಂಪರ್ಕವನ್ನು ಬಿಡಬೇಕು. (ಆದರೆ ಅವಳಿಗೆ ಊಟ, ಬಟ್ಟೆಗಳನ್ನು ಕೊಡಬೇಕು.)

**ಉನ್ಮತ್ತಂ ಪತಿತಂ ಕ್ಲೀಬಮಬೀಜಂ ಪಾಪರೋಗಿಣಮ್ ।**
**ನ ತ್ಯಾಗೋಽಸ್ತಿ ದ್ವಿಷಂತ್ಯಾಶ್ಚ ನ ಚ ದಾಯಾಪವರ್ತನಮ್ ॥ ೨೬**

ಹುಚ್ಚನು, ನೀಚಕಾರ್ಯಗಳಿಂದ ಜಾತಿಭ್ರಷ್ಟನು, ನಪುಂಸಕನು, ಪ್ರಜೋತ್ಪತ್ತಿ ಸಾಮರ್ಥ್ಯವಿಲ್ಲದವನು ಅಥವಾ ಕುಷ್ಠಾದಿ ಪ್ರಬಲರೋಗಗಳಿಂದ ಪೀಡಿತನಾದವನು, ಇಂಥ ಪತಿಯನ್ನು ದ್ವೇಷಿಸಿ ಉಪಚರಿಸದ ಪತ್ನಿಯನ್ನು ಬಿಡಕೂಡದು ಮತ್ತು ಅವಳಿಗೆ ಕೊಟ್ಟಿರುವ ಧನವನ್ನು ಕಸಿದುಕೊಳ್ಳಬಾರದು.

**ಮದ್ಯಪಾಽಸಾಧುವೃತ್ತಾ ಚ ಪ್ರತಿಕೂಲಾ ಚ ಯಾ ಭವೇತ್ ।**
**ವ್ಯಾಧಿತಾ ವಾಽಧಿವೇತ್ತವ್ಯಾ ಹಿಂಸ್ರಾರ್ಥಘ್ನೀ ಚ ಸರ್ವದಾ ॥ ೨೭**

ನಿಷಿದ್ಧವಾದ ಮದ್ಯಪಾನವನ್ನು ಮಾಡುವವಳು, ಅಸಾಧುವಾದ ನಡತೆಯುಳ್ಳವಳು, ಪ್ರತಿಕೂಲವಾದ ಆಚರಣೆಯುಳ್ಳವಳು, ಪ್ರಬಲರೋಗಗಳಿಂದ ಪೀಡಿತಳು, ಸೇವಕಾದಿಗಳಲ್ಲಿ ಕ್ರೂರ ವ್ಯಾಪಾರವುಳ್ಳವಳು, ಅಥವಾ

ಯಾವಾಗಲೂ ಅತಿವ್ಯಯ ನಿರತಳು, ಇಂತಹ ಹೆಂಡತಿಯಿದ್ದಾಗ, ಮತ್ತೊಬ್ಬಳನ್ನು ಮದುವೆಯಾಗಬಹುದು.

**ವಂಧ್ಯಾಷ್ಟಮೇಽಧಿವೇದ್ಯಾಬ್ದೇ ದಶಮೇ ತು ಮೃತಪ್ರಜಾ ।**
**ಏಕಾದಶೇ ಸ್ತ್ರೀಜನನೀ ಸದ್ಯಶ್ಚಾಪ್ರಿಯವಾದಿನೀ ॥** ೨೮

ಎಂಟು ವರ್ಷ ಸಂಸಾರಮಾಡಿಯೂ ಮಕ್ಕಳನ್ನು ಪಡೆಯದೆ ಬಂಜೆಯಾದ ಪತ್ನಿಯು ಇರುವಾಗಲೇ ಮತ್ತೊಬ್ಬಳನ್ನು ಮದುವೆಯಾಗಬಹುದು. ಹೀಗೆಯೇ ಹೆಂಡತಿಯಲ್ಲಿ ಹುಟ್ಟಿದ ಮಕ್ಕಳು ಹುಟ್ಟಿ ಹುಟ್ಟಿ ಸಾಯುತ್ತಿದ್ದರೆ ಹತ್ತನೆಯ ವರ್ಷದಲ್ಲಿಯೂ, ಅವಳು ಬರೇ ಹೆಣ್ಣುಮಕ್ಕಳನ್ನೇ ಹಡೆಯುತ್ತಿದ್ದರೆ ಹನ್ನೊಂದನೆಯ ವರ್ಷದಲ್ಲಿಯೂ ಬೇರೆ ಮದುವೆ ಮಾಡಿಕೊಳ್ಳಬಹುದು. ಹೆಂಡತಿಯು ಅಪ್ರಿಯವಾದಿನಿಯಾಗಿದ್ದರೆ (ಕಟುವಾದ ಮಾತುಗಳನ್ನೇ ಆಡುತ್ತಿದ್ದರೆ), ಆ ಕೂಡಲೆ ಮತ್ತೊಂದು ಮದುವೆಯನ್ನು ಮಾಡಿಕೊಳ್ಳಬಹುದು.

(ಅಪ್ರಿಯವನ್ನು ನುಡಿಯುತ್ತಿರುವ ಹೆಂಡತಿಯು ಅಪುತ್ರವತಿಯಾಗಿದ್ದರೆ ಮಾತ್ರ ಕೂಡಲೆ ಮತ್ತೆ ಮದುವೆಯ ಮಾತು; ಪುತ್ರರಿದ್ದರೆ ಕೂಡದು, ಎಂದು ಆಪಸ್ತಂಬರ ಮತ.)

**ಯಾ ರೋಗಿಣೀ ಸ್ಯಾತ್ತು ಹಿತಾ ಸಂಪನ್ನಾ ಚೈವ ಶೀಲತಃ ।**
**ಸಾನುಜ್ಞಾಪ್ಯಾಧಿವೇತ್ತವ್ಯಾ ನಾವಮಾನ್ಯಾ ಹಿ ಕರ್ಹಿಚಿತ್ ॥** ೨೯

ಪತ್ನಿಯು ರೋಗಿಯಾಗಿದ್ದು, ಪತಿಗೆ ಅನುಕೂಲ ಮನೋವೃತ್ತಿಯುಳ್ಳವಳಾಗಿ ಶೀಲಸಂಪನ್ನಳಾಗಿದ್ದರೆ, ಅವಳ ಅನುಮತಿಯನ್ನು ಪಡೆದೇ ಮತ್ತೆ ಮದುವೆಯಾಗಬಹುದು; ಅಂತಹ ಪತ್ನಿಯನ್ನು ಯಾವಾಗಲೂ ಅವಮಾನಪಡಿಸಬಾರದು.

**ಅಧಿವಿನ್ನಾ ತು ಯಾ ನಾರೀ ನಿರ್ಗಚ್ಛೇದ್ರುಷಿತಾ ಗೃಹಾತ್ ।**
**ಸಾ ಸದ್ಯಃ ಸಂನಿರೋದ್ಧವ್ಯಾ ತ್ಯಾಜ್ಯಾ ವಾ ಕುಲಸಂನಿಧೌ ॥** ೩೦

ಪತಿಯು ಮತ್ತೆ ಮದುವೆಯಾದುದರಿಂದ ಕೋಪಗೊಂಡು, ಪತ್ನಿಯು ಮನೆಯಿಂದ ಹೊರಗೆ ಹೊರಡುವವಳಾದರೆ, ಅವಳನ್ನು ಮನೆಯಲ್ಲಿಯೇ

*

ತಡೆದು ಹಿಡಿದಿಡಬೇಕು ಅಥವಾ (ಅದು ಸಾಧ್ಯವಿಲ್ಲದಿದ್ದರೆ) ಹಿರಿಯರ ಎದುರಿನಲ್ಲಿ ಅವಳನ್ನು ಬಿಟ್ಟುಬಿಡಬೇಕು.

**ಉತ್ಕೃಷ್ಟಾಯಾಭಿರೂಪಾಯ ವರಾಯ ಸದೃಶಾಯ ಚ ।**
**ಅಪ್ರಾಪ್ತಾಮಪಿ ತಾಂ ತಸ್ಮೈ ಕನ್ಯಾಂ ದದ್ಯಾದ್ಯಥಾವಿಧಿ ॥** ೩೦

ಕುಲಾಚಾರಗಳಿಂದ ಉತ್ಕೃಷ್ಟನಾಗಿ, ಸುರೂಪನಾಗಿರುವ, ಸಮಾನ ಜಾತಿಯ ವರನಿಗೆ ಸಕಾಲವಾಗುವುದಕ್ಕಿಂತ ಮೊದಲೇ ಕನ್ಯೆಯನ್ನು ಬ್ರಾಹ್ಮಾದಿವಿಧಿಯಿಂದ ಮದುವೆಮಾಡಿಕೊಡಬೇಕು.

**ಕಾಮಮಾಮರಣಾತ್ತಿಷ್ಠೇದ್ಗೃಹೇ ಕನ್ಯರ್ತುಮತ್ಯಪಿ ।**
**ನ ಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ ॥** ೩೨

ಋತಿಮತಿಯಾದರೂ ಅವಿವಾಹಿತ ಕನ್ಯೆಯು ಸಾಯುವವರೆಗೆ ತಂದೆಯ ಮನೆಯಲ್ಲಿಯೇ ಇರಬಹುದು. ಆದರೆ ಅವಳನ್ನು ವಿದ್ಯೆ, ಶೀಲ, ಯೋಗ್ಯ ಬಂಧುಗಳು ಮುಂತಾದ ಗುಣಗಳಿಲ್ಲದ ವರನಿಗೆ ಯಾವಾಗಲೂ ಕೊಡಬಾರದು.

**ತ್ರೀಣಿ ವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀ ಸತೀ ।**
**ಊರ್ಧ್ವಂ ತು ಕಾಲಾದೇತಸ್ಮಾದ್ವಿಂದೇತ ಸದೃಶಂ ಪತಿಮ್ ॥** ೩೩

(ತಂದೆ, ಅಣ್ಣ ಮೊದಲಾದ ಹಿರಿಯರು ತನ್ನನ್ನು ಉತ್ತಮನಾದ ವರನಿಗೆ ಕೊಡಲೆಂದು) ಕನ್ಯೆಯು ಋತುಮತಿಯಾದಮೇಲೆ ಮೂರು ವರ್ಷಗಳವರೆಗೆ ನಿರೀಕ್ಷಿಸಬೇಕು. ಆ ಕಾಲ ಕಳೆದ ಬಳಿಕ ತನಗೆ ಅನುರೂಪನಾದ ವರನನ್ನು ತಾನೇ ಹುಡುಕಿಕೊಳ್ಳಬಹುದು.

**ಅದೀಯಮಾನಾ ಭರ್ತಾರಮಧಿಗಚ್ಛೇದ್ಯದಿ ಸ್ವಯಮ್ ।**
**ನೈನಃ ಕಿಂಚಿದವಾಪ್ನೋತಿ ನ ಚ ಯಂ ಸಾಧಿಗಚ್ಛತಿ ॥** ೩೪

ಹಿರಿಯರಿಂದ ಯೋಗ್ಯವರನಿಗೆ ಕೊಡಲ್ಪಡದ ಕನ್ಯೆಯು ಪ್ರಾಪ್ತ ಕಾಲದಲ್ಲಿ ತನ್ನ ಗಂಡನನ್ನು ತಾನೇ ಪಡೆದುಕೊಂಡರೆ, ಅದರಿಂದ ಅವಳಿಗೆ ಸ್ವಲ್ಪವೂ ಪಾಪ ಬರುವುದಿಲ್ಲ; ಅವಳ ಗಂಡನಿಗೂ ಪಾಪ ಬರುವುದಿಲ್ಲ.

**ಅಲಂಕಾರಂ ನಾದದೀತ ಪಿತ್ರ್ಯಂ ಕನ್ಯಾ ಸ್ವಯಂವರಾ ।**
**ಮಾತೃಕಂ ಭ್ರಾತೃದತ್ತಂ ವಾ ಸ್ತೇನಾ ಸ್ಯಾದ್ಯದಿ ತಂ ಹರೇತ್ ॥ ೩೩**

ತಾನೇ ಗಂಡನನ್ನು ಹುಡುಕಿಕೊಂಡು ವರಿಸುವ ಕನ್ಯೆಯು ತಂದೆ, ತಾಯಿ ಅಥವಾ ಅಣ್ಣತಮ್ಮಂದಿರಿಂದ ಕೊಡಲ್ಪಟ್ಟ ಆಭರಣಾದಿಗಳನ್ನು ತನ್ನ ಜೊತೆಗೆ ಕೊಂಡೊಯ್ಯಬಾರದು. ಹಾಗೆ ಅವನ್ನು ಗಂಡನಮನೆಗೆ ತೆಗೆದು ಕೊಂಡುಹೋದರೆ ಕಳ್ಳನಂತೆ ಆಗುತ್ತಾಳೆ.

**ಪಿತ್ರೇ ನ ದದ್ಯಾಚ್ಛುಲ್ಕಂ ತು ಕನ್ಯಾಮೃತುಮತೀಂ ಹರನ್ ।**
**ಸ ಹಿ ಸ್ವಾಮ್ಯಾದತಿಕ್ರಾಮೇತ್ ಋತೂನಾಂ ಪ್ರತಿರೋಧನಾತ್ ॥**

ಋತುಮತಿಯಾದ ಕನ್ಯೆಯನ್ನು ವರಿಸಿ ಕರೆದುಕೊಂಡುಹೋಗುವ ವನು ಅವಳ ತಂದೆಗೆ ಶುಲ್ಕವನ್ನೇನೂ ಕೊಡಬಾರದು. ಏಕೆಂದರೆ, ಅವಳ ಋತುಕಾರ್ಯವಾದ ಸಂಭೋಗ, ಸಂತಾನೋತ್ಪತ್ತಿಗಳನ್ನು ತಡೆದಿರು ವುದರಿಂದ ತಂದೆಯು ತನ್ನ ಅಧಿಕಾರವನ್ನು ಕಳೆದುಕೊಂಡಿರುತ್ತಾನೆ.

**ತ್ರಿಂಶದ್ವರ್ಷೋದ್ವಹೇತ್ಕನ್ಯಾಂ ಹೃದ್ಯಾಂ ದ್ವಾದಶವಾರ್ಷಿಕೀಮ್ ।**
**ತ್ರ್ಯಷ್ಟವರ್ಷೋಽಷ್ಟವರ್ಷಾಂ ವಾ ಧರ್ಮೇ ಸೀದತಿ ಸತ್ವರಃ ॥ ೩೭**

ಮೂವತ್ತು ವರ್ಷದ ವಯಸ್ಸಿನ ಗಂಡಸು ಮನೋಹರಳಾದ ಹನ್ನೆರಡು ವರ್ಷದ ಕನ್ಯೆಯನ್ನು ಮದುವೆಯಾಗಬಹುದು. (ವೇದಾಧ್ಯಯನವನ್ನು ಮುಗಿಸಿ) ಗಾರ್ಹಸ್ಥ್ಯಧರ್ಮಕ್ಕಾಗಿ ಆತುರನಾದವನು ಇಪ್ಪತ್ತನಾಲ್ಕು ವರ್ಷದವನಾಗಿದ್ದಾಗ ಎಂಟು ವರ್ಷದ ಕನ್ಯೆಯನ್ನು ವರಿಸಬಹುದು.

**ಪ್ರಜನಾರ್ಥಂ ಸ್ತ್ರಿಯಃ ಸೃಷ್ಟಾಃ ಸಂತಾನಾರ್ಥಂ ಚ ಮಾನವಾಃ ।**
**ತಸ್ಮಾತ್ಸಾಧಾರಣೋ ಧರ್ಮಃ ಶ್ರುತೌ ಪತ್ನ್ಯಾ ಸಹೋದಿತಃ ॥ ೩೮**

ಸಂತಾನಾಭಿವೃದ್ಧಿಗಾಗಿ ಗರ್ಭಗ್ರಹಣಕ್ಕೆ ಹೆಂಗಸೂ, ಗರ್ಭಾದಾನಕ್ಕೆ ಗಂಡಸೂ ಸೃಷ್ಟಿಮಾಡಲ್ಪಟ್ಟಿದ್ದಾರೆ. ಆದುದರಿಂದಲೇ ಪತಿಗೆ ಪತ್ನಿ ಯೊಡನೆಯೇ ಅಗ್ನಿಹೋತ್ರ, ಅತಿಥಿಸತ್ಕಾರ ಮುಂತಾದ ಸಾಧಾರಣ ಧರ್ಮ ಗಳು ಶ್ರುತಿಗಳಲ್ಲಿ ಹೇಳಲ್ಪಟ್ಟಿವೆ.

**ಆದದೀತ ನ ಶೂದ್ರೋಽಪಿ ಶುಲ್ಕಂ ದುಹಿತರಂ ಹರನ್ ।**
**ಶುಲ್ಕಂ ಹಿ ಗೃಹ್ಣನ್ ಕುರುತೇ ಛನ್ನಂ ದುಹಿತೃವಿಕ್ರಯಮ್ ॥ ೩೯**

ಶಾಸ್ತ್ರಾರ್ಥಗಳನ್ನು ತಿಳಿಯದ ಶೂದ್ರನೂ ಕೂಡ ಮಗಳನ್ನು ಕೊಡುವಾಗ ಕನ್ಯಾಶುಲ್ಕವನ್ನು ತೆಗೆದುಕೊಳ್ಳಬಾರದು. ಶುಲ್ಕವನ್ನು ಸ್ವೀಕರಿಸಿದರೆ ಗೋಪ್ಯವಾಗಿ ಮಗಳನ್ನು ಮಾರಿಕೊಂಡಂತೆಯೇ ಆಗುವುದು.

**ನಾನುಶುಶ್ರುಮ ಜಾತ್ವೇತತ್ಪೂರ್ವೇಷ್ವಪಿ ಹಿ ಜನ್ಮಸು ।**
**ಶುಲ್ಕಸಂಜ್ಞೇನ ಮೂಲ್ಯೇನ ಛನ್ನಂ ದುಹಿತೃವಿಕ್ರಯಮ್ ॥** ೪೦

ಪೂರ್ವಕಲ್ಪಗಳಲ್ಲಿಯಾದರೂ ಶುಲ್ಕವೆಂಬ ಹೆಸರಿನಿಂದ ಗೂಢವಾದ ಕನ್ಯಾವಿಕ್ರಯ ನಡೆಯಿತೆಂದು ನಾವು ಕೇಳಿಲ್ಲ.

**ಅನ್ಯೋನ್ಯಸ್ಯಾವ್ಯಭೀಚಾರೋ ಭವೇದಾಮರಣಾಂತಿಕಃ ।**
**ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥** ೪೧

ದಂಪತಿಗಳು ತಮ್ಮ ಮರಣಪರ್ಯಂತವಾಗಿಯೂ ಪರಸ್ಪರರ ವಿಷಯದಲ್ಲಿ ಧರ್ಮಾರ್ಥಕಾಮಗಳ ವ್ಯಭಿಚಾರವನ್ನು ಮಾಡಬಾರದು; ಇದೇ ಸಂಕ್ಷೇಪವಾಗಿ ಗಂಡಹೆಂಡಿರ ಧರ್ಮವೆಂದು ತಿಳಿಯಬೇಕು.

**ಊರ್ಧ್ವಂ ಪಿತುಶ್ಚ ಮಾತುಶ್ಚ ಸಮೇತ್ಯ ಭ್ರಾತರಃ ಸಮಮ್ ।**
**ಭಜೇರನ್ ಪೈತೃಕಂ ರಿಕ್ಥಮನೀಶಾಸ್ತೇ ಹಿ ಜೀವತೋಃ ॥** ೪೨

ತಂದೆತಾಯಿಯರು ಮೃತರಾದಮೇಲೆ ಅಣ್ಣತಮ್ಮಂದಿರು ಒಟ್ಟಾಗಿ ಸೇರಿ ಪಿತ್ರಾರ್ಜಿತವಾದ ಮತ್ತು ತಾಯಿಯ ಸ್ತ್ರೀಧನವಾದ ಎಲ್ಲ ಆಸ್ತಿಗಳನ್ನೂ ಹಂಚಿಕೊಳ್ಳಬೇಕು. ತಂದೆತಾಯಿಯರು ಬದುಕಿರುವಾಗಲೇ ಮಕ್ಕಳು ಅವರ ಸ್ವತ್ತಿಗೆ ಒಡೆಯರಾಗಲಾರರು.

(ತಂದೆಯು ಇಷ್ಟಪಟ್ಟು ಆಸ್ತಿಯನ್ನು ಮಕ್ಕಳಿಗೆ ತಾನು ಬದುಕಿರುವಾಗಲೇ ಹಂಚಬಹುದು. "ಜೀವನ್ಪುತ್ರೇಭ್ಯೋ ದಾಯಂ ವಿಭಜೇತ್ಸಮಂ, ಕ್ಲೀಬಮುನ್ಮತ್ತಂ ಪತಿತಂ ಚ ಪರಿಹಾಪ್ಯ" ಎಂದು ಆಪಸ್ತಂಬ ವಚನ.)

**ಜ್ಯೇಷ್ಠ ಏವ ತು ಗೃಹ್ಣೀಯಾತ್ಪಿತ್ರ್ಯಂ ಧನಮಶೇಷತಃ ।**
**ಶೇಷಾಸ್ತಮುಪಜೀವೇಯುರ್ಯಥೈವ ಪಿತರಂ ತಥಾ ॥** ೪೩

ತಂದೆಯ ಆಸ್ತಿಯನ್ನೆಲ್ಲ ಹಿರಿಯ ಮಗನೇ ತೆಗೆದುಕೊಳ್ಳಬಹುದು; ಉಳಿದ ಗಂಡುಮಕ್ಕಳು ಹಿರಿಯಣ್ಣನನ್ನು ತಂದೆಯೆಂದೇ ಭಾವಿಸಿ ಆಶ್ರಯಿಸಿ ಜೀವಿಸಬಹುದು.

(ಈ ಪದ್ಧತಿ ಇಂಗ್ಲೆಂಡಿನ ಶ್ರೀಮಂತರಲ್ಲಿ ಇಂದಿಗೂ ನಡೆಯುತ್ತಿದೆ.)

**ಜ್ಯೇಷ್ಠೇನ ಜಾತಮಾತ್ರೇಣ ಪುತ್ರೀ ಭವತಿ ಮಾನವಃ ।**
**ಪಿತೄಣಾಮನೃಣಶ್ಚೈವ ಸ ತಸ್ಮಾತ್ಸರ್ವಮರ್ಹತಿ ॥** ೪೪

ಹಿರಿಯ ಮಗನು ಹುಟ್ಟಿದ ಕೂಡಲೆ ಮನುಷ್ಯನು ಪುತ್ರವಂತನಾಗುತ್ತಾನೆ ಮತ್ತು ಪಿತೃಋಣದಿಂದ ಮುಕ್ತನಾಗುತ್ತಾನೆ. ಆದುದರಿಂದ ಆ ಮಗನೇ ಎಲ್ಲ ಆಸ್ತಿಗೂ ಹಕ್ಕುದಾರನಾಗುತ್ತಾನೆ.

('ಪುತ್' ಎಂಬ ನರಕಕ್ಕೆ ಹೋಗುವುದನ್ನು ತಪ್ಪಿಸುವವನೇ ಪುತ್ರ. ಆ ಕಾರ್ಯವು ಮೊದಲು ಹುಟ್ಟಿದ ಮಗನಿಂದಲೇ ಸಂಪೂರ್ಣವಾಗಿ ಆಗಿಬಿಡುವುದರಿಂದ, ಉಳಿದ ಮಕ್ಕಳಿಂದ ಅದು ಆಗಬೇಕಾಗಿರುವುದಿಲ್ಲ. ಪಿತೃಋಣವು ಮಕ್ಕಳನ್ನು ಪಡೆಯುವುದರಿಂದ ತೀರುವುದು—ವಂಶದ ಬೆಳವಣಿಗೆ ಆಗುವುದರಿಂದ. ಅದೂ ಹಿರಿಯ ಮಗ ಹುಟ್ಟಿದ ಕೂಡಲೆ ಪೂರ್ಣವಾಗಿ ತೀರುವುದು. ಆದುದರಿಂದ ಜ್ಯೇಷ್ಠಪುತ್ರನು ಧರ್ಮಜ—ಧರ್ಮಸಾಧನೆಗಾಗಿ ಹುಟ್ಟಿದ ಪುತ್ರ; ಇತರರು ಕಾಮಜರೆಂದು ಮನು ಹೇಳುತ್ತಾನೆ)

**ಪಿತೇವ ಪಾಲಯೇತ್ಪುತ್ರಾನ್ ಜ್ಯೇಷ್ಠೋ ಭ್ರಾತೄನ್ಯವೀಯಸಃ ।**
**ಪುತ್ರವಚ್ಚಾಪಿ ವರ್ತೇರನ್ ಜ್ಯೇಷ್ಠೇ ಭ್ರಾತರಿ ಧರ್ಮತಃ ॥** ೪೫

ಜ್ಯೇಷ್ಠಪುತ್ರನು ತಂದೆಯಂತೆಯೇ ನಡೆದುಕೊಂಡು ತಮ್ಮಂದಿರನ್ನು ಪೋಷಿಸಬೇಕು. ಆದರೂ ಹಿರಿಯಣ್ಣನ ವಿಷಯದಲ್ಲಿ ಧರ್ಮದಿಂದ ಮಕ್ಕಳಂತೆಯೇ ನಡೆದುಕೊಳ್ಳಬೇಕು.

(ಜ್ಯೇಷ್ಠನು ಆಸ್ತಿಯನ್ನೆಲ್ಲ ತಾನೇ ತೆಗೆದುಕೊಂಡರೆ ತಮ್ಮಂದಿರ ಪಾಲನೆ—ಪೋಷಣೆಯ ಜವಾಬ್ದಾರಿಯನ್ನು ಅವನು ವಹಿಸಬೇಕಾದುದು ಯುಕ್ತವೇ ಆಗುವುದು.)

**ಏವಂ ಸಹ ವಸೇಯುರ್ವಾ ಪೃಥಗ್ವಾ ಧರ್ಮಕಾಮ್ಯಯಾ ।**
**ಪೃಥಗ್ವಿವರ್ಧತೇ ಧರ್ಮಸ್ತಸ್ಮಾದ್ಧರ್ಮ್ಯಾ ಪೃಥಕ್ಕ್ರಿಯಾ ॥** ೪೬

ಹೀಗೆ ಅಣ್ಣನ ಕುಟುಂಬದಲ್ಲಿ ಸೇರಿಕೊಂಡು ಎಲ್ಲರೂ ಒಟ್ಟಿಗೆ ವಾಸ ಮಾಡಬಹುದು. ಹಾಗಿಲ್ಲದಿದ್ದರೆ ಆಸ್ತಿಯನ್ನು ಹಂಚಿಕೊಂಡು ತಮ್ಮ ತಮ್ಮ ಧರ್ಮಾಚರಣೆಗಾಗಿ ಬೇರೆಯಾಗಬಹುದು. ಬೇರೆಬೇರೆಯಾಗಿ ಸಂಸಾರ ಗಳನ್ನು ಹೂಡುವ ಸೋದರರಿಂದ ದೇವ ಪಿತೃಕಾರ್ಯಗಳು ಅನೇಕವಾಗಿ ಅಭಿವೃದ್ಧಿಹೊಂದುವುದರಿಂದ ವಿಭಾಗದಿಂದ ಬೇರೆಬೇರೆಯಾಗುವುದೂ ಧರ್ಮಸಮ್ಮತವೆ.

**ಜ್ಯೇಷ್ಠಸ್ಯ ವಿಂಶ ಉದ್ಧಾರಃ ಸರ್ವದ್ರವ್ಯಾಚ್ಚ ಯದ್ವರಮ್ ।**
**ತತೋರ್ಧಂ ಮಧ್ಯಮಸ್ಯ ಸ್ಯಾತ್ತುರೀಯಂ ತು ಯವೀಯಸಃ ॥ ೪೭**

ಎಲ್ಲ ಆಸ್ತಿಯಲ್ಲಿ ಇಪ್ಪತ್ತನೆಯ ಒಂದು ಭಾಗವಾದ ಉತ್ತಮವಸ್ತು ಗಳನ್ನು ಜ್ಯೇಷ್ಠಾಂಶ (ಉದ್ಧಾರ) ಎಂದು ಹಿರಿಯ ಮಗನು ತೆಗೆದುಕೊಳ್ಳ ಬೇಕು. ಅದರ ಅರ್ಧವನ್ನು (ನಲವತ್ತನೆಯ ಭಾಗ) ಮಧ್ಯಮನೂ, ಕಾಲು ಭಾಗವನ್ನು (ಎಂಬತ್ತನೆಯ ಭಾಗ) ಕಿರಿಯ ಮಗನೂ ತೆಗೆದುಕೊಳ್ಳಬೇಕು. ಬಳಿಕ ಉಳಿದುದನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳಬೇಕು.

(ಮೂವರಿಗಿಂತ ಹೆಚ್ಚು ಮಕ್ಕಳಿದ್ದರೆ ಆ ನಲವತ್ತನೆಯ ಒಂದು ಭಾಗವಾದ ಮಧ್ಯಮಾಂಶವನ್ನು ಜ್ಯೇಷ್ಠ ಕನಿಷ್ಠರನ್ನುಳಿದು ಇತರ ಎಲ್ಲ ಮಕ್ಕಳೂ ಸಮವಾಗಿ ಹಂಚಿಕೊಳ್ಳಬೇಕು.)

**ಸ್ವೇಭ್ಯೋಽಂಶೇಭ್ಯಸ್ತು ಕನ್ಯಾಭ್ಯಃ ಪ್ರದದ್ಯುರ್ಭ್ರಾತರಃ ಪೃಥಕ್ ।**
**ಸ್ವಾತ್ಸ್ವಾದಂಶಾಚ್ಚತುರ್ಭಾಗಂ ಪತಿತಾಃ ಸ್ಯುರದಿತ್ಸವಃ ॥ ೪೮**

ಸೋದರರು ಆಸ್ತಿಯನ್ನು ಹಂಚಿಕೊಂಡಮೇಲೆ ತಮ್ಮ ತಮ್ಮ ಭಾಗ ಗಳಲ್ಲಿ ನಾಲ್ಕನೆಯ ಒಂದಂಶಗಳನ್ನು ಮದುವೆಯಾಗದ ಸೋದರಿಯರ ಮದುವೆಯ ವೆಚ್ಚಕ್ಕೋಸ್ಕರ ಅವರಿಗೆ ಪ್ರತ್ಯೇಕವಾಗಿ ಕೊಡಬೇಕು. ಹಾಗೆ ಕೊಡದಿದ್ದ ಸೋದರರು ಪತಿತರಾಗುತ್ತಾರೆ.

**ಅಪುತ್ರೋಽನೇನ ವಿಧಿನಾ ಸುತಾಂ ಕುರ್ವೀತ ಪುತ್ರಿಕಾಮ್ ।**
**ಯದಪತ್ಯಂ ಭವೇದಸ್ಯಾಂ ತನ್ಮಮ ಸ್ಯಾತ್ ಸ್ವಧಾಕರಮ್ ॥ ೪೯**

ಗಂಡುಮಕ್ಕಳಿಲ್ಲದವನು ತನ್ನ ಮಗಳ ಮದುವೆಯ ಕಾಲದಲ್ಲಿ, ಅಳಿಯನಿಗೆ "ಇವಳಲ್ಲಿ ಹುಟ್ಟಿದ ಮಗನು ನನಗೆ ಶ್ರಾದ್ಧಾದಿಕ್ರಿಯೆಗಳನ್ನು

ಮಾಡಲಿ" ಎಂದು ಹೇಳಿ ಒಪ್ಪಿಸಿದರೆ, ಆ ಮಗಳು ಅವನಿಗೆ 'ಪುತ್ರಿಕಾ' ('ಪುತ್' ಎಂಬ ನರಕದಿಂದ ತಪ್ಪಿಸುವವಳು) ಆಗುವಳು.

**ಯಥೈವಾತ್ಮಾ ತಥಾ ಪುತ್ರಃ ಪುತ್ರೇಣ ದುಹಿತಾ ಸಮಾ ।**
**ತಸ್ಯಾಮಾತ್ಮನಿ ತಿಷ್ಠಂತ್ಯಾಂ ಕಥಮನ್ಯೋ ಧನಂ ಹರೇತ್ ॥ ೫೦**

"ಆತ್ಮಾವೈಪುತ್ರನಾಮಾಸಿ" ಎಂಬ ವಾಕ್ಯದಂತೆ ತನ್ನ ಪುತ್ರನು ತನ್ನಂತೆಯೇ ಆಗಿರುವನು. ಮಗಳು ಮಗನಿಗೆ ಸಮಳೇ. ಆದುದರಿಂದ ತನ್ನ ಆತ್ಮನಂತಿರುವ ಮಗಳಿರುವಾಗ ಗಂಡುಮಕ್ಕಳಿಲ್ಲದವನ (ಮೃತನ) ಆಸ್ತಿಯನ್ನು ಬೇರೆ ಯಾರು ಒಯ್ಯಬಲ್ಲರು?

**ಮಾತುಸ್ತು ಯೌತಕಂ ಯತ್ಸ್ಯಾತ್ಕುಮಾರೀಭಾಗ ಏವ ಸಃ ।**
**ದೌಹಿತ್ರ ಏವ ಚ ಹರೇದಪುತ್ರಸ್ಯಾಖಿಲಂ ಧನಮ್ ॥ ೫೧**

ತಾಯಿಯ ಸ್ತ್ರೀಧನವು ಅವಳ ಮರಣಾನಂತರ ಹೆಣ್ಣುಮಕ್ಕಳಿಗೇ ಸೇರಬೇಕಾದುದು (ಗಂಡುಮಕ್ಕಳಿಗೆ ಅದರಲ್ಲಿ ಭಾಗವಿಲ್ಲ). ಆದುದರಿಂದ ಅಪುತ್ರನಾಗಿದ್ದು ಮೃತನಾದವನ ಎಲ್ಲ ಆಸ್ತಿಯನ್ನೂ (ಅವನ ಪಿತ್ರಾರ್ಜಿತ, ಸ್ವಯಾರ್ಜಿತ ಮತ್ತು ಪತ್ನಿಯ ಸ್ತ್ರೀಧನ) ಅವನ ಮಗಳ ಮಗನಾದ ದೌಹಿತ್ರನೇ ತೆಗೆದುಕೊಳ್ಳಬೇಕು.

**ಪುತ್ರದೌಹಿತ್ರಯೋರ್ಲೋಕೇ ನ ವಿಶೇಷೋಽಸ್ತಿ ಧರ್ಮತಃ ।**
**ತಯೋರ್ಹಿ ಮಾತಾಪಿತರೌ ಸಂಭೂತೌ ತಸ್ಯ ದೇಹತಃ ॥ ೫೨**

ಧರ್ಮವನ್ನು ಅನುಸರಿಸಿ ಮಗನ ಮಗ ಮತ್ತು ಮಗಳ ಮಗ ಇಬ್ಬರಿಗೂ ಲೋಕದಲ್ಲಿ ಏನೂ ಭೇದವಿಲ್ಲ; ಅವರ ತಂದೆತಾಯಿಯರು ತನ್ನ ದೇಹದಿಂದಲೇ ಹುಟ್ಟಿದವರು (ಒಂದೇ ತಂದೆತಾಯಿಯ ಮಕ್ಕಳು).

**ಔರಸಃ ಕ್ಷೇತ್ರಜಶ್ಚೈವ ದತ್ತಃ ಕೃತ್ರಿಮ ಏವ ಚ ।**
**ಗೂಢೋತ್ಪನ್ನೋಽಪವಿದ್ಧಶ್ಚ ದಾಯಾದಾ ಬಾಂಧವಾಶ್ಚ ಷಟ್ ॥**

ಮಕ್ಕಳಲ್ಲಿ ಔರಸ, ಕ್ಷೇತ್ರಜ, ದತ್ತ, ಕೃತ್ರಿಮ, ಗೂಢೋತ್ಪನ್ನ, ಅಪವಿದ್ಧ ಎಂಬ ಆರು ಬಗೆಯವರು ದಾಯಾದಿಗಳೂ ಬಂಧುಗಳೂ ಆಗುತ್ತಾರೆ. ಅಂದರೆ, ಅವರನ್ನು ಬಂಧುವರ್ಗದಲ್ಲಿಯೂ ಎಣಿಸುತ್ತಾರೆ ಮತ್ತು ಅವರು ಆಸ್ತಿಯ ವಿಭಾಗದಲ್ಲಿಯೂ ಹಕ್ಕನ್ನು ಪಡೆಯುತ್ತಾರೆ.

[ವಿವಾಹ ಸಂಸ್ಕಾರದಿಂದ ಪತ್ನಿಯಾದವಳಲ್ಲಿ ತನ್ನಿಂದ ಹುಟ್ಟಿದ ಮಗನಿಗೆ 'ಔರಸ'ನೆಂದು ಹೆಸರು. ಗಂಡನು ಮೃತನಾಗಿದ್ದು, ನಪುಂಸಕನಾಗಿದ್ದು ಅಥವಾ ರೋಗಗ್ರಸ್ತನಾಗಿದ್ದು, ಹೆಂಡತಿಯು ತನ್ನ ಧರ್ಮವನ್ನು ಅನುಸರಿಸಿ ಗುರುಹಿರಿಯರ ನಿಯೋಗದಿಂದ ಭಾವ ಮುಂತಾದ ಪರಪುರುಷರ ಮೂಲಕವಾಗಿ ಮಗನನ್ನು ಪಡೆದರೆ, ಆ ಮಗು ಅವಳ ಗಂಡನಿಗೆ 'ಕ್ಷೇತ್ರಜ' ಪುತ್ರನಾಗುವನು. (ಮಹಾಭಾರತದಲ್ಲಿ ಧೃತರಾಷ್ಟ್ರಾದಿಗಳು ಈ ಬಗೆಯಲ್ಲಿ ಜನ್ಮತಾಳಿದ ಕಥೆಗಳಿವೆ.) ಮಕ್ಕಳಿಲ್ಲದ ದಂಪತಿಗಳಿಗೆ ಮಗುವನ್ನು ತಾಯಿ ತಂದೆಗಳು ತಮ್ಮ ಸಮ್ಮತಿಯಿಂದ ಮತ್ತು ಪ್ರೀತಿಯಿಂದಲೇ ವಿಧಿಪೂರ್ವಕವಾಗಿ ದಾನಮಾಡಿದರೆ, ಆಗ ಮಗುವನ್ನು ಸ್ವೀಕರಿಸಿದ ದಂಪತಿಗಳಿಗೆ ಅದು 'ದತ್ತ'ಪುತ್ರನು. ಸಮಾನ ಜಾತಿಯುವನೂ, ಪಿತೃಕಾರ್ಯಗಳ ಗುಣದೋಷಗಳನ್ನು ತಿಳಿದವನೂ, ಪಿತೃಭಕ್ತಿ ಮುಂತಾದ ಸುಪುತ್ರನ ಗುಣಗಳುಳ್ಳವನೂ ಆದವನನ್ನು ಮಗನನ್ನಾಗಿಮಾಡಿಕೊಂಡರೆ, ಅವನು 'ಕೃತ್ರಿಮ' ಪುತ್ರನಾಗುವನು. ಒಂದು ಮನೆಯಲ್ಲಿ ಒಬ್ಬ ಹೆಂಗಸು ಮಗನನ್ನು ಹಡೆದು, ಆ ಮಗುವಿನ ತಂದೆಯು ಸಜಾತೀಯನಾಗಿದ್ದರೂ ಯಾರೆಂದು ಮಾತ್ರ ಗೊತ್ತಾಗದಿದ್ದರೆ, ಅದು ಆ ಹೆಂಗಸಿನ ಗಂಡನಿಗೆ 'ಗೂಢೋತ್ಪನ್ನ' ಪುತ್ರನಾಗುತ್ತದೆ. ತಾಯಿತಂದೆಗಳಾಗಲಿ, ಅವರಲ್ಲಿ ಒಬ್ಬರು ಮೃತರಾದಮೇಲೆ ಉಳಿದವರಾಗಲಿ, ಕಾರಣಾಂತರದಿಂದ (ಬಡತನ, ಅಪಮಾನ, ಇತ್ಯಾದಿ) ಒಂದು ಮಗುವನ್ನು ತ್ಯಜಿಸಿಬಿಟ್ಟರೆ, ಆ ಮಗುವನ್ನು ತಂದು ತಮ್ಮದೆಂದು ಸಾಕಿಕೊಳ್ಳುವವರಿಗೆ ಅದು 'ಅಪವಿದ್ಧ' ಪುತ್ರನೆನಿಸಿಕೊಳ್ಳುವುದು.]

**ಕಾನೀನಶ್ಚ ಸಹೋಢಶ್ಚ ಕ್ರೀತಃ ಪೌನರ್ಭವಸ್ತಥಾ ।**
**ಸ್ವಯಂ ದತ್ತಶ್ಚ ಶೌದ್ರಶ್ಚ ಷಡದಾಯಾದಬಾಂಧವಾಃ ॥** ೫೪

ಕಾನೀನ, ಸಹೋಢ, ಕ್ರೀತ, ಪೌನರ್ಭವ, ಸ್ವಯಂದತ್ತ, ಶೌದ್ರ ಎಂಬ ಆರು ಬಗೆಯ ಮಕ್ಕಳು ಬಂಧುಗಳಾಗುತ್ತಾರೆ; ಆದರೆ ದಾಯಾದಿಗಳಾಗುವುದಿಲ್ಲ; ಎಂದರೆ, ಅವರಿಗೆ ಆಸ್ತಿಯಮೇಲೆ ಹಕ್ಕು ಇರುವುದಿಲ್ಲ.

[ತಂದೆಯ ಮನೆಯಲ್ಲಿ ಅವಿವಾಹಿತಳಾಗಿರುವಾಗಲೇ ಸ್ತ್ರೀಯು ಮಗನನ್ನು ಹೆತ್ತರೆ (ಉದಾ.—ಕರ್ಣ), ಆ ಮಗು ಅವಳನ್ನು ಮುಂದೆ ಮದುವೆ

ಯಾಗುವ ಗಂಡನಿಗೆ 'ಕಾನೀನ' ಎಂಬ ಮಗನಾಗುತ್ತದೆ. ಗರ್ಭಿಣಿಯಾದ ಹೆಂಗಸನ್ನು ತಿಳಿದೋ ತಿಳಿಯದೆಯೋ ಮದುವೆಯಾಗುವವನಿಗೆ ಅವಳಲ್ಲಿ ಹುಟ್ಟುವ ಮಗನು 'ಸಹೋಢ' ಎಂಬ ಪುತ್ರನಾಗುವನು. ತಾಯಿತಂದೆ ಗಳಿಗೆ ಹಣಕೊಟ್ಟು ಸಜಾತೀಯನಾಗಿರಲಿ ಇಲ್ಲದಿರಲಿ ಅವರ ಮಗನನ್ನು ಪುತ್ರಾರ್ಥಿಯಾಗಿ ಕೊಂಡುಕೊಂಡರೆ, ಅವನು 'ಕ್ರೀತಕ' ಪುತ್ರನಾಗುವನು (ಉದಾ –ಶುನಃಶೇಪ). ಗಂಡನನ್ನು ಬಿಟ್ಟವಳು ಅಥವಾ ವಿಧವೆಯು ತನ್ನ ಇಚ್ಛೆಯಿಂದ ಮತ್ತೊಬ್ಬನ ಹೆಂಡತಿಯಾಗಿ ಮಗನನ್ನು ಪಡೆದರೆ, ಆ ಮಗು ಎರಡನೇ ಗಂಡನಿಗೆ 'ಪೌನರ್ಭವ' ಮಗನಾಗುವನು. (ಎರಡನೇ ಮದುವೆ ಮಾಡಿಕೊಳ್ಳುವವಳಿಗೆ 'ಪುನರ್ಭೂ' ಎಂದು ಸಂಜ್ಞೆ. ಆ ಹೆಂಗಸು ಅಕ್ಷತಯೋನಿಯಾಗಿದ್ದು ಮತ್ತೊಬ್ಬನನ್ನು ಆಶ್ರಯಿಸಿದರೆ, ಅಥವಾ ಯೌವನ ವನ್ನು ಹೊಂದಿಲ್ಲದ ಪತಿಯನ್ನು ಬಿಟ್ಟು ಮತ್ತೊಬ್ಬನನ್ನು ಆಶ್ರಯಿಸಿ, ಪುನಃ ಪ್ರಾಪ್ತಯೌವನನಾದ ಮೊದಲನೆಯ ಪತಿಯ ಬಳಿಗೇ ಬಂದರೆ, ಪೌನರ್ಭವ ಸಂಸ್ಕಾರವನ್ನು— ಎರಡನೇ ಮದುವೆಯನ್ನು— ಮಾಡಿಕೊಳ್ಳಬಹುದು.) ತಾಯಿತಂದೆಗಳಿಲ್ಲದವನು ಅಥವಾ ನಿಷ್ಕಾರಣವಾಗಿ ಮಾತಾಪಿತೃಗಳಿಂದ ಪರಿತ್ಯಕ್ತನಾದವನು ತನ್ನನ್ನು ಮಗನೆಂದು ಭಾವಿಸಿ ಸಾಕಬೇಕೆಂದು ತಾನೇ ಯಾರನ್ನಾದರೂ ಕೇಳಿಕೊಂಡು ಸ್ವೀಕೃತನಾದರೆ, ಅವನು ಪಾಲಕರಿಗೆ 'ಸ್ವಯಂದತ್ತ'ನಾದ ಮಗನಾಗುವನು. ಬ್ರಾಹ್ಮಣನು ಕಾಮವಶನಾಗಿ ಮದುವೆಯಾದ ಶೂದ್ರಸ್ತ್ರೀಯಲ್ಲಿ ಮಗನನ್ನು ಪಡೆದರೆ ಅವನು 'ಶೌದ್ರಪುತ್ರ' ನೆನಿಸಿಕೊಳ್ಳುವನು. (ಪಿತೃತೃಪ್ತಿಗಾಗಿ ಅವನು ಶ್ರಾದ್ಧಾದಿಗಳನ್ನು ಮಾಡಿದರೂ ಪಿತೃಗಳಿಗೆ ಸಂಪೂರ್ಣಹಿತ ಮಾಡಲಾಗದುದರಿಂದ ಅವನು ಬದುಕಿಯೂ ಶವದಂತೆಯೇ, ಎಂಬ ಅರ್ಥದಿಂದ ಶೌದ್ರನಿಗೆ 'ಪಾರಶವ' ಎಂಬ ಸಂಜ್ಞೆಯೂ ಉಂಟು.)]

**ಭ್ರಾತೄಣಾಮೇಕಜಾತಾನಾಮೇಕಶ್ಚೇತ್ಪುತ್ರವಾನ್ ಭವೇತ್ ।**
**ಸರ್ವಾಂಸ್ತಾಂಸ್ತೇನಪುತ್ರೇಣ ಪುತ್ರಿಣೋ ಮನುರಬ್ರವೀತ್ ॥ ೫೫**

ಒಬ್ಬ ತಾಯಿಯ ಮಕ್ಕಳಾದ ಅಣ್ಣತಮ್ಮಂದಿರಲ್ಲಿ ಒಬ್ಬನಿಗೇ ಗಂಡು ಮಗನಿದ್ದು, ಮಿಕ್ಕವರು ಅಪುತ್ರರಾಗಿದ್ದರೆ, ಆ ಒಬ್ಬ ಪುತ್ರನಿಂದಲೇ ಅವರೆಲ್ಲರೂ ಪುತ್ರವಂತರಾಗುವರೆಂದು ಮನು ಹೇಳಿದ್ದಾನೆ.

(ಆ ಚಿಕ್ಕಪ್ಪ, ದೊಡ್ಡಪ್ಪಂದಿರು ಮತ್ತೊಬ್ಬನನ್ನು ತಮ್ಮ ಪುತ್ರ ಪ್ರತಿನಿಧಿಯಾಗಿ ಮಾಡಿಕೊಳ್ಳಬೇಕಾಗಿಲ್ಲ ಎಂದು ತಾತ್ಪರ್ಯ. ಹೀಗೆಯೇ ಒಬ್ಬನಿಗೆ ಅನೇಕ ಹೆಂಡತಿಯರಿದ್ದು, ಅವರಲ್ಲಿ ಒಬ್ಬಳಿಗೇ ಮಗನಿದ್ದರೆ, ಆ ಮಗನಿಂದಲೇ ಆ ಸ್ತ್ರೀಯರೆಲ್ಲರೂ ಪುತ್ರವತಿಯರಾದಂತೆ ಆಯಿತು ಎಂದು ಮನು ಹೇಳಿದ್ದಾನೆ.)

**ಜನನ್ಯಾಂ ಸಂಸ್ಥಿತಾಯಾಂ ತು ಸಮಂ ಸರ್ವೇ ಸಹೋದರಾಃ ।**
**ಭಜೇರನ್ಮಾತೃಕಂ ರಿಕ್ಥಂ ಭಗಿನ್ಯಶ್ಚ ಸನಾಭಯಃ ॥** ೫೬

ತಾಯಿ ಸತ್ತಮೇಲೆ ಅವಳ ಸ್ತ್ರೀಧನವನ್ನು ಎಲ್ಲ ಮಕ್ಕಳೂ—ಸೋದರ ಸೋದರಿಯರೂ—ಸಮವಾಗಿ ಹಂಚಿಕೊಳ್ಳಬೇಕು. (ಇದು ಅವಿವಾಹಿತ ಪುತ್ರಿಯರಿಗೆ ಮಾತ್ರ ಅನ್ವಯಿಸುವುದೆಂದೂ, ವಿವಾಹಿತರಾಗಿದ್ದ ಹೆಣ್ಣು ಮಕ್ಕಳು ಅವರ ಭಾಗದ ಧನಕ್ಕೆ ಅನುರೂಪವಾದ ವಸ್ತ್ರಾಭರಣಾದಿ ಸನ್ಮಾನಗಳನ್ನು ಮಾತ್ರ ಪಡೆಯಬೇಕೆಂದೂ ಬೃಹಸ್ಪತಿಯ ಮತ.)

**ಯಾಸ್ತಾಸಾಂ ಸ್ಯುರ್ದುಹಿತರಸ್ತಾಸಾಮಪಿ ಯಥಾರ್ಹತಃ ।**
**ಮಾತಾಮಹ್ಯಾ ಧನಾತ್ಕಿಂಚಿತ್ಪ್ರದೇಯಂ ಪ್ರೀತಿಪೂರ್ವಕಮ್ ॥** ೫೭

ಆ ಹೆಣ್ಣುಮಕ್ಕಳ ಅವಿವಾಹಿತ ಹೆಣ್ಣುಮಕ್ಕಳಿಗೂ (ಮೊಮ್ಮಕ್ಕಳಿಗೂ) ಅಜ್ಜಿಯ ಆಸ್ತಿಯಲ್ಲಿ ಸ್ವಲ್ಪ ಭಾಗವನ್ನು ಸಂತೋಷದಿಂದ ಅವರಿಗೆ ಸನ್ಮಾನವಾಗುವಹಾಗೆ ಕೊಡಬೇಕು.

**ನ ನಿರ್ಹಾರಂ ಸ್ತ್ರಿಯಃ ಕುರ್ಯುಃ ಕುಟುಂಬಾದ್ಬಹುಮಧ್ಯಗಾತ್ ।**
**ಸ್ವಕಾದಪಿ ಚ ವಿತ್ತಾದ್ಧಿ ಸ್ವಸ್ಯ ಭರ್ತುರನಾಜ್ಞಯಾ ॥** ೫೮

ಅನೇಕ ಜನ ಅಣ್ಣತಮ್ಮಂದಿರು, ದಾಯಾದಿಗಳು ಇರುವ ಒಟ್ಟು ಕುಟುಂಬದಲ್ಲಿ ಸ್ತ್ರೀಯು ತನಗಾಗಿಯೇ ಒಡವೆ ವಸ್ತುಗಳಿಗೋಸ್ಕರವೆಂದು ಧನವನ್ನು ತೆಗೆದಿಟ್ಟುಕೊಳ್ಳಬಾರದು. ತನ್ನ ಗಂಡನ ಸಂಪಾದನೆಯೆಂದು ಅವನ ಅಪ್ಪಣೆಯಿಲ್ಲದೆ ಹಣ ತೆಗೆದುಕೊಂಡು ಒಡವೆಗಳನ್ನು ಮಾಡಿಸಿಕೊಳ್ಳಬಾರದು. (ಆದುದರಿಂದ ಅದು ಸ್ತ್ರೀಧನವಾಗಲಾರದು.)

**ಊರ್ಧ್ವಂ ವಿಭಾಗಾಜ್ಜಾತಸ್ತು ಪಿತ್ರ್ಯಮೇವ ಹರೇದ್ಧನಮ್ ।**
**ಸಂಸೃಷ್ಟಾಸ್ತೇನ ವಾ ಯೇ ಸ್ಯುರ್ವಿಭಜೇತ ಸ ತೈಃ ಸಹ ॥** ೫೯

ತಂದೆಯು ತನ್ನ ಇಚ್ಛೆಯಿಂದ ಮಕ್ಕಳಿಗೆ ಪಾಲುಕೊಟ್ಟಮೇಲೆ ಹುಟ್ಟಿದ ಮಗನು ತಂದೆಯು ಮೃತನಾದಮೇಲೆ ಅವನ ಭಾಗದ ಹಣವನ್ನೇ ತೆಗೆದು ಕೊಳ್ಳಬೇಕು. ಪಾಲುಗೊಂಡ ಮಕ್ಕಳಿಲ್ಲ ತಂದೆಯೊಡನೆ ಒಟ್ಟಾಗಿ ಸೇರಿದ್ದರೆ, ಆತನ ಮರಣಾನಂತರ ಎಲ್ಲ ಮಕ್ಕಳೂ ಆಸ್ತಿಯನ್ನು ಹಂಚಿಕೊಳ್ಳಬೇಕು.

**ಯೇ ನಿಯುಕ್ತಾಸ್ತು ಕಾರ್ಯೇಷು ಹನ್ಯುಃ ಕಾರ್ಯಾಣಿ**
**ಕಾರ್ಯಿಣಾಮ್ ।**
**ಧನೋಷ್ಮಣಾ ಪಚ್ಯಮಾನಾಸ್ತಾನ್ನಿಃಸ್ವಾನ್ಕಾರಯೇನ್ನೃಪಃ ॥ ೬೦**

ರಾಜನಿಂದ ನಾನಾವ್ಯವಹಾರಗಳಲ್ಲಿ ನಿಯುಕ್ತರಾದ ಪುರುಷರು ತಮ್ಮ ಹಣ ಅಧಿಕಾರಗಳಿಂದ ಕೊಬ್ಬಿ, ಕೆಲಸಮಾಡುವವರ ಕಾರ್ಯಗಳನ್ನು ನಾಶಪಡಿಸಿದರೆ, ಅಂತಹ ಅಧಿಕಾರಿಗಳ ಎಲ್ಲ ಸ್ವತ್ತನ್ನೂ ರಾಜನು ತೆಗೆದು ಕೊಂಡುಬಿಡಬೇಕು.

**ಬ್ರಹ್ಮಹಾ ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।**
**ಏತೇ ಸರ್ವೇ ಪೃಥಕ್ ಜ್ಞೇಯಾ ಮಹಾಪಾತಕಿನೋ ನರಾಃ ॥ ೬೧**

ಬ್ರಾಹ್ಮಣನನ್ನು ಕೊಂದವನು, ಮದ್ಯವನ್ನು ಕುಡಿಯುವವನು, ಕದಿಯುವವನು,, ಗುರುಪತ್ನಿಯೊಡನೆ ಸಂಭೋಗಮಾಡುವವನು—ಇವರೆಲ್ಲರೂ ಮಹಾಪಾತಕಿಗಳು.

(ಯಜ್ಞಾಂಗವಾಗಿ ವಿಹಿತವಾದ ಸೋಮಪಾನವು ಮದ್ಯಪಾನವೆನಿಸುವುದಿಲ್ಲ. 'ಸ್ತೇಯೀ' ಎಂದು ಸಾಧಾರಣ ಕಳ್ಳನನ್ನು ಇಲ್ಲಿ ಹೇಳಿದ್ದರೂ, ಇತರ ಸ್ಮೃತಿವಾಕ್ಯಗಳಿಂದ ಬಂಗಾರದ ಕಳ್ಳನನ್ನೇ–ಸ್ವರ್ಣಸ್ತೇಯೀ–ಇಲ್ಲಿ ಉದ್ದೇಶಿಸಿರುವುದು. ಗುರುಪತ್ನಿ ಎಂಬ ಶಬ್ದದಿಂದ ಗುರುವಿನ ಹೆಂಡತಿ ಮಾತ್ರವಲ್ಲದೆ, ತನ್ನ ತಾಯಿ, ಅಕ್ಕ, ಅಣ್ಣನ ಹೆಂಡತಿ ಮೊದಲಾದ ಹಿರಿಯನೆಂಟರೂ ಸೂಚಿತರಾಗಿರುತ್ತಾರೆ.)

**ಅಸಂಭೋಜ್ಯಾ ಹ್ಯಸಂಯಾಜ್ಯಾ ಅಸಂಪಾಠ್ಯಾವಿವಾಹಿನಃ ।**
**ಚರೇಯುಃ ಪೃಥಿವೀಂ ದೀನಾಃ ಸರ್ವಧರ್ಮಬಹಿಷ್ಕೃತಾಃ ॥ ೬೨**

ಮಹಾಪಾತಕಿಗಳಿಗೆ ಅನ್ನವನ್ನು ಕೊಡಬಾರದು; ಅವರಿಂದ ಯಜ್ಞ ಮಾಡಿಸಬಾರದು; ಅವರಿಗೆ ಪಾಠ ಹೇಳಬಾರದು, ಹೆಣ್ಣು ಕೊಡಬಾರದು;

ಅವರು ಎಲ್ಲ ಧರ್ಮಗಳಿಂದಲೂ ಬಹಿಷ್ಕರಿಸಲ್ಪಟ್ಟು ದುಃಖಿತರಾಗಿ ಊರಿಂದ ಊರಿಗೆ ಅಲೆಯುತ್ತಿರಬೇಕು.

**ನಿರ್ಭಯಂ ತು ಭವೇದ್ಯಸ್ಯ ರಾಷ್ಟ್ರಂ ಬಾಹುಬಲಾಶ್ರಿತಮ್ ।**
**ತಸ್ಯ ತದ್ವರ್ಧತೇ ನಿತ್ಯಂ ಸಿಚ್ಯಮಾನ ಇವ ದ್ರುಮಃ ॥** ೬೩

ಯಾವ ರಾಜನ ದೇಶವು ಅವನ ಬಾಹುಬಲದಿಂದ ರಕ್ಷಿತವಾಗಿ ನಿರ್ಭಯವಾಗಿರುವುದೋ ಅದು ನೀರೆರೆಯಲ್ಪಟ್ಟ ಮರದಂತೆ ನಿತ್ಯವೂ ಅಭಿವೃದ್ಧಿಯನ್ನು ಹೊಂದುವುದು.

**ನ ಹಿ ದಂಡಾದೃತೇ ಶಕ್ಯಃ ಕರ್ತುಂ ಪಾಪವಿನಿಗ್ರಹಃ ।**
**ಸ್ತೇನಾನಾಂ ಪಾಪಬುದ್ಧೀನಾಂ ನಿಭೃತಂ ಚರತಾಂ ಕ್ಷಿತೌ ॥** ೬೪

ಪಾಪಬುದ್ಧಿಯನ್ನು ಹೊಂದಿ ನಿಶ್ಚಿಂತರಾಗಿ ಅಲ್ಲಲ್ಲಿ ಸಂಚರಿಸುತ್ತಿರುವ ಕಳ್ಳರನ್ನು ಹಿಡಿದು ಶಿಕ್ಷಿಸದಿದ್ದರೆ ಪಾಪವನ್ನು ನಿಗ್ರಹಿಸಲು ಸಾಧ್ಯವಿಲ್ಲ.

**ಸಭಾಪ್ರಪಾಪೂಪಶಾಲಾವೇಶಮದ್ಯಾನ್ನವಿಕ್ರಯಾಃ ।**
**ಚತುಷ್ಪಥಾಶ್ಚೈತ್ಯವೃಕ್ಷಾಃ ಸಮಾಜಾಃ ಪ್ರೇಕ್ಷಣಾನಿ ಚ ॥** ೬೫
**ಜೀರ್ಣೋದ್ಯಾನಾನ್ಯರಣ್ಯಾನಿ ಕಾರುಕಾವೇಶನಾನಿ ಚ ।**
**ಶೂನ್ಯಾನಿ ಚಾಪ್ಯಗಾರಾಣಿ ವನಾನ್ಯುಪವನಾನಿ ಚ ॥** ೬೬
**ಏವಂವಿಧಾನ್ನೃಪೋ ದೇಶಾನ್ಗುಲ್ಮೈಃ ಸ್ಥಾವರಜಂಗಮೈಃ ।**
**ತಸ್ಕರಪ್ರತಿಷೇಧಾರ್ಥಂ ಚಾರೈಶ್ಚಾಪ್ಯನುಚಾರಯೇತ್ ॥** ೬೭

ಸಭೆಗಳು, ಅರವಟ್ಟಿಗೆಗಳು, ಅಪೂಪ ಮೊದಲಾದ ತಿಂಡಿಗಳನ್ನು ಮಾರುವ ಸ್ಥಳಗಳು, ಸೂಳೆಯರ ಮನೆಗಳು, ಮದ್ಯ ಅನ್ನಗಳನ್ನು ಮಾರುವ ಅಂಗಡಿಗಳು, ನಾಲ್ಕು ದೊಡ್ಡರಸ್ತೆಗಳು ಸೇರುವ ಚೌಕಗಳು, ಪ್ರಖ್ಯಾತವಾದ (ಅರಳಿ ಮುಂತಾದ) ಮರಗಳ ಬುಡಗಳು, ಜನಸಂದಣಿ, ಹಾಳುಬಿದ್ದ ತೋಟಗಳು, ಕಾಡುಗಳು, ಮರದ ಕೆತ್ತನೆಕೆಲಸಮಾಡುವುವವರ ಮನೆಗಳು, ಪಾಳುಪ್ರದೇಶಗಳು, ದೊಡ್ಡತೋಪುಗಳು, ಉದ್ಯಾನವನಗಳು—ಇಂತಹ ಸ್ಥಳಗಳಲ್ಲಿ ಒಂದೇ ಕಡೆ ನಿಂತಿರುವ ಮತ್ತು ಅಲ್ಲಿಂದಿಲ್ಲಿಗೆ ಸಂಚರಿಸುತ್ತಿರುವ ಸೈನಿಕರನ್ನೂ ಗೂಢಚಾರರನ್ನೂ ಸ್ಥಾಪಿಸಿ, ಕಳ್ಳರನ್ನು ಹಿಡಿಯಬಹುದು.

(ಇಂತಹ ಪ್ರದೇಶಗಳಲ್ಲಿ ಕಳ್ಳರು ಸೇರುವ ಸಂಭವ ಉಂಟು.)

**ತತ್ಸಹಾಯ್ಯೈರನುಗತ್ಯೈರ್ನಾನಾಕರ್ಮಪ್ರವೇದಿಭಿಃ ।**
**ವಿದ್ಯಾದುತ್ಸಾದಯೇಚ್ಚೈವ ನಿಪುಣೈಃ ಪೂರ್ವತಸ್ಕರೈಃ ॥ ೬೮**

ಆ ಕಳ್ಳರ ಸಹಾಯಕರಾಗಿ, ಅವರನ್ನು ಹಿಂಬಾಲಿಸುವವರಾಗಿ, ಕಳ್ಳತನದ ಎಲ್ಲ ಮರ್ಮಗಳನ್ನೂ ಅರಿತವರಾಗಿ, ಪೂರ್ವದಲ್ಲಿ ಕಳ್ಳತನವನ್ನು ಮಾಡುತ್ತಿದ್ದು ಆಮೇಲೆ ಆ ವೃತ್ತಿಯನ್ನು ಬಿಟ್ಟವರಾಗಿ ಇರುವಂತಹ ನಿಪುಣರನ್ನು ತನ್ನ ಕಡೆಯ ಗೂಢಚಾರರನ್ನಾಗಿ ನಿಯಮಿಸಿಕೊಂಡು ರಾಜನು ಕಳ್ಳರ ವಿದ್ಯಮಾನಗಳನ್ನು ಅರಿತು ಅವರನ್ನು ನಿಗ್ರಹಿಸಬೇಕು.

**ರಾಜ್ಞಃ ಕೋಶಾಪಹರ್ತ್ಯಾಂಶ್ಚ ಪ್ರತಿಕೂಲೇಷು ಚ ಸ್ಥಿತಾನ್ ।**
**ಘಾತಯೇದ್ವಿವಿಧೈರ್ದಂಡೈರರೀಣಾಂ ಚೋಪಜೀವಿಕಾನ್ ॥ ೬೯**

ರಾಜನ ಕೋಶದಿಂದ ಕದಿಯುವವರನ್ನೂ, ಅವನ ಅಪ್ಪಣೆ ಮೀರಿ ಪ್ರತಿಕೂಲರಾದವರನ್ನೂ, ಶತ್ರುರಾಜನೊಡನೆ ಸೇರಿಕೊಂಡು ಜೀವನ ನಡೆಸಿ ತಮ್ಮ ರಾಜನಿಗೆ ದ್ರೋಹ ಬಗೆಯುವವರನ್ನೂ ನಾನಾ ಬಗೆಯ ಅಂಗಚ್ಛೇದಾದಿ ಶಿಕ್ಷೆಗಳಿಂದ ದಂಡಿಸಬೇಕು.

**ಆರಭೇತೈವ ಕರ್ಮಾಣಿ ಶ್ರಾಂತಃ ಶ್ರಾಂತಃ ಪುನಃ ಪುನಃ ।**
**ಕರ್ಮಾಣ್ಯಾರಭಮಾಣಂ ಹಿ ಪುರುಷಂ ಶ್ರೀರ್ನಿಷೇವತೇ ॥ ೭೦**

ಕಾರ್ಯವನ್ನು ಮಾಡುತ್ತಾ ಶ್ರಮವನ್ನು ಸಹಿಸಬೇಕಾದರೂ, ತನ್ನ ರಾಜ್ಯದ ಅಭಿವೃದ್ಧಿ ಮತ್ತು ಶತ್ರುರಾಜನ ಅಪಚಯಗಳನ್ನು ಉಂಟುಮಾಡುವ ಕೆಲಸಗಳನ್ನು ರಾಜನು ಮತ್ತೆ ಮತ್ತೆ ಮಾಡುತ್ತಲೇ ಇರಬೇಕು. ಹೊಸ ಪ್ರಯತ್ನಗಳನ್ನು ಮಾಡುತ್ತಿರುವವನನ್ನೇ ಲಕ್ಷ್ಮಿಯು ಆಶ್ರಯಿಸುವಳು.

**ವೈಶ್ಯಸ್ತು ಕೃತಸಂಸ್ಕಾರಃ ಕೃತ್ವಾ ದಾರಪರಿಗ್ರಹಮ್ ।**
**ವಾರ್ತಾಯಾಂ ನಿತ್ಯಯುಕ್ತಃ ಸ್ಯಾತ್ಪಶೂನಾಂ ಚೈವ ರಕ್ಷಣೇ ॥ ೭೧**

ವೈಶ್ಯನು ಉಪನಯನಾದಿ ಸಂಸ್ಕಾರಗಳನ್ನು ಹೊಂದಿ, ಮದುವೆ ಮಾಡಿಕೊಂಡು, ಜೀವನೋಪಾಯಕ್ಕಾಗಿ ಕೃಷಿ ಪಶುಪಾಲನೆಗಳಲ್ಲಿ ಯಾವಾಗಲೂ ತೊಡಗಿರಬೇಕು.

**ನ ಚ ವೈಶ್ಯಸ್ಯ ಕಾಮಃ ಸ್ಯಾನ್ನ ರಕ್ಷೇಯಂ ಪಶೂನಿತಿ ।**
**ವೈಶ್ಯೇ ಚೇಚ್ಛತಿ ನಾಽನ್ಯೇನ ರಕ್ಷಿತವ್ಯಾಃ ಕಥಂಚನ ॥** ೭೨

ಪಶುಪಾಲನೆಯನ್ನು ನಾನು ಮಾಡುವುದಿಲ್ಲ ಎಂದು ವೈಶ್ಯನು ಮನಸ್ಸು ಮಾಡಬಾರದು. (ಕೃಷಿಮಾಡದಿದ್ದರೂ ಪರವಾ ಇಲ್ಲ) ಪಶುಪಾಲನೆಗೆ ವೈಶ್ಯನು ಸಿದ್ಧನಾಗಿರುವಾಗ ಅದನ್ನು ಮತ್ತಾರೂ ಮಾಡಬಾರದು.

**ಬೀಜಾನಾಮುಪ್ತಿವಿಚ್ಚ ಸ್ಯಾತ್ ಕ್ಷೇತ್ರದೋಷಗುಣಸ್ಯ ಚ ।**
**ಮಾನಯೋಗಂ ಚ ಜಾನೀಯಾತ್ತುಲಾಯೋಗಾಂಶ್ಚ ಸರ್ವಶಃ ॥**

**ಭೃತ್ಯಾನಾಂ ಚ ಭೃತಿಂ ವಿದ್ಯಾದ್ಭಾಷಾಶ್ಚ ವಿವಿಧಾ ನೃಣಾಮ್ ।**
**ದ್ರವ್ಯಾಣಾಂ ಸ್ಥಾನಯೋಗಾಂಶ್ಚ ಕ್ರಯವಿಕ್ರಯಮೇವ ಚ ॥** ೭೪

ಕೃಷಿಮಾಡುವುದಕ್ಕಾಗಿ ಬೀಜಗಳನ್ನು ಬಿತ್ತುವ ವಿಧಾನವನ್ನೂ, ಭೂಮಿಯ ಗುಣದೋಷಗಳನ್ನೂ, ಪದಾರ್ಥಗಳನ್ನು ಅಳೆಯುವ ಅಥವಾ ತೂಕಮಾಡುವ ವಿಧಾನಗಳನ್ನೂ ವೈಶ್ಯನು ತಿಳಿದಿರಬೇಕು; ಸೇವಕನಿಗೆ ಕೊಡಬೇಕಾದ ಯೋಗ್ಯವೇತನವನ್ನೂ ಅರಿತಿರಬೇಕು; ವ್ಯವಹಾರಕ್ಕಾಗಿ ನಾನಾ ಜನರ ಭಾಷೆಗಳನ್ನೂ ತಿಳಿದಿರಬೇಕು; ಯಾವ ಯಾವ ಪದಾರ್ಥಗಳನ್ನು ಎಲ್ಲೆಲ್ಲಿ, ಯಾವ ರೀತಿಯಲ್ಲಿ ಶೇಖರಿಸಿ ಇಡಬೇಕು, ಅವು ಕೆಡದಿರುವುದಕ್ಕಾಗಿ ಯಾವ ಪದಾರ್ಥಗಳನ್ನು ಅವಕ್ಕೆ ಬೆರೆಸಬೇಕು ಎಂಬುದನ್ನೂ ತಿಳಿದಿರಬೇಕು. ವೈಶ್ಯನಿಗೆ ಕೊಳ್ಳುವ ಮತ್ತು ಮಾರುವ ವ್ಯವಹಾರದ ಸಂಪೂರ್ಣ ಪರಿಚಯವಿರಬೇಕು.

**ಧರ್ಮೇಣ ಚ ದ್ರವ್ಯವೃದ್ಧಾವಾತಿಷ್ಠೇದ್ಯತ್ನಮುತ್ತಮಮ್ ।**
**ದದ್ಯಾಚ್ಚ ಸರ್ವಭೂತಾನಾಮನ್ನಮೇವ ಪ್ರಯತ್ನತಃ ॥** ೭೫

ವೈಶ್ಯನು ಧರ್ಮಮಾರ್ಗದಿಂದಲೇ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದಕ್ಕೆ ಉತ್ತಮವಾದ ಪ್ರಯತ್ನವನ್ನು ಮಾಡಬೇಕು; ಎಲ್ಲ ಪ್ರಾಣಿಗಳಿಗೂ ಪ್ರಯತ್ನಪೂರ್ವಕವಾಗಿ ಅನ್ನವನ್ನು ಕೊಡಬೇಕು.

**ವಿಪ್ರಾಣಾಂ ವೇದವಿದುಷಾಂ ಗೃಹಸ್ಥಾನಾಂ ಯಶಸ್ವಿನಾಮ್ ।**
**ಶುಶ್ರೂಷೈವ ತು ಶೂದ್ರಸ್ಯ ಧರ್ಮೋ ನೈಃಶ್ರೇಯಸಃ ಪರಃ ॥** ೭೬

ವೇದವಿದ್ಯಾಪಾರಂಗತರಾಗಿ ಕೀರ್ತಿವಂತರಾದ ಗೃಹಸ್ಥ ಬ್ರಾಹ್ಮಣರ ಸೇವೆಯನ್ನು ಮಾಡುವುದೇ ಶೂದ್ರನಿಗೆ ಉತ್ತಮಪದವಿಯನ್ನು ಕೊಡಬಲ್ಲ ಧರ್ಮ.

**ಶುಚಿರುತ್ಕೃಷ್ಟಶುಶ್ರೂಷುರ್ಮೃದುವಾಗನಹಂಕೃತಃ ।**
**ಬ್ರಾಹ್ಮಣಾದ್ಯಾಶ್ರಯೋ ನಿತ್ಯಮುತ್ಕೃಷ್ಟಾಂ ಜಾತಿಮಶ್ನುತೇ ॥ ೭೭**

ಬಾಹ್ಯಾಭ್ಯಂತರ ಶೌಚವುಳ್ಳವನಾಗಿ, ಉತ್ತಮವರ್ಣದವರನ್ನು ಸೇವೆ ಮಾಡುವವನಾಗಿ, ಮೃದುವಚನಗಳುಳ್ಳವನಾಗಿ, ಅಹಂಕಾರವಿಲ್ಲದವನಾಗಿ, ಬ್ರಾಹ್ಮಣಾದಿಗಳ ಆಶ್ರಯವನ್ನು ಪಡೆದ ಶೂದ್ರನು ಉತ್ತಮವಾದ ಜಾತಿಯನ್ನು ಪಡೆಯುವನು.

## X ಅಧ್ಯಾಯ

# ಮಿಶ್ರವರ್ಣಗಳು, ಜೀವನೋಪಾಯಗಳು

**ಅಧೀಯೀರಂಸ್ತ್ರಯೋ ವರ್ಣಾಃ ಸ್ವಕರ್ಮಸ್ಥಾ ದ್ವಿಜಾತಯಃ ।**
**ಪ್ರಬ್ರೂಯಾದ್ಬ್ರಾಹ್ಮಣಸ್ತ್ವೇಷಾಂ ನೇತರಾವಿತಿ ನಿಶ್ಚಯಃ ॥ ೧**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ತಮ್ಮ ತಮ್ಮ ವರ್ಣಗಳಿಗೆ ವಿಹಿತವಾದ ಕರ್ಮಗಳನ್ನು ಮಾಡುತ್ತ ವೇದಾಧ್ಯಯನವನ್ನು ಮಾಡುತ್ತಿರಬೇಕು. ಅವರ ಪೈಕಿ ಬ್ರಾಹ್ಮಣನೊಬ್ಬನೇ ಅಧ್ಯಾಪನವನ್ನು ಮಾಡಿಸಲು (ವೇದವನ್ನು ಕಲಿಸಲು) ಅರ್ಹನಾಗಿರುವನು. ಕ್ಷತ್ರಿಯ, ವೈಶ್ಯರು ತಾವು ಮಾತ್ರ ಕಲಿಯಬೇಕು; ಇತರರಿಗೆ ಕಲಿಸತೊಡಗಬಾರದು (ಅದು ಅವರ ಕರ್ಮವಲ್ಲ) ಎಂದು ನಿಶ್ಚಿತವಾಗಿದೆ.

**ವೈಶೇಷ್ಯಾತ್ಪ್ರಕೃತಿಶ್ರೈಷ್ಠ್ಯಾನ್ನಿಯಮಸ್ಯ ಚ ಧಾರಣಾತ್ ।**
**ಸಂಸ್ಕಾರಸ್ಯ ವಿಶೇಷಾಚ್ಚ ವರ್ಣಾನಾಂ ಬ್ರಾಹ್ಮಣಃ ಪ್ರಭುಃ ॥ ೨**

ಜಾತಿ ಸ್ವಭಾವಗಳಿಂದ ಶ್ರೇಷ್ಠನಾಗಿರುವುದರಿಂದಲೂ, ನಿಯಮಗಳನ್ನು ಪೂರ್ಣವಾಗಿ ಪಾಲಿಸುವುದರಿಂದಲೂ, ಸಂಸ್ಕಾರವಿಶೇಷದಿಂದಲೂ ವರ್ಣಗಳಲ್ಲಿ ಬ್ರಾಹ್ಮಣನು ಉತ್ತಮನು.

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತ್ರಯೋ ವರ್ಣಾ ದ್ವಿಜಾತಯಃ ।**
**ಚತುರ್ಥ ಏಕಜಾತಿಸ್ತು ಶೂದ್ರೋ ನಾಸ್ತಿ ತು ಪಂಚಮಃ ॥ ೩**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರೂ ದ್ವಿಜರು. ಉಳಿದ ನಾಲ್ಕನೆಯ ವರ್ಣದವರೆಲ್ಲ ಒಂದೇ ಜಾತಿಯವರು—ಶೂದ್ರರು. ಐದನೆಯದೆಂಬ ವರ್ಣವಿಲ್ಲ.

**ಸ್ತ್ರೀಷ್ವನಂತರಜಾತಾಸು ದ್ವಿಜೈರುತ್ಪಾದಿತಾನ್ಸುತಾನ್ ।**
**ಸದೃಶಾನೇವ ತಾನಾಹುರ್ಮಾತೃದೋಷವಿಗರ್ಹಿತಾನ್ ॥ ೪**

ತನಗಿಂತ ಕೆಳಗಿನ ಅನಂತರ ಜಾತಿಯಲ್ಲಿ ದ್ವಿಜರಿಂದ ಉತ್ಪನ್ನರಾದ ಮಕ್ಕಳು ಮಾತೃದೋಷದಿಂದ ನಿಂದ್ಯರಾಗುವರು; ಅವರನ್ನು ಪಿತೃಸದೃಶರು ಎಂದು ಹೇಳುವರು. (ಅವರು ಪಿತೃವರ್ಣಕ್ಕೆ ಸೇರಲಾರರು.)

(ಬ್ರಾಹ್ಮಣನಿಂದ ಕ್ಷತ್ರಿಯ ಸ್ತ್ರೀಯಲ್ಲಿ ಹುಟ್ಟಿದವನು ಮೂರ್ಧಾಭಿಷಿಕ್ತ; ಕ್ಷತ್ರಿಯನಿಂದ ವೈಶ್ಯಸ್ತ್ರೀಯಲ್ಲಿ ಉತ್ಪನ್ನನಾದವನು ಮಾಹಿಷ್ಯ; ವೈಶ್ಯನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು ಕರಣ—ಇವು ಆ ಮಿಶ್ರಸಂತಾನದ ವರ್ಣಗಳ ಹೆಸರುಗಳು. ಮೂರ್ಧಾಭಿಷಿಕ್ತನು ಹಸ್ತ್ಯಶ್ವರಥಾದಿಗಳನ್ನು ನಡೆಸಬಲ್ಲವನೂ ಶಸ್ತ್ರಾಸ್ತ್ರವಿದ್ಯೆಗಳನ್ನು ಕಲಿಯುವವನೂ ಆಗಬಹುದು; ಮಾಹಿಷ್ಯನು ನೃತ್ಯ ಗೀತಾದಿಗಳಿಂದಲೂ, ಜ್ಯೋತಿಷ, ಸಸ್ಯರಕ್ಷಣೆ ಮುಂತಾದ ವಿದ್ಯೆಗಳಿಂದಲೂ ಜೀವಿಸಬಹುದು; ಬ್ರಾಹ್ಮಣರ ಸೇವೆ, ಧನಧಾನ್ಯಗಳ ಮೇಲ್ವಿಚಾರಣೆ, ರಾಜಸೇವೆ, ಅಂತಃಪುರರಕ್ಷಣೆ ಮೊದಲಾದವು ಕರಣನಿಗೆ ವೃತ್ತಿಗಳು.)

**ಬ್ರಾಹ್ಮಣಾದ್ವೈಶ್ಯಕನ್ಯಾಯಾಮಂಬಷ್ಠೋ ನಾಮ ಜಾಯತೇ ।**
**ನಿಷಾದಃ ಶೂದ್ರಕನ್ಯಾಯಾಂ ಯಃ ಪಾರಶವ ಉಚ್ಯತೇ ॥ ೫**

ಬ್ರಾಹ್ಮಣನಿಂದ ವೈಶ್ಯಕನ್ಯೆಯಲ್ಲಿ ಹುಟ್ಟಿದವನು ಅಂಬಷ್ಠ, ಶೂದ್ರ ಕನ್ಯೆಯಲ್ಲಿ ಹುಟ್ಟಿದವನು ನಿಷಾದ ಅಥವಾ ಪಾರಶವ.

**ಕ್ಷತ್ರಿಯಾಚ್ಛೂದ್ರಕನ್ಯಾಯಾಂ ಕ್ರೂರಾಚಾರವಿಹಾರವಾನ್ ।**
**ಕ್ಷತ್ರಶೂದ್ರವಪುರ್ಜಂತುರುಗ್ರೋ ನಾಮ ಪ್ರಜಾಯತೇ ॥ ೬**

ಕ್ಷತ್ರಿಯನಿಂದ ಶೂದ್ರಕನ್ಯೆಯಲ್ಲಿ ಹುಟ್ಟಿದವನು ಕ್ರೂರವಾದ ಆಚಾರ

ವಿಹಾರಗಳನ್ನು ಉಳ್ಳವನಾಗಿ, ಕ್ಷತ್ರಿಯ ಶೂದ್ರರಿಬ್ಬರ ಗುಣಧರ್ಮಗಳನ್ನೂ ಹೊಂದಿದ ದೇಹವನ್ನು ಪಡೆದು, ಉಗ್ರ ಎಂಬ ವರ್ಣಕ್ಕೆ ಸೇರುವನು.

(ಮೇಲೆ ಹೇಳಿದ ಮೂರ್ಧಾಭಿಷಿಕ್ತಾದಿಗಳೆಲ್ಲ ವಿವಾಹಿತ ಸ್ತ್ರೀಯರಲ್ಲಿ ಹುಟ್ಟಿದವರೆಂದು ತಿಳಿಯಬೇಕು. ಇವರು ಅನುಲೋಮ ವಿವಾಹದ ಪ್ರಜೆಗಳು; ಎಂದರೆ, ತಂದೆಗಿಂತ ಕಡಿಮೆ ವರ್ಣದ ತಾಯಿಯುಳ್ಳವರು.)

**ಕ್ಷತ್ರಿಯಾದ್ವಿಪ್ರಕನ್ಯಾಯಾಂ ಸೂತೋ ಭವತಿ ಜಾತಿತಃ ।**
**ವೈಶ್ಯಾನ್ಮಾಗಧವೈದೇಹೌ ರಾಜವಿಪ್ರಾಂಗನಾಸುತೌ ॥** ೭

ಕ್ಷತ್ರಿಯನಿಂದ ಬ್ರಾಹ್ಮಣಕನ್ಯೆಯಲ್ಲಿ ಹುಟ್ಟಿದವನು ಜಾತಿಯಿಂದ ಸೂತನು. ವೈಶ್ಯನಿಂದ ಬ್ರಾಹ್ಮಣಕನ್ಯೆಯಲ್ಲಿ ಹುಟ್ಟಿದವನು ವೈದೇಹ; ಕ್ಷತ್ರಿಯಕನ್ಯೆಯಲ್ಲಿ ಹುಟ್ಟಿದವನು ಮಾಗಧ.

**ಶೂದ್ರಾದಾಯೋಗವಃ ಕ್ಷತ್ತಾ ಚಂಡಾಲಶ್ಚಾಧಮೋ ನೃಣಾಮ್ ।**
**ವೈಶ್ಯರಾಜನ್ಯವಿಪ್ರಾಸು ಜಾಯಂತೇ ವರ್ಣಸಂಕರಾಃ ॥** ೮

ಶೂದ್ರನಿಂದ ವೈಶ್ಯ, ಕ್ಷತ್ರಿಯ, ಬ್ರಾಹ್ಮಣವರ್ಣದವರ ಸ್ತ್ರೀಯರಲ್ಲಿ ಹುಟ್ಟಿದವರನ್ನು ಕ್ರಮವಾಗಿ ಆಯೋಗವ, ಕ್ಷತ್ತಾ, ಚಂಡಾಲ ಎಂದು ಕರೆಯುತ್ತಾರೆ. ಚಂಡಾಲನೇ ಮನುಷ್ಯರಲ್ಲಿ ಅಧಮನು. ಇವರೆಲ್ಲ ಸಂಕರ (ಮಿಶ್ರ) ವರ್ಣದವರು.

(ಇವು ಪ್ರತಿಲೋಮ ಸಂತಾನಗಳು, ತಾಯಿಯ ವರ್ಣವು ತಂದೆಯದಕ್ಕಿಂತ ಮೇಲು; ಆದರೆ ಇಲ್ಲಿ ಸ್ತ್ರೀ ವಿವಾಹಿತಳಾಗಿರಬೇಕಾಗಿಲ್ಲ. ಏಕೆಂದರೆ, ಅಂತಹ ವಿವಾಹ ನಿಷಿದ್ಧ.)

**ವ್ಯಭಿಚಾರೇಣ ವರ್ಣಾನಾಮವೇದ್ಯಾವೇದನೇನ ಚ ।**
**ಸ್ವಕರ್ಮಣಾಂ ಚ ತ್ಯಾಗೇನ ಜಾಯಂತೇ ವರ್ಣಸಂಕರಾಃ ॥** ೯

ಅನ್ಯವರ್ಣದವರೊಡನೆ ಸಂಪರ್ಕ (ವ್ಯಭಿಚಾರ) ಹೊಂದುವುದರಿಂದಲೂ, ನಿಷಿದ್ಧವಾದ ವಿವಾಹಗಳಿಂದಲೂ, ಸ್ವವರ್ಣೋಚಿತವಾದ ಕರ್ಮಗಳನ್ನು ಬಿಡುವುದರಿಂದಲೂ ವರ್ಣಸಂಕರವಾಗುವುದು.

(ಶುದ್ಧವರ್ಣದ ಬ್ರಾಹ್ಮಣಕ್ಷತ್ರಿಯವೈಶ್ಯರು, ಶೂದ್ರರು ಮತ್ತೆ ಮೂರ್ಧಾಭಿಷಿಕ್ತಾದಿ ಮಿಶ್ರವರ್ಣದವರೊಡನೆ ಬೆರೆತು ಸಂತಾನ ಪಡೆಯು

*

ವುದರಿಂದಲೂ, ಅಂಬಷ್ಠ, ಉಗ್ರ ಮುಂತಾದ ಮಿಶ್ರವರ್ಣದವರ ಪರಸ್ಪರ ಸಂಯೋಗಗಳಿಂದಲೂ ಅನೇಕವಾಗಿ ಹೊಸ ಮಿಶ್ರವರ್ಣದವರು ಹುಟ್ಟಿ ವರು. ಅವರಲ್ಲಿ ಅನೇಕ ವರ್ಣದವರ ಹೆಸರು, ಉದ್ಯೋಗಗಳನ್ನು ಮನು ತಿಳಿಸಿದ್ದಾನೆ. ನಮ್ಮ ದೇಶಕ್ಕೆ ಹೊರಗಿನಿಂದ ಬಂದ ಶಕ, ಹೂಣ, ಯವನ, ಪಾರಸೀಕ ಮೊದಲಾದ ಅನೇಕ ಮ್ಲೇಚ್ಛಜಾತಿಯವರೊಡನೆ ಇಲ್ಲಿಯವರು ಬೆರೆತುದರಿಂದಲೂ ಅನೇಕ ಸಂಕರಜಾತಿಗಳು ಹುಟ್ಟಿದವು. ಸಂಕರತ್ವವು ಬಹುವಾಗಿ ಹೆಚ್ಚಿದುದರಿಂದಲೇ ಸಂಕರವರ್ಣದ ಜನರಿಗೆ ಸಮಾಜದಲ್ಲಿ ಸ್ಥಾನವನ್ನು ಕಲ್ಪಿಸಿ, ಅವರನ್ನು ಧರ್ಮಶಾಸ್ತ್ರದಲ್ಲಿ ವರ್ಗೀಕರಿಸಬೇಕಾಯಿತು. ಈಗ ಶುದ್ಧವರ್ಣದವರು ಯಾರೆಂದು ಹೇಳುವುದೇ ಕಷ್ಟವಾಗುವಷ್ಟು ದೇಶದಲ್ಲಿ ವರ್ಣಸಾಂಕರ್ಯವಿದೆ.)

**ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯಜಾತಯಃ ।**
**ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾದರ್ಶನೇನ ಚ ॥ ೧೦**

ಕಾಲಕ್ರಮದಲ್ಲಿ ಸ್ವಲ್ಪ ಸ್ವಲ್ಪವಾಗಿ ತಮ್ಮ ಕರ್ಮಗಳನ್ನು ಬಿಟ್ಟುದರಿಂದಲೂ, ತಮ್ಮ ಯಜ್ಞ, ಅಧ್ಯಯನ, ಪ್ರಾಯಶ್ಚಿತ್ತಗಳಿಗಾಗಿ ಬ್ರಾಹ್ಮಣರನ್ನು ಪಡೆಯಲಾಗದುದರಿಂದಲೂ ಲೋಕದಲ್ಲಿ ಕ್ಷತ್ರಿಯರು ಶೂದ್ರತ್ವವನ್ನು ಹೊಂದಿದರು.

(ಈ ಮಾತು ತಮ್ಮ ಅಧ್ಯಯನಾದಿ ಅನೇಕ ಸ್ವವಿಹಿತ ಕರ್ಮಗಳನ್ನು ಬಿಟ್ಟಿರುವ ಬ್ರಾಹ್ಮಣರಿಗೂ ಈಗ ಅನ್ವಯಿಸುತ್ತದೆ.)

**ಮುಖಬಾಹೂರುಪಜ್ಜಾನಾಂ ಯಾ ಲೋಕೇ ಜಾತಯೋ ಬಹಿಃ ।**
**ಮ್ಲೇಚ್ಛವಾಚಶ್ಚಾರ್ಯವಾಚಃ ಸರ್ವೇ ತೇ ದಸ್ಯವಃ ಸ್ಮೃತಾಃ ॥ ೧೧**

ಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗಿಂತ ಭಿನ್ನ ಜಾತಿಯವರಾಗಿದ್ದು, ಮ್ಲೇಚ್ಛಭಾಷೆಯನ್ನಾಗಲಿ ಆರ್ಯಭಾಷೆಯನ್ನಾಗಲಿ ಆಡುವವರೆಲ್ಲ ದಸ್ಯುಗಳು.

**ಪಿತ್ರ್ಯಂ ವಾ ಭಜತೇ ಶೀಲಂ ಮಾತುರ್ವೋಭಯಮೇವ ವಾ ।**
**ನ ಕಥಂಚನ ದುರ್ಯೋನಿಃ ಪ್ರಕೃತಿಂ ಸ್ವಾಂ ನಿಯಚ್ಛತಿ ॥ ೧೨**

ಸಂಕರಜಾತವಾದ ದುಷ್ಟಯೋನಿಯ ಸಂತಾನವು ತಂದೆಯ ಶೀಲವನ್ನಾಗಲಿ, ತಾಯಿಯ ಶೀಲವನ್ನಾಗಲಿ ಅಥವಾ ಅವರಿಬ್ಬರ ಶೀಲಗಳನ್ನಾಗಲಿ ಪಡೆಯುತ್ತದೆ. ತನ್ನ ದುಃಸ್ವಭಾವವನ್ನು ಎಂದಿಗೂ ಅದು ತಡೆಯಲಾರದು.

**ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ॥ ೧೩**

ಅಹಿಂಸೆ, ಸತ್ಯ, ಅಸ್ತೇಯ (ಕದಿಯದೆ ಇರುವಿಕೆ), ಶೌಚ, ಇಂದ್ರಿಯನಿಗ್ರಹ—ಇವುಗಳನ್ನು ಅನುಷ್ಠಾನದಲ್ಲಿ ತರಬೇಕಾದುದು ನಾಲ್ಕು ವರ್ಣದವರಿಗೂ ಧರ್ಮವೆಂದು ಸಂಕ್ಷೇಪವಾಗಿ ಮನು ಹೇಳಿದನು.

(ಸಂಕರವರ್ಣದವರಿಗೂ ಇವು ಅನ್ವಯಿಸುವುವು)

**ಶೂದ್ರಾಯಾಂ ಬ್ರಾಹ್ಮಣಾಜ್ಜಾತಃ ಶ್ರೇಯಸಾ ಚೇತ್ಪ್ರಜಾಯತೇ ।**
**ಅಶ್ರೇಯಾನ್ ಶ್ರೇಯಸೀಂ ಜಾತಿಂ ಗಚ್ಛತ್ಯಾಸಪ್ತಮಾದ್ಯುಗಾತ್ ॥**

ಉತ್ತಮವರ್ಣದವನಾದ ಬ್ರಾಹ್ಮಣಪತಿಯಿಂದ ಶೂದ್ರಸ್ತ್ರೀಯಲ್ಲಿ ಪಾರಶವ ಎಂಬ ವರ್ಣದ ಸಂತತಿಯಾಗುವುದಷ್ಟೆ. ಅದು ಸ್ತ್ರೀಪ್ರಜೆಯಾಗಿದ್ದು, ಆಮೇಲೆ ಅವಳು ಮತ್ತೊಬ್ಬ ಬ್ರಾಹ್ಮಣನಿಂದ ಮಗಳನ್ನು ಪಡೆಯಲಿ. ಹೀಗೆ ಮಿಶ್ರವಿವಾಹಗಳಿಂದ ಹೆಣ್ಣುಮಕ್ಕಳೇ ಹುಟ್ಟಿ, ಅವೆಲ್ಲ ಮತ್ತೆಮತ್ತೆ ಉತ್ತಮನಾದ ಬ್ರಾಹ್ಮಣನೊಡನೆಯೇ ಸಂಬಂಧಮಾಡಿದರೆ ಸಂತತಿಯ ವರ್ಣ ಉತ್ತಮವಾಗುತ್ತಾಹೋಗಿ, ಏಳನೆಯ ತಲೆಯಲ್ಲಿ ಬ್ರಾಹ್ಮಣವರ್ಣದ್ದೇ ಆಗುವುದು.

"ಜಾತ್ಯುತ್ಕರ್ಷೋ ಯುಗೇ ಜ್ಞೇಯಃ ಸಪ್ತಮೇ ಪಂಚಮೇಽಪಿ ವಾ" ಎಂದರೆ ಬ್ರಾಹ್ಮಣನದೆಸೆಯಿಂದ ಏಳನೆಯ ತಲೆಯಲ್ಲಿಯೂ, ಕ್ಷತ್ರಿಯನ ದೆಸೆಯಿಂದ ಐದನೆಯ ತಲೆಯಲ್ಲಿಯೂ ಜಾತಿಯಿಂದ ಮೇಲೇರಬಹುದು, ಎಂದು ಯಾಜ್ಞವಲ್ಕ್ಯನ ಮತ.

**ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಮ್ ।**
**ಕ್ಷತ್ರಿಯಾಜ್ಜಾತಮೇವಂ ತು ವಿದ್ಯಾದ್ವೈಶ್ಯಾತ್ತಥೈವ ಚ ॥ ೧೫**

ಈ ರೀತಿಯಲ್ಲಿ ಪುನಃ ಪುನಃ ಉತ್ತಮ ಪುರುಷನ ಸಂಗಮಾಡುವುದರಿಂದ ಶೂದ್ರನು ಬ್ರಾಹ್ಮಣ್ಯವನ್ನು ಹೊಂದಬಹುದು; ಅಧಮ ವರ್ಣದವರೊಡನೆಯೇ ಸಂಗಮಾಡುತ್ತಾ ಹೋಗುವುದರಿಂದ ಬ್ರಾಹ್ಮಣನೂ ಶೂದ್ರತ್ವವನ್ನು ಹೊಂದುಬಹುದು. ಕ್ಷತ್ರಿಯ ವೈಶ್ಯರುಗಳೂ ಇದೇ ರೀತಿಯಲ್ಲಿ (ಆದರೆ ಇನ್ನೂ ಕಡಿಮೆಯಾದ ಕಾಲಾಂತರದಲ್ಲಿ) ವರ್ಣಗಳ ಉತ್ಕರ್ಷ, ಅಪಕರ್ಷಗಳನ್ನು ಪಡೆಯಬಹುದು.

(ಶ್ರೇಷ್ಠನಾದ ಬ್ರಾಹ್ಮಣಪುರುಷನು ಅನ್ಯವರ್ಣದ ಸಂಪರ್ಕವನ್ನು ಹೊಂದಿದರೂ ಸಂತತಿಯು ವರ್ಣವನ್ನು ಉಳಿಸಿಕೊಳ್ಳಬಹುದೆಂಬುದನ್ನು, ಜಮದಗ್ನಿಯ ಮಗ ಪರಶುರಾಮನೂ, ಗೌತಮನ ಮಗ ಶತಾನಂದನೂ, ಪರಾಶರನ ಮಗ ಕೃಷ್ಣದ್ವೈಪಾಯನನೂ ಬ್ರಾಹ್ಮಣರೆಂದೇ ಪರಿಗಣಿಸಲ್ಪಟ್ಟಿರುವುದರಿಂದ ತಿಳಿಯಬಹುದು.)

**ಜಾತೋ ನಾರ್ಯಾಮನಾರ್ಯಾಯಾಮಾರ್ಯಾದಾರ್ಯೋ**
**ಭವೇದ್ಗುಣೈಃ ।**
**ಜಾತೋಽಪ್ಯನಾರ್ಯಾದಾರ್ಯಾಯಾಮನಾರ್ಯ ಇತಿ ನಿಶ್ಚಯಃ ॥**

ಅನಾರ್ಯರಾದ ಶೂದ್ರಾದಿ ಸ್ತ್ರೀಯರಲ್ಲಿ ಆರ್ಯರಾದ ಬ್ರಾಹ್ಮಣಾದಿ ಪುರುಷರಿಂದ ಹುಟ್ಟಿದ ಸಂತಾನವು ಗುಣಗಳಿಂದ ಆರ್ಯವೇ ಆಗುವುದು (ಅಂಥವರು ಪಾಕಕರ್ಮ ಯಜ್ಞಾದಿಗಳನ್ನು ಮಾಡಲು ಅರ್ಹರಾಗುತ್ತಾರೆ). ಅನಾರ್ಯಪುರುಷನಿಂದ ಆರ್ಯಸ್ತ್ರೀಯಲ್ಲಿ ಹುಟ್ಟಿದ ಸಂತಾನ ಅನಾರ್ಯವೇ.

**ಸುಬೀಜಂ ಚೈವ ಸುಕ್ಷೇತ್ರೇ ಜಾತಂ ಸಂಪದ್ಯತೇ ಯಥಾ ।**
**ತಥಾಽರ್ಯಾಜ್ಜಾತ ಆರ್ಯಾಯಾಂ ಸರ್ವಂ ಸಂಸ್ಕಾರಮರ್ಹತಿ ॥**

ಒಳ್ಳೆಯ ಬೀಜವು ಒಳ್ಳೆಯ ಕ್ಷೇತ್ರದಲ್ಲಿ ಬಿತ್ತಲ್ಪಟ್ಟರೆ ಉತ್ತಮ ಫಲವನ್ನು ಕೊಡುವುದು. ಹಾಗೆಯೇ ಆರ್ಯರಾದ ದ್ವಿಜರಿಂದ ಆರ್ಯರಾದ ಸವರ್ಣಸ್ತ್ರೀಯರಲ್ಲಿ ಹುಟ್ಟಿದವರು ಉಪನಯನಾದಿ ಸಂಸ್ಕಾರಗಳಿಗೆಲ್ಲ ಅರ್ಹರಾಗುವರು.-

**ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।**
**ದಾನಂ ಪ್ರತಿಗ್ರಹಶ್ಚೈವ ಷಟ್ಕರ್ಮಾಣ್ಯಗ್ರಜನ್ಮನಃ ॥** ೧೮

ತಾನು ವೇದವನ್ನು ಅಧ್ಯಯನಮಾಡುವುದು, ಪರರಿಗೆ ಅಧ್ಯಯನ ಮಾಡಿಸುವುದು (ಅಧ್ಯಾಪನ); ತಾನು ಯಾಗಮಾಡುವುದು, ಮತ್ತೊಬ್ಬರಿಂದ ಯಾಗಮಾಡಿಸುವುದು (ಯಾಜನ); ತಾನು ಪರರಿಗೆ ದಾನ ಕೊಡುವುದು, ಇತರರು ಕೊಟ್ಟದ್ದನ್ನು ಸ್ವೀಕರಿಸುವುದು (ಪ್ರತಿಗ್ರಹ)— ಈ ಆರೂ ಬ್ರಾಹ್ಮಣನಿಗೆ ವಿಹಿತವಾದ ಕರ್ಮಗಳು.

**ಷಣ್ಣಾಂ ತು ಕರ್ಮಣಾಮಸ್ಯ ತ್ರೀಣಿ ಕರ್ಮಾಣಿ ಜೀವಿಕಾ ।**
**ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ ॥** ೧೯

ಈ ಆರು ಕರ್ಮಗಳಲ್ಲಿ ಯಜ್ಞಮಾಡಿಸುವುದು, ಅಧ್ಯಯನಮಾಡಿಸುವುದು ಮತ್ತು ಆಚಾರಶುದ್ಧರಾದವರಿಂದ ದಾನ ತೆಗೆದುಕೊಳ್ಳುವುದು, ಈ ಮೂರೂ ಜೀವನೋಪಾಯಕ್ಕಾಗಿ ಸಂಪಾದನೆಯ ಮಾರ್ಗಗಳು.

**ಶಸ್ತ್ರಾಸ್ತ್ರಭೃತ್ತ್ವಂ ಕ್ಷತ್ರಸ್ಯ ವಣಿಕ್ಪಶುಕೃಷಿರ್ವಿಶಃ ।**
**ಆಜೀವನಾರ್ಥಂ ಧರ್ಮಸ್ತು ದಾನಮಧ್ಯಯನಂ ಯಜಿಃ ॥** ೨೦

ಖಡ್ಗಾದಿ ಶಸ್ತ್ರಗಳು, ಬಾಣಾದಿ ಅಸ್ತ್ರಗಳು ಇವನ್ನು ಧರಿಸಿ (ಆಯುಧಪಾಣಿಯಾದ ಸೈನಿಕನಾಗಿ ಪ್ರಜಾರಕ್ಷಕನಾಗಿ) ಕ್ಷತ್ರಿಯನು ಜೀವನವನ್ನು ನಡೆಸಬೇಕು, ವಾಣಿಜ್ಯ, ಪಶುಪಾಲನೆ, ಕೃಷಿ ಇವು ವೈಶ್ಯನ ಜೀವನೋಪಾಯಗಳು. ಆದರೆ ಧರ್ಮಸಾಧನೆಗಾಗಿ ಈ ಎರಡು ವರ್ಣದವರಿಗೂ ದಾನ, ಅಧ್ಯಯನ, ಯಜ್ಞ ಎಂಬ ಮೂರು ಕರ್ಮಗಳುಂಟು.

**ಅಜೀವಂಸ್ತು ಯಥೋಕ್ತೇನ ಬ್ರಾಹ್ಮಣಃ ಸ್ವೇನ ಕರ್ಮಣಾ ।**
**ಜೀವೇತ್ ಕ್ಷತ್ರಿಯಧರ್ಮೇಣ ಸ ಹ್ಯಸ್ಯ ಪ್ರತ್ಯನಂತರಃ ॥** ೨೧

ತನಗೆ ವಿಹಿತವಾದ ಕರ್ಮದಿಂದ ಜೀವನವನ್ನು ನಿರ್ವಹಿಸಲಾಗದ ಬ್ರಾಹ್ಮಣನು ಆಯುಧಪಾಣಿಯಾಗಿ ಕ್ಷಾತ್ರಧರ್ಮವನ್ನು ಅನುಸರಿಸಬಹುದು; ಅದು ಅವನಿಗೆ ಅತಿ ಸಮೀಪವರ್ತಿಯಾದ ಮುಂದಿನ ವೃತ್ತಿಯಾಗಿದೆ. (ಉದಾಹರಣೆಗೆ ದ್ರೋಣ.)

**ಉಭಾಭ್ಯಾಮಪ್ಯಜೀವಂಸ್ತು ಕಥಂ ಸ್ಯಾದಿತಿ ಚೇದ್ಭವೇತ್ ।**
**ಕೃಷಿಗೋರಕ್ಷಮಾಸ್ಥಾಯ ಜೀವೇದ್ವೈಶ್ಯಸ್ಯ ಜೀವಿಕಾಮ್ ॥** ೨೨

ಬ್ರಾಹ್ಮಣ ಕ್ಷತ್ರಿಯ ವೃತ್ತಿಗಳೆರಡರಿಂದಲೂ ಜೀವನವನ್ನು ಸಾಗಿಸಲಾಗದಿದ್ದರೆ, ಮುಂದಿನ ವೃತ್ತಿಯಾದ ವೈಶ್ಯಜೀವನವನ್ನು ಅವಲಂಬಿಸಿ ಕೃಷಿ ಮತ್ತು ಪಶುಪಾಲನೆಗಳನ್ನು ಮಾಡಬಹುದು.

**ವೈಶ್ಯವೃತ್ತ್ಯಾಪಿ ಜೀವಂಸ್ತು ಬ್ರಾಹ್ಮಣಃ ಕ್ಷತ್ರಿಯೋಽಪಿ ವಾ ।**
**ಹಿಂಸಾಪ್ರಾಯಾಂ ಪರಾಧೀನಾಂ ಕೃಷಿಂ ಯತ್ನೇನ ವರ್ಜಯೇತ್ ॥**

ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ಆಪದ್ಧರ್ಮವೆಂದು ವೈಶ್ಯವೃತ್ತಿಯನ್ನು ಅವಲಂಬಿಸುವಾಗ ಕೃಷಿಯನ್ನು ಪ್ರಯತ್ನಪಟ್ಟು ಬಿಟ್ಟುಬಿಡಬೇಕು; ಏಕೆಂದರೆ, ಭೂಮಿಯನ್ನು ಉಳುವುದರಿಂದ ನಾನಾ ಜೀವಜಂತುಗಳು ನಾಶವಾಗುವುದರಿಂದಲೂ, ಆ ಕಾರ್ಯಕ್ಕಾಗಿ ಎತ್ತು ಮುಂತಾದ ಪ್ರಾಣಿಗಳನ್ನು ಅವಲಂಬಿಸಬೇಕಾಗುವುದರಿಂದಲೂ ಕೃಷಿಯು ಉತ್ತಮ ವರ್ಣದವರಿಗೆ ವಿಹಿತವಾಗಿಲ್ಲ. ಕೃಷಿ ವಿಶೇಷವಾಗಿ ಆಪದ್ಧರ್ಮವಾಗುವುದು.

**ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ ।**
**ಪರಧರ್ಮೇಣ ಜೀವನ್ಹಿ ಸದ್ಯಃ ಪತತಿ ಜಾತಿತಃ ॥** ೨೪

ತನಗೆ ವಿಧಿಸಲ್ಪಟ್ಟಿರುವ ಧರ್ಮವು ಕಡಿಮೆ ಗುಣಗಳುಳ್ಳುದಾಗಿದ್ದರೂ ಚೆನ್ನಾಗಿ ಅನುಸರಿಸಲ್ಪಟ್ಟ ಪರಧರ್ಮಕ್ಕಿಂತ ಅದೇ ಮೇಲು. ಇತರರಿಗಾಗಿ ಹೇಳಿದ ಧರ್ಮವನ್ನು ಆಚರಿಸುವವನು ಕೂಡಲೆ ತನ್ನ ಜಾತಿಯಿಂದ ಕೆಳಗೆ ಇಳಿಯುತ್ತಾನೆ.

**ವೈಶ್ಯೋಽಜೀವನ್ ಸ್ವಧರ್ಮೇಣ ಶೂದ್ರವೃತ್ತ್ಯಾಪಿ ವರ್ತಯೇತ್ ।**
**ಅನಾಚರನ್ನಕಾರ್ಯಾಣಿ ನಿವರ್ತೇತ ಚ ಶಕ್ತಿಮಾನ್ ॥** ೨೫

ತನ್ನ ಧರ್ಮದಿಂದ ಜೀವನ ನಡೆಸಲು ಸಾಧ್ಯವಿಲ್ಲದ ವೈಶ್ಯನು ಶೂದ್ರವೃತ್ತಿಯನ್ನಾದರೂ ಆಚರಿಸಬಹುದು (ಬ್ರಾಹ್ಮಣರ ಸೇವೆ, ಅವರು ಕೊಟ್ಟ ಅನ್ನ ತಿನ್ನುವುದು, ಇತ್ಯಾದಿ). ಆದರೆ ಅಕಾರ್ಯಗಳನ್ನು (ಎಂಜಲು ತಿನ್ನುವುದು, ಇತ್ಯಾದಿ) ಮಾಡಬಾರದು. ತನಗೆ ಒದಗಿದ ಆಪತ್ತು ತೀರಿ, ತಾನು ಮತ್ತೆ ಶಕ್ತನಾದಮೇಲೆ ಶೂದ್ರವೃತ್ತಿಯನ್ನು ಬಿಟ್ಟುಬಿಡಬೇಕು.

**ಅಶಕ್ನುವಂಸ್ತು ಶುಶ್ರೂಷಾಂ ಶೂದ್ರಃ ಕರ್ತುಂ ದ್ವಿಜನ್ಮನಾಮ್ ।**
**ಪುತ್ರದಾರಾತ್ಯಯಂ ಪ್ರಾಪ್ತೋ ಜೀವೇತ್ಕಾರುಕಕರ್ಮಭಿಃ ॥** ೨೬

ದೇಹದೌರ್ಬಲ್ಯದಿಂದ ಬ್ರಾಹ್ಮಣಾದಿಗಳ ಸೇವೆ ಮಾಡಿಕೊಂಡು ಜೀವನವನ್ನು ಸಾಗಿಸಲು ಅಸಮರ್ಥನಾಗಿ, ಹೆಂಡತಿ ಮಕ್ಕಳನ್ನು ಕಳೆದು ಕೊಂಡು, ನಿರಾಧಾರನಾದ ಶೂದ್ರನು ಕಾರುಗಳಾದ ಸೂಪಕಾರ, ಮಾಲಾಕಾರ ಮೊದಲಾದವರ ಕೆಲಸಗಳನ್ನು ಮಾಡಿ ಜೀವಿಸಬಹುದು.

**ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।**
**ಆಕಾಶಮಿವ ಪಂಕೇನ ನ ಸ ಪಾಪೇನ ಲಿಪ್ಯತೇ ॥ ೧೭**

ಪ್ರಾಣವೇ ಹೋಗುವಂತಹ ಸಂದರ್ಭದಲ್ಲಿ ಯಾರು ಯಾರಿಂದಲಾದರೂ ಸ್ವೀಕರಿಸಿ ಅನ್ನವನ್ನು ತಿಂದರೆ, ಹೇಗೆ ಆಕಾಶಕ್ಕೆ ಕೆಸರು ಅಂಟಿಕೊಳ್ಳುವು ದಿಲ್ಲವೋ, ಹಾಗೆ ಅವನು ಪಾಪವನ್ನು ಹೊಂದುವುದಿಲ್ಲ.

**ಅಜೀಗರ್ತಃ ಸುತಂ ಹಂತುಮುಪಾಸರ್ಪದ್ಬುಭುಕ್ಷಿತಃ ।**
**ನ ಚಾಲಿಪ್ಯತ ಪಾಪೇನ ಕ್ಷುತ್ಪ್ರತೀಕಾರಮಾಚರನ್ ॥ ೧೮**

ಹಸಿವಿನಿಂದ ಬಳಲಿದ್ದ (ಬಡತನಕ್ಕೆ ಬಲಿಯಾಗಿದ್ದ) ಅಜೀಗರ್ತನೆಂಬ ಬ್ರಾಹ್ಮಣನು ತನ್ನ ಮಗನಾದ ಶುನಶ್ಶೇಪನನ್ನು ಮಾರಿ, ಪುನಃ ಹಣಕ್ಕಾಗಿ ಯಜ್ಞದಲ್ಲಿ ಅವನನ್ನು ಕೊಲ್ಲಲು ತಾನಾಗಿ ಮುಂದೆ ಬಂದನು. ಹಾಗೆ ಹಸಿವಿನ ನಿವಾರಣೆಗಾಗಿ ಮಾಡಿದ ಆ ಕಾರ್ಯದಿಂದ ಅವನಿಗೆ ಪಾಪ ತಟ್ಟಲಿಲ್ಲ.

**ಭರದ್ವಾಜಃ ಕ್ಷುಧಾರ್ತಸ್ತು ಸಪುತ್ರೋ ವಿಜನೇ ವನೇ ।**
**ಬಹ್ವೀರ್ಗಾಃ ಪ್ರತಿಜಗ್ರಾಹ ವೃಧೋಸ್ತಕ್ಷ್ಣೋ ಮಹಾತಪಾಃ ॥ ೧೯**

ಮಹಾತಪಸ್ವಿಯಾದ ಭರದ್ವಾಜ ಋಷಿಯು ತನ್ನ ಮಕ್ಕಳೊಂದಿಗೆ ಜನರಹಿತವಾದ ಅರಣ್ಯದಲ್ಲಿ ಸಂಚರಿಸುತ್ತಾ ಹಸಿವಿನಿಂದ ಬಳಲಿದ್ದಾಗ ವೃಧು ಎಂಬ ಬಡಗಿಯಿಂದ ಅನೇಕ ಹಸುಗಳನ್ನು ಆಹಾರಕ್ಕಾಗಿ ಸ್ವೀಕರಿಸಿದನು.

**ಕ್ಷುಧಾರ್ತಶ್ಚಾತ್ತುಮಭ್ಯಾಗಾದ್ವಿಶ್ವಾಮಿತ್ರಃ ಶ್ವಜಾಘನೀಮ್ ।**
**ಚಂಡಾಲಹಸ್ತಾದಾದಾಯ ಧರ್ಮಾಧರ್ಮವಿಚಕ್ಷಣಃ ॥ ೨೦**

ಹಸಿವಿನಿಂದ ಕಂಗೆಟ್ಟಿದ್ದ ವಿಶ್ವಾಮಿತ್ರನು ಧರ್ಮಜ್ಞನಾಗಿದ್ದರೂ ಚಂಡಾಲನ ಕೈಯಿಂದಲೇ ನಾಯಿಯ ಜಘನಪ್ರದೇಶದ ಮಾಂಸವನ್ನು ತಿನ್ನಲು ಮುಂದಾದನು.

(ಆದರೆ ಆವನು ಅದನ್ನು ತಿನ್ನಲಿಲ್ಲ. "ಸ ಸಂಹೃತ್ಯ ಚ ತತ್ಕರ್ಮ ಅನಾಸ್ವಾದ್ಯ ಚ ತದ್ಧವಿಃ। ತೋಷಯಾಮಾಸ ದೇವಾಂಶ್ಚ ಪಿತೄಂಶ್ಚ ದ್ವಿಜಸತ್ತಮ ॥"—ಶಾಂತಿಪರ್ವ)

(ಧರ್ಮಾಧರ್ಮಗಳನ್ನು ಚೆನ್ನಾಗಿ ಬಲ್ಲ ವಾಮದೇವಋಷಿಯೂ ಕ್ಷುತ್ಪೀಡಿತನಾಗಿದ್ದಾಗ ತನ್ನ ಪ್ರಾಣಗಳನ್ನು ಉಳಿಸಿಕೊಳ್ಳಲು ನಾಯಿಯ ಮಾಂಸವನ್ನು ತಿನ್ನಲು ಆಪೇಕ್ಷಿಸಿದುದರಿಂದ ಪಾಪಭಾಗಿಯಾಗಲಿಲ್ಲ.)

**ಯಾಜನಾಧ್ಯಾಪನೇ ನಿತ್ಯಂ ಕ್ರಿಯತೇ ಸಂಸ್ಕೃತಾತ್ಮನಾಮ್ ।**
**ಪ್ರತಿಗ್ರಹಸ್ತು ಕ್ರಿಯತೇ ಶೂದ್ರಾದಪ್ಯಂತ್ಯಜನ್ಮನಃ ॥** ೩೧

ಯಾಜನ ಮತ್ತು ಅಧ್ಯಾಪನವೆಂಬ ಜೀವನೋಪಾಯಗಳು ಯಾವಾಗಲೂ ಉಪನಯನಾದಿ ಸಂಸ್ಕಾರಗಳನ್ನು ಪಡೆದ ದ್ವಿಜರಿಗೋಸ್ಕರ ಮಾಡುವ ಕರ್ಮಗಳಾಗುವುವು. ಆದರೆ ಪ್ರತಿಗ್ರಹವೆಂಬುದನ್ನು ಅಂತ್ಯ ವರ್ಣದ ಸಂಸ್ಕಾರರಹಿತನಾದ ಶೂದ್ರನಿಂದಲೂ ಮಾಡಬಹುದು.

(ಆದುದರಿಂದ ಪ್ರತಿಗ್ರಹವು ಯಾಜನಾಧ್ಯಾಪನಗಳಿಗಿಂತ ಹೀನವೃತ್ತಿ.)

**ಜಪಹೋಮೈರಪೈತ್ಯೇನೋ ಯಾಜನಾಧ್ಯಾಪನೈಃ ಕೃತಮ್ ।**
**ಪ್ರತಿಗ್ರಹನಿಮಿತ್ತಂ ತು ತ್ಯಾಗೇನ ತಪಸೈವ ಚ ॥** ೩೨

ಆಯೋಗ್ಯರಾದವರಿಗೆ ಯಾಜನ, ಅಧ್ಯಾಪನ ಮಾಡಿಸಿದುದರಿಂದ ಬಂದ ಪಾಪಗಳನ್ನು ಜಪ ಹೋಮಗಳನ್ನು ಮಾಡಿ ಕಳೆದುಕೊಳ್ಳಬಹುದು. ಆದರೆ ದುಷ್ಟಪ್ರತಿಗ್ರಹದಿಂದ ಬಂದ ಪಾಪವು ಸ್ವೀಕರಿಸಿದ ಹಣವನ್ನು ಹಿಂದಿರುಗಿ ಕೊಟ್ಟುಬಿಡುವುದರಿಂದಲೂ ತಪಸ್ಸನ್ನು ಮಾಡುವುದರಿಂದಲೂ ಹೋಗುತ್ತದೆ.

**ಶಿಲೋಂಛಮಪ್ಯಾದದೀತ ವಿಪ್ರೋಽಜೀವನ್ಯತಸ್ತತಃ ।**
**ಪ್ರತಿಗ್ರಹಾಚ್ಛಿಲಃ ಶ್ರೇಯಾನ್ ತತೋಽಪ್ಯುಂಛಃ ಪ್ರಶಸ್ಯತೇ ॥** ೩೩

ತನ್ನ ವೃತ್ತಿಗಳಾದ ಯಾಜನ ಅಧ್ಯಾಪನಗಳಿಂದ ಜೀವಿಸಲು ಅಸಮರ್ಥನಾದ ಬ್ರಾಹ್ಮಣನು ಶಿಲ, ಉಂಛಗಳೆಂಬ ವೃತ್ತಿಗಳನ್ನಾದರೂ ಸ್ವೀಕರಿಸಬಹುದು. ಪ್ರತಿಗ್ರಹಕ್ಕಿಂತ ಶಿಲ ಉತ್ತಮವಾದುದು; ಅದಕ್ಕಿಂತ ಉಂಛ

ವೃತ್ತಿ ಮತ್ತೂ ಹೆಚ್ಚಾಗಿ ಪ್ರಶಸ್ತವಾದುದು. (IV, ೪ನೇ ಶ್ಲೋಕವನ್ನು ನೋಡಿ.)

**ಸಪ್ತ ವಿತ್ತಾಗಮಾ ಧರ್ಮ್ಯಾ ದಾಯೋ ಲಾಭಃ ಕ್ರಯೋ ಜಯಃ ।**
**ಪ್ರಯೋಗಃ ಕರ್ಮಯೋಗಶ್ಚ ಸತ್ಪ್ರತಿಗ್ರಹ ಏವಚ ॥** ೩೪

ಈ ಏಳು ವಿಧಗಳಿಂದ ಆದ ಧನಪ್ರಾಪ್ತಿಯು ಧರ್ಮವಿಹಿತವಾಗಿರುವುದು: (೧) ಪಿತ್ರಾರ್ಜಿತ ಮೊದಲಾದ ದಾಯಭಾಗ, (೨) ಭೂಗತವಾಗಿದ್ದ ನಿಧಿ ಮೊದಲಾದವು, (೩) ಪದಾರ್ಥಗಳನ್ನು ಕೊಂಡು ಮಾರುವುದು (ಈ ಮೂರು, ಮೂರುವರ್ಣದ ದ್ವಿಜರಿಗೂ ಧರ್ಮಾನುಕೂಲವಾದುವು), (೪) ಯುದ್ಧದಲ್ಲಿ ಜಯಪಡೆದು ಸಂಪಾದಿಸುವುದು (ಕ್ಷತ್ರಿಯನಿಗೆ), (೫) ಬಂಡವಾಳವನ್ನು ಹೆಚ್ಚಿಸಿಕೊಳ್ಳುವುದು (ಬಡ್ಡಿ, ಮೊದಲಾದುವುಗಳಿಂದ), (೬) ಕೃಷಿ ಮತ್ತು ವಾಣಿಜ್ಯ (ಇವೆರಡು ಮಾರ್ಗಗಳೂ ವೈಶ್ಯನಿಗೆ), (೭) ಯೋಗ್ಯರಿಂದ ಪ್ರತಿಗ್ರಹ ಅಥವಾ ದಾನ ಸ್ವೀಕಾರ (ಇದು ಬ್ರಾಹ್ಮಣನಿಗೆ)

**ವಿದ್ಯಾ ಶಿಲ್ಪಂ ಭೃತಿಃ ಸೇವಾ ಗೋರಕ್ಷ್ಯಂ ವಿಪಣಿಃ ಕೃಷಿಃ ।**
**ಧೃತಿರ್ಭೈಕ್ಷ್ಯಂ ಕುಸೀದಂ ಚ ದಶ ಜೀವನಹೇತವಃ ॥** ೩೫

(ವೇದವಲ್ಲದ ಇತರ) ವಿದ್ಯಾದಾನ, ಶಿಲ್ಪಕಾರ್ಯ, ಹಣಕ್ಕಾಗಿ ಕೂಲಿ, ಸೇವೆ, ಪಶುಪಾಲನೆ, ವ್ಯಾಪಾರ, ಕೃಷಿ, ಸಂತೋಷ (ಲಬ್ಧವಾದುದರಲ್ಲಿ ತೃಪ್ತಿ), ಭಿಕ್ಷೆ, ಬಡ್ಡಿಗೆ ಹಣಕೊಡುವುದು—ಈ ಹತ್ತೂ ಜೀವನೋಪಾಯಗಳು.

(ಆಪತ್ಕಾಲದಲ್ಲಿ ಯಾರು ಯಾವ ವೃತ್ತಿಯನ್ನು ಬೇಕಾದರೂ ಅವಲಂಬಿಸಬಹುದು. ಸಾಧಾರಣ ಕಾಲದಲ್ಲಿ ತನಗೆ ವಿಹಿತವಾದುದನ್ನೇ ಮಾಡಬೇಕು. ಉದಾಹರಣೆಗೆ, ಆಪತ್ತಿನಲ್ಲಿಲ್ಲದಿರುವಾಗ ಬ್ರಾಹ್ಮಣನು ಕೃಷಿ ಪಶುಪಾಲನೆಗಳನ್ನೂ, ಕ್ಷತ್ರಿಯನು ಸೇವೆಯನ್ನೂ, ವೈಶ್ಯನು ಭಿಕ್ಷೆಯನ್ನೂ ಮಾಡಬಾರದು.)

**ಶೂದ್ರಸ್ತು ವೃತ್ತಿಮಾಕಾಂಕ್ಷನ್ ಕ್ಷತ್ರಮಾರಾಧಯೇದ್ಯದಿ ।**
**ಧನಿನಂ ವಾಪ್ಯುಪಾರಾಧ್ಯ ವೈಶ್ಯಂ ಶೂದ್ರೋ ಜಿಜೀವಿಷೇತ್ ॥** ೩೬

ಬ್ರಾಹ್ಮಣರ ಸೇವೆಯಿಂದಲೇ ಜೀವನವನ್ನು ನಡೆಸಲು ಸಾಧ್ಯವಿಲ್ಲದಿದ್ದಾಗ ಶೂದ್ರನು ಕ್ಷತ್ರಿಯನನ್ನು ಸೇವಿಸಬೇಕು. ಅದಕ್ಕೆ ಪರಿಸ್ಥಿತಿ ಅನುಕೂಲವಾಗಿಲ್ಲದಿದ್ದರೆ ಅವನು ಧನಿಕನಾದ ವೈಶ್ಯನನ್ನಾದರೂ ಸೇವಿಸಿ ಜೀವನವನ್ನು ನಡೆಸಬೇಕು.

**ಶಕ್ತೇನಾಪಿ ಹಿ ಶೂದ್ರೇಣ ನ ಕಾರ್ಯೋ ಧನಸಂಚಯಃ ।**
**ಶೂದ್ರೋ ಹಿ ಧನಮಾಸಾದ್ಯ ಬ್ರಾಹ್ಮಣಾನೇವ ಬಾಧತೇ ॥** ೩೭

ಹಣಸಂಪಾದನೆಯಲ್ಲಿ ಸಮರ್ಥನಾಗಿದ್ದರೂ ಶೂದ್ರನು ಹೆಚ್ಚಾಗಿ ಹಣವನ್ನು ಶೇಖರಿಸಬಾರದು. ಧನವನ್ನು ಹೊಂದಿದ ಶೂದ್ರನು ಬ್ರಾಹ್ಮಣರನ್ನೇ ಹಿಂಸೆಮಾಡುವನು.

## XI ಅಧ್ಯಾಯ

# ಪ್ರಾಯಶ್ಚಿತ್ತ

**ಯದ್ಧನಂ ಯಜ್ಞಶೀಲಾನಾಂ ದೇವಸ್ವಂ ತದ್ವಿದುರ್ಬುಧಾಃ ।**
**ಅಯಜ್ವನಾಂ ತು ಯದ್ವಿತ್ತಮಾಸುರಸ್ವಂ ತದುಚ್ಯತೇ ॥** ೧

ಯಜ್ಞಶೀಲರಾಗಿ ಯಾಗಾದಿಗಳಿಗಾಗಿ ವೆಚ್ಚಮಾಡುವವರ ಹಣವನ್ನು ದೇವಸ್ವವೆಂದೂ, ಹಾಗೆ ಯಜ್ಞಮಾಡದಿದ್ದವರ ಸಂಪತ್ತನ್ನು ಅಸುರಸ್ವವೆಂದೂ ವಿದ್ವಾಂಸರು ತಿಳಿಯುತ್ತಾರೆ.

**ಯಜ್ಞಾರ್ಥಮರ್ಥಂ ಭಿಕ್ಷಿತ್ವಾ ಯೋ ನ ಸರ್ವಂ ಪ್ರಯಚ್ಛತಿ ।**
**ಸ ಯಾತಿ ಭಾಸತಾಂ ವಿಪ್ರಃ ಕಾಕತಾಂ ವಾ ಶತಂ ಸಮಾಃ ॥** ೨

ಯಾರು ಯಾಗಗಳಿಗೋಸ್ಕರವೆಂದು ಜನರಲ್ಲಿ ಭಿಕ್ಷೆಬೇಡಿ ತಂದ ಹಣವನ್ನು ಪೂರ್ಣವಾಗಿ ಅಲ್ಲಿಯೇ ವಿನಿಯೋಗಿಸುವುದಿಲ್ಲವೋ ಅವರು ನೂರು ವರ್ಷಗಳ ಕಾಲ (ಬಹುಕಾಲದವರೆಗೆ) ಭಾಸತ್ವವನ್ನೋ ಕಾಕತ್ವವನ್ನೋ ಪಡೆಯುವರು.

**ನ ಬ್ರಾಹ್ಮಣೋಽವೇದಯೇತ ಕಿಂಚಿದ್ರಾಜನಿ ಧರ್ಮವಿತ್ ।**
**ಸ್ವವೀರ್ಯೇಣೈವ ತಾಂಛಿಷ್ಯಾನ್ಮಾನವಾನಪಕಾರಿಣಃ ॥ ೩**

ಧರ್ಮಜ್ಞನಾದ ಬ್ರಾಹ್ಮಣನು ತನಗೆ ಆದ ಅಪಕಾರವನ್ನು ರಾಜನಿಗೆ ತಿಳಿಸಬಾರದು. ಅಪಕಾರಮಾಡಿದವನನ್ನು ತನ್ನ ಶಕ್ತಿಯಿಂದಲೇ ಶಿಕ್ಷಿಸಬೇಕು.

**ಸ್ವವೀರ್ಯಾದ್ರಾಜವೀರ್ಯಾಚ್ಚ ಸ್ವವೀರ್ಯಂ ಬಲವತ್ತರಮ್ ।**
**ತಸ್ಮಾತ್ಸ್ವೇನೈವ ವೀರ್ಯೇಣ ನಿಗೃಹ್ಣೀಯಾದರೀನ್ದ್ವಿಜಃ ॥ ೪**

ತನ್ನ ಶಕ್ತಿ ಮತ್ತು ರಾಜನ ಶಕ್ತಿ; ಇವುಗಳ ಪೈಕಿ ತನ್ನ ಶಕ್ತಿಯೇ ಹೆಚ್ಚು ಪ್ರಭಾವಶಾಲಿಯಾದುದು. ಆದುದರಿಂದ ದ್ವಿಜನು ಶತ್ರುಗಳನ್ನು ತನ್ನ ಸಾಮರ್ಥ್ಯದಿಂದಲೇ ನಿಗ್ರಹಿಸಬೇಕು

**ಶ್ರುತೀರಥರ್ವಾಂಗಿರಸೀಃ ಕುರ್ಯಾದಿತ್ಯವಿಚಾರಯನ್ ।**
**ವಾಕ್ಶಸ್ತ್ರಂ ವೈ ಬ್ರಾಹ್ಮಣಸ್ಯ ತೇನ ಹನ್ಯಾದರೀನ್ದ್ವಿಜಃ ॥ ೫**

ಅಥರ್ವವೇದದ ಅಂಗಿರಸ ಸಂಬಂಧವಾದ ಆಭಿಚಾರಿಕ ಶ್ರುತಿಗಳನ್ನು ಯಾವ ಚಿಂತೆಯನ್ನೂ ಮಾಡದೆ ಪ್ರಯೋಗಿಸಬೇಕು. ಬ್ರಾಹ್ಮಣನಿಗೆ ವಾಗ್ರೂಪವಾದ ಮಂತ್ರಗಳೇ ಶಸ್ತ್ರಾಸ್ತ್ರಗಳು. ಅವುಗಳಿಂದಲೇ ಶತ್ರುಗಳನ್ನು ಸದೆಬಡಿಯಬೇಕು.

**ಕ್ಷತ್ರಿಯೋ ಬಾಹುವೀರ್ಯೇಣ ತರೇದಾಪದಮಾತ್ಮನಃ ।**
**ಧನೇನ ವೈಶ್ಯಶೂದ್ರೌ ತು ಜಪಹೋಮೈರ್ದ್ವಿಜೋತ್ತಮಃ ॥ ೬**

ಶತ್ರುಗಳಿಂದ ಒದಗಿದ ಸೋಲು, ಅಪಮಾನ ಮುಂತಾದ ಆಪತ್ತುಗಳನ್ನು ಕ್ಷತ್ರಿಯನು ತನ್ನ ಬಾಹುಬಲದಿಂದ ನಿವಾರಿಸಿಕೊಳ್ಳಬೇಕು. ಹಣವನ್ನು ವೆಚ್ಚಮಾಡಿ ವೈಶ್ಯ ಶೂದ್ರರುಗಳು ವಿಪತ್ತಿನಿಂದ ಪಾರಾಗಬೇಕು. ಬ್ರಾಹ್ಮಣನು ಆಭಿಚಾರಿಕ ಜಪ ಹೋಮಗಳಿಂದ ಶತ್ರುವನ್ನು ನಿಗ್ರಹಿಸಬೇಕು.

**ಅಕುರ್ವನ್ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ ।**
**ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥ ೭**

ವಿಹಿತವಾದ ಮತ್ತು ನಿತ್ಯನೈಮಿತ್ತಿಕಗಳಾದ ಸ್ನಾನಸಂಧ್ಯೋಪಾಸನಾದಿಕರ್ಮಗಳನ್ನು ಮಾಡದಿದ್ದರೆ, ಅಥವಾ ನಿಷಿದ್ಧವಾದ ಹಿಂಸೆ, ಕಳ್ಳತನ

ಮುಂತಾದುವನ್ನು ಮಾಡಿದರೆ, ಅಥವಾ ನಿಂದ್ಯವಾದ ಇಂದ್ರಿಯವ್ಯಾಪಾರಗಳಲ್ಲಿ ತೊಡಗಿದರೆ, ಮನುಷ್ಯನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುತ್ತದೆ.

**ಅಕಾಮತಃ ಕೃತಂ ಪಾಪಂ ವೇದಾಭ್ಯಾಸೇನ ಶುದ್ಧ್ಯತಿ ।**
**ಕಾಮತಸ್ತು ಕೃತಂ ಮೋಹಾತ್ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ ॥ ೮**

ತನ್ನ ಇಚ್ಛೆ ಇಲ್ಲದೆಯೇ (ಮತ್ತೊಬ್ಬರ ಬಲಾತ್ಕಾರದಿಂದ ಅಥವಾ ಸಂದರ್ಭವಿಶೇಷಗಳಲ್ಲಿ ಅನಿವಾರ್ಯವಾಗುವುದರಿಂದ) ದ್ವಿಜನು ಮಾಡಿದ ಪಾಪಗಳು ವೇದಾಭ್ಯಾಸದಿಂದ ಕಳೆದುಹೋಗುತ್ತವೆ (ಇದು ಲಘು ಪ್ರಾಯಶ್ಚಿತ್ತವಾಗುವುದು). ಕಾಮಕ್ರೋಧಾದಿಗಳಿಂದ ಮೋಹಿತನಾಗಿ, ವಿವೇಕಶೂನ್ಯನಾಗಿ, ಇಚ್ಛಾಪೂರ್ವಕವಾಗಿ ಪಾಪವನ್ನು ಮಾಡಿದವನು ನಾನಾ ಬಗೆಯ ಶಾಸ್ತ್ರವಿಹಿತಗಳಾದ ಪ್ರಾಯಶ್ಚಿತ್ತಗಳಿಂದ ಶುದ್ಧನಾಗುವನು.

**ಪ್ರಾಯಶ್ಚಿತ್ತೀಯತಾಂ ಪ್ರಾಪ್ಯ ದೈವಾತ್ಪೂರ್ವಕೃತೇನ ವಾ ।**
**ನ ಸಂಸರ್ಗಂ ವ್ರಜೇತ್ಸದ್ಭಿಃ ಪ್ರಾಯಶ್ಚಿತ್ತೇಽಕೃತೇ ದ್ವಿಜಃ ॥ ೯**

ಆಕಸ್ಮಿಕವಾಗಿಯೋ ಅಥವಾ (ಕ್ಷಯಾದಿ ದುಷ್ಪರಿಹಾರ್ಯವಾದ ಕಾಯಿಲೆಗಳು ಬಂದುದರಿಂದ ಸೂಚಿತವಾಗಿರುವ) ಪೂರ್ವಜನ್ಮದ ಕರ್ಮದ ಫಲವಾಗಿಯೋ ದ್ವಿಜನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾಗಿದ್ದು, ಅದನ್ನು ಮಾಡಿಕೊಳ್ಳದೇ ಇರುವಾಗ, ಸಜ್ಜನರಾದ ದ್ವಿಜರೊಡನೆ ಸಂಪರ್ಕವನ್ನು ಹೊಂದಬಾರದು.

**ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।**
**ಮಹಾಂತಿ ಪಾತಕಾನ್ಯಾಹುಃ ಸಂಸರ್ಗಶ್ಚಾಪಿ ತೈಃ ಸಹ ॥ ೧೦**

ಬ್ರಾಹ್ಮಣನ ವಧೆ, ಮದ್ಯಪಾನ, ಸುವರ್ಣದ ಅಪಹಾರ, ಗುರುಪತ್ನೀಗಮನ ಮತ್ತು ಈ ಕೃತ್ಯಗಳನ್ನು ಮಾಡಿದವರೊಡನೆ ಸಂಪರ್ಕ—ಇವು ಐದೂ ಮಹಾಪಾತಕಗಳು.

(ತನ್ನ ಜಾತಿಯನ್ನು ಮೇಲೇರಿಸಿಕೊಳ್ಳುವುದಕ್ಕಾಗಿ ಸುಳ್ಳು ಹೇಳುವುದು, ರಾಜರಲ್ಲಿ ಚಾಡಿಹೇಳಿ ಪರರಿಗೆ ಅಪಾಯ ತರುವುದು, ಗುರುವನ್ನು ಸುಳ್ಳುಹೇಳಿದವನನ್ನಾಗಿಮಾಡುವುದು—ಇವು ಬ್ರಹ್ಮಹತ್ಯೆಗೆ ಸಮಾನವಾದ

ಪಾತಕಗಳು. ಕಲಿತ ವೇದಗಳನ್ನು ಮರೆಯುವುದು, ವೇದನಿಂದೆ, ಕೂಟಸಾಕ್ಷ್ಯ (ಮೋಸ, ಸುಳ್ಳುಸಾಕ್ಷ್ಯ), ಮಿತ್ರವಧೆ, ಅಭಕ್ಷ್ಯಭಕ್ಷಣ—ಇವು ಪ್ರಾಯಶ್ಚಿತ್ತಕ್ಕಾಗಿ ಸುರಾಪಾನಕ್ಕೆ ಸಮ. ನಿಕ್ಷೇಪವಾಗಿಟ್ಟಿದ್ದ ಧನವನ್ನು ಅಪಹರಿಸುವುದು, ಮನುಷ್ಯರು, ಕುದುರೆ, ಬೆಳ್ಳಿ, ಭೂಮಿ, ರತ್ನಗಳು—ಇವುಗಳ ಅಪಹಾರವು ಸ್ವರ್ಣಸ್ತೇಯಕ್ಕೆ ಸಮಾನ. ತನ್ನವರಾದ ತಂಗಿ ಮೊದಲಾದವರು, ಅವಿವಾಹಿತ ಕುಮಾರಿಯರು, ಚಂಡಾಲಿಯರು, ಸ್ನೇಹಿತರು ಅಥವಾ ಮಕ್ಕಳ ಹೆಂಡತಿಯರು ಇವರೊಡನೆ ಮಾಡಿದ ಸಂಭೋಗವು ಗುರುತಲ್ಪಗಮನಕ್ಕೆ ಸಮಾನವು—ಅದೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಇವೆಲ್ಲ ಮಹಾಪಾತಕಗಳು.

ಗೋವಧೆ, ತನ್ನನ್ನೇ ಮಾರಿಕೊಳ್ಳುವುದು, ಮಾತಾಪಿತೃಗಳ ಪರಿತ್ಯಾಗ, ಕನ್ಯೆಯನ್ನು ಕೆಡಿಸುವುದು, ಬ್ರಹ್ಮಚರ್ಯಾದಿ ವ್ರತಲೋಪ, ಸೌದೆಗಾಗಿ ಹಸಿಮರಗಳನ್ನು ಕಡಿಯುವುದು, ನಿಂದಿತಾನ್ನಭಕ್ಷಣ, ಧಾನ್ಯ ಮತ್ತು ಪಶುಗಳ ಕಳವು, ಸ್ತ್ರೀಶೂದ್ರಾದಿಗಳ ವಧೆ, ನಾಸ್ತಿಕ್ಯ—ಇವೆಲ್ಲ ಉಪಪಾತಕಗಳು )

**ಬ್ರಹ್ಮಹಾ ದ್ವಾದಶಸಮಾಃ ಕುಟೀಂ ಕೃತ್ವಾ ವನೇ ವಸೇತ್ ।**
**ಭೈಕ್ಷಾಶ್ಯಾತ್ಮವಿಶುದ್ಧ್ಯರ್ಥಂ ಕೃತ್ವಾ ಶವಶಿರೋಧ್ವಜಮ್ ॥ ೧೧**

ಬ್ರಾಹ್ಮಣನನ್ನು ಕೊಂದವನು ತನ್ನ ಶುದ್ಧಿಗಾಗಿ ಅರಣ್ಯದಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡು ಹನ್ನೆರಡು ವರ್ಷಗಳಕಾಲ ವಾಸಮಾಡಬೇಕು. ಶವದ ಕಪಾಲವನ್ನೋ ಮತ್ತಾವುದಾದರೂ ಚಿಹ್ನವನ್ನೋ ಹೊತ್ತು ಭಿಕ್ಷೆ ಮಾಡಿ ಜೀವಿಸಬೇಕು.

**ಬ್ರಾಹ್ಮಣಾರ್ಥೇ ಗವಾರ್ಥೇ ವಾ ಸದ್ಯಃ ಪ್ರಾಣಾನ್ಪರಿತ್ಯಜೇತ್ ।**
**ಮುಚ್ಯತೇ ಬ್ರಹ್ಮಹತ್ಯಾಯಾ ಗೋಪ್ತಾ ಗೋಬ್ರಾಹ್ಮಣಸ್ಯ ಚ ॥**

(ಹನ್ನೆರಡು ವರ್ಷಗಳು ಕಳೆದಮೇಲೆ) ಕಳ್ಳರು, ಅಗ್ನಿ ಮುಂತಾದ ಉಪದ್ರವಗಳಿಂದ ಪ್ರಾಣಾಪಾಯಕ್ಕೊಳಗಾದ ಬ್ರಾಹ್ಮಣರು ಅಥವಾ ಹಸುಗಳನ್ನು ಉಳಿಸಿಕೊಳ್ಳಲು ತನ್ನ ಪ್ರಾಣವನ್ನು ಸಮರ್ಪಿಸಬೇಕು. ಗೋಬ್ರಾಹ್ಮಣರನ್ನು ಕಾಪಾಡಿದವನು ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

(ಹೀಗೆಯೇ ಇನ್ನೂ ಬೇರೆ ಪ್ರಾಯಶ್ಚಿತ್ತಗಳನ್ನು ಹೇಳಿದೆ. ಅವರವರ ಪಾಪಗಳ ಗುರುತ್ವ ಲಘುತ್ವಗಳನ್ನು ಗಮನಿಸಿ, ಹಿರಿಯರು ವಿಧಿಸಿದ ಪ್ರಾಯಶ್ಚಿತ್ತವನ್ನು ಕೈಕೊಳ್ಳಬೇಕು)

**ಇಯಂ ವಿಶುದ್ಧಿರುದಿತಾ ಪ್ರಮಾಪ್ಯಾಕಾಮತೋ ದ್ವಿಜಮ್ ।**
**ಕಾಮತೋ ಬ್ರಾಹ್ಮಣವಧೇ ನಿಷ್ಕೃತಿರ್ನ ವಿಧೀಯತೇ ॥ ೧೩**

ಈ ಪ್ರಾಯಶ್ಚಿತ್ತ ಶುದ್ಧಿಗಳು ಇಚ್ಛಾಪೂರ್ವಕವಲ್ಲದ ಬ್ರಾಹ್ಮಣ ವಧೆಗೆ ಹೇಳಲ್ಪಟ್ಟಿವೆ. ಇಚ್ಛಾಪೂರ್ವಕವಾಗಿ (ದ್ವೇಷಾಸೂಯೆಗಳಿಂದ) ಬ್ರಾಹ್ಮಣನನ್ನು ಕೊಂದವನಿಗೆ ಪ್ರಾಯಶ್ಚಿತ್ತವೇ ಇಲ್ಲ. ಮರಣವೇ ಅವನಿಗೆ ಶುದ್ಧಿಪ್ರದವು.

**ಸುರಾಂ ಪೀತ್ವಾ ದ್ವಿಜೋ ಮೋಹಾದಗ್ನಿವರ್ಣಾಂ ಸುರಾಂ ಪಿಬೇತ್।**
**ತಯಾ ಸ ಕಾಯೇ ನಿರ್ದಗ್ಧೇ ಮುಚ್ಯತೇ ಕಿಲ್ಬಿಷಾತ್ತತಃ ॥ ೧೪**

ಇಚ್ಛಾಪೂರ್ವಕವಾಗಿ ಮದ್ಯಪಾನಮಾಡಿದ ದ್ವಿಜನು ಮದ್ಯವನ್ನು ಕೆಂಪಗಾಗುವಂತೆ ಕಾಯಿಸಿ, ಅದನ್ನು ಕುಡಿದು ಸಾಯಬೇಕು. ಹಾಗೆ ಕುದಿಯುತ್ತಿರುವ ಮದ್ಯದಿಂದ ದೇಹವು ಸುಟ್ಟುಹೋದಮೇಲೆಯೇ ಆ ಪಾಪ ದಿಂದ ಅವನು ಮುಕ್ತನಾಗುವನು.

**ಸುರಾ ವೈ ಮಲಮನ್ನಾನಾಂ ಪಾಪ್ಮಾ ಚ ಮಲಮುಚ್ಯತೇ ।**
**ತಸ್ಮಾದ್ಬ್ರಾಹ್ಮಣರಾಜನ್ಯೌ ವೈಶ್ಯಶ್ಚ ನ ಸುರಾಂ ಪಿಬೇತ್ ॥ ೧೫**

ಅಕ್ಕಿ, ಹಿಟ್ಟು ಮುಂತಾದುವುಗಳಿಂದ ಮದ್ಯವು ಉತ್ಪನ್ನವಾಗು ವುದರಿಂದ, ಸುರೆಯು ಅನ್ನಗಳ ಮಲದಂತೆಯೇ ಆಗುವುದು. ಮಲವು ಪಾಪವೆಂದು ಹೇಳಲ್ಪಟ್ಟಿದೆ. ಆದುದರಿಂದ ದ್ವಿಜರು ಸುರೆಯನ್ನು ಕುಡಿಯ ಬಾರದು.

**ಸುವರ್ಣಸ್ತೇಯಕೃದ್ವಿಪ್ರೋ ರಾಜಾನಮಭಿಗಮ್ಯ ತು ।**
**ಸ್ವಕರ್ಮ ಖ್ಯಾಪಯನ್ಬ್ರೂಯಾನ್ಮಾಂ ಭವಾನನುಶಾಸ್ತ್ವಿತಿ ॥ ೧೬**

ಬಂಗಾರವನ್ನು ಕದ್ದ ವಿಪ್ರನು ರಾಜನ ಬಳಿಗೆ ಹೋಗಿ ತಾನು ಮಾಡಿದ ಅಕಾರ್ಯವನ್ನು ತಿಳಿಸಿ, ತನ್ನನ್ನು ಶಿಕ್ಷಿಸಬೇಕೆಂದು ಕೇಳಿಕೊಳ್ಳಬೇಕು.

**ಗೃಹೀತ್ವಾ ಮುಸಲಂ ರಾಜಾ ಸಕೃದ್ಧನ್ಯಾತ್ತು ತಂ ಸ್ವಯಮ್ ।**
**ವಧೇನ ಶುದ್ಧ್ಯತಿ ಸ್ತೇನೋ ಬ್ರಾಹ್ಮಣಸ್ತಪಸೈವ ತು ॥ ೧೭**

ಸುವರ್ಣವನ್ನು ಕದ್ದವನು ಬ್ರಾಹ್ಮಣನಲ್ಲದಿದ್ದರೆ, ರಾಜನು ಅವನನ್ನು ಒನಕೆಯಿಂದ ಒಂದು ಬಾರಿ ಹೊಡೆಯಬೇಕು; ಕಳ್ಳನು ಸತ್ತರಾಗಲಿ, ಸಾಯುವಹಾಗೆ ಅಶಕ್ತನಾದರಾಗಲಿ, ಅವನು ಶುದ್ಧನಾಗುವನು. ಕಳ್ಳನು ಬ್ರಾಹ್ಮಣನಾದರೆ ಅವನನ್ನು ಹೊಡೆಯಬಾರದು; ತಪಸ್ಸುಮಾಡುವುದರಿಂದಲೇ ಅವನು ಶುದ್ಧನಾಗುವನು.

**ತಪಸಾಪನುನುತ್ಸುಸ್ತು ಸುವರ್ಣಸ್ತೇಯಜಂ ಮಲಮ್ ।**
**ಚೀರವಾಸಾ ದ್ವಿಜೋಽರಣ್ಯೇ ಚರೇದ್ಬ್ರಹ್ಮಹಣೋ ವ್ರತಮ್ ॥ ೧೮**

ಸ್ವರ್ಣಸ್ತೇಯದಿಂದ ಬಂದ ಪಾಪವನ್ನು ತಪಸ್ಸುಮಾಡಿ ಕಳೆದುಕೊಳ್ಳಬೇಕಾದ ಬ್ರಾಹ್ಮಣನು ನಾರುಬಟ್ಟೆಗಳನ್ನುಟ್ಟು ಅರಣ್ಯದಲ್ಲಿ ಬ್ರಹ್ಮಹತ್ಯೆ ಮಾಡಿದವನಂತೆಯೇ ಅಲೆಯುತ್ತಿರಬೇಕು.

**ಗುರುತಲ್ಪ್ಯಭಿಭಾಷ್ಯೈನಸ್ತಪ್ತೇ ಸ್ವಪ್ಯಾದಯೋಮಯೇ ।**
**ಸೂರ್ಮೀಂ ಜ್ವಲಂತೀಂ ಸ್ವಾಶ್ಲಿಷ್ಯೇನ್ಮೃತ್ಯುನಾ ಸ ವಿಶುದ್ಧ್ಯತಿ ॥೧೯**

ಗುರುತಲ್ಪಗಮನವನ್ನು ಮಾಡಿದವನು ತನ್ನ ಪಾಪವನ್ನು ಒಪ್ಪಿಕೊಂಡು ಕಬ್ಬಿಣದ ಹಾಸಿಗೆಯಮೇಲೆ ಮಲಗಬೇಕು. ಕೆಂಪಗೆ ಕಾಯ್ದು ಪ್ರಜ್ವಲಿಸುತ್ತಿರುವ ಕಬ್ಬಿಣದ ಸ್ತ್ರೀಪ್ರತಿಮೆಯನ್ನು ಚೆನ್ನಾಗಿ ಆಲಿಂಗಿಸಿ ಮರಣಹೊಂದಿದ ಮೇಲೆ ಅವನು ಶುದ್ಧನಾಗುವನು.

**ಸ್ವಯಂ ವಾ ಶಿಶ್ನವೃಷಣಾವುತ್ಕೃತ್ಯಾಧಾಯ ಚಾಂಜಲೌ ।**
**ನೈಋತೀಂ ದಿಶಮಾತಿಷ್ಠೇದಾನಿಪಾತಾದಜಿಹ್ಮಗಃ ॥ ೨೦**

ಅಥವಾ ತನ್ನ ಗುಪ್ತಾಂಗಗಳನ್ನು ತಾನೇ ಕತ್ತರಿಸಿಕೊಂಡು, ಅವನ್ನು ಬೊಗಸೆಯಲ್ಲಿ ಹಿಡಿದು, ನೈಋತ್ಯ ದಿಕ್ಕಿಗೆ ತಿರುಗಿ, ಬಿದ್ದು ಸತ್ತುಹೋಗುವವರೆಗೆ ನೇರವಾಗಿ ನಡೆಯುತ್ತಿರಬೇಕು.

(ಸವರ್ಣದ ಗುರುಭಾರ್ಯೆಯ ಸಂಗಮಾಡಿದವನಿಗೆ ಈ ಆಮರಣಾಂತ ಶಿಕ್ಷೆಗಳನ್ನು ವಿಧಿಸಿದ್ದಾರೆ. ತನ್ನ ಹೆಂಡತಿಯೆಂಬ ಭ್ರಾಂತಿಯಿಂದ

ಸಂಗಮಾಡಿದರೆ ಅಥವಾ ಅಸವರ್ಣಳಾಗಿಯೂ ಅಸಾಧ್ವಿಯಾಗಿಯೂ ಇರುವ ಗುರುಪತ್ನಿಯೊಡನೆ ಸಂಸರ್ಗಮಾಡಿದರೆ ಲಘುಪ್ರಾಯಶ್ಚಿತ್ತವನ್ನೂ ಒಂದು ವರ್ಷದ ಪ್ರಾಜಾಪತ್ಯ ಕೃಚ್ಛ್ರ ಅಥವಾ ಮೂರು ತಿಂಗಳ ಚಾಂದ್ರಾಯಣವನ್ನೂ ವಿಧಿಸಿದೆ. ಉಪಪಾತಕಗಳಿಗೂ ಹೀಗೆಯೇ ನಾನಾ ವಿಧವಾದ ವ್ರತಗಳನ್ನು ಪ್ರಾಯಶ್ಚಿತ್ತಕ್ಕಾಗಿ ಹೇಳಿದೆ.)

**ಧಾನ್ಯಾನ್ನಧನಚೌರ್ಯಾಣಿ ಕೃತ್ವಾ ಕಾಮಾದ್ದ್ವಿಜೋತ್ತಮಃ ।**
**ಸ್ವಜಾತೀಯಗೃಹಾದೇವ ಕೃಚ್ಛ್ರಾಬ್ದೇನ ವಿಶುದ್ಧ್ಯತಿ । ೨೧**

ಬ್ರಾಹ್ಮಣನು ಬ್ರಾಹ್ಮಣನ ಮನೆಯಿಂದಲೇ ಧಾನ್ಯ, ಅನ್ನ, ಧನಗಳನ್ನು ಇಚ್ಛಾಪೂರ್ವಕವಾಗಿ (ಭ್ರಾಂತಿಯಿಂದ ಅಲ್ಲ) ಕದ್ದರೆ, ಒಂದು ವರ್ಷದ ಕೃಚ್ಛ್ರವನ್ನು ಆಚರಿಸಿ ಶುದ್ಧವಾಗಬಹುದು. (೩೨, ೩೩ನೇ ಶ್ಲೋಕಗಳನ್ನು ನೋಡಿ.)

**ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾಽನ್ಯವೇಶ್ಮತಃ ।**
**ಚರೇತ್ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯಾತ್ಮಶುದ್ಧಯೇ ॥ ೨೨**

ವಿಶೇಷ ಪ್ರಾಯಶ್ಚಿತ್ತಗಳಿಗೆ ಗುರಿಯಾಗದ ಸಣ್ಣಪುಟ್ಟ (ಸೀಸದ ಪಾತ್ರೆ ಮುಂತಾದ) ಪಾತ್ರೆ ಪದಾರ್ಥಗಳನ್ನು ಪರರ ಮನೆಗಳಿಂದ ಕದ್ದು ತಂದರೆ, ಸಾಂತಪನವೆಂಬ ಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಆತ್ಮಶುದ್ಧಿಗಾಗಿ, ತಂದ ಆ ಪದಾರ್ಥಗಳನ್ನು ಹಿಂದಿರುಗಿಸಿಕೊಡಬೇಕು.

**ಪೈತೃಷ್ವಸೇಯೀಂ ಭಗಿನೀಂ ಸ್ವಸ್ರೀಯಾಂ ಮಾತುರೇವ ಚ ।**
**ಮಾತುಶ್ಚ ಭ್ರಾತುಸ್ತನಯಾಂ ಗತ್ವಾ ಚಾಂದ್ರಾಯಣಂ ಚರೇತ್ ॥**

ತಂದೆಯ ಸೋದರಿ ಮತ್ತು ತಾಯಿಯ ಸೋದರಿ (ಸೋದರತ್ತೆ, ದೊಡ್ಡಮ್ಮ, ಚಿಕ್ಕಮ್ಮ), ಇವರ ಹೆಣ್ಣುಮಕ್ಕಳು ಮತ್ತು ಸೋದರಮಾವನ ಮಗಳು — ಇವರೊಡನೆ ಸಂಭೋಗಮಾಡಿದವನು ಪ್ರಾಯಶ್ಚಿತ್ತಕ್ಕಾಗಿ ಚಾಂದ್ರಾಯಣವ್ರತವನ್ನು ಆಚರಿಸಬೇಕು.

(ಇವರು ಜ್ಞಾತಿಗಳಂತೆಯೋ, ಸಗೋತ್ರರಂತೆಯೋ ಸಂಬಂಧದಲ್ಲಿ ಸೇರುವುದರಿಂದ ಇವರನ್ನು ಮದುವೆಯಾಗುವುದೂ ನಿಷಿದ್ಧ. ಆದರೆ,

ಸೋದರಮಾವನ ಮಗಳನ್ನು ಹಾಗೂ ಅಕ್ಕನ ಮಗಳನ್ನು ಮದುವೆ ಯಾಗುವುದು ದಕ್ಷಿಣ ಭಾರತದಲ್ಲಿ ಆಚಾರವಾಗಿದೆ.)

**ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈರ್ಬಹಿಃ ।**
**ನಿಂದಿತೇಽಹನಿ ಸಾಯಾಹ್ನೇ ಜ್ಞಾತ್ಯೃತ್ವಿಗ್ಗುರುಸಂನಿಧೌ ॥ ೨೪**

ಮಹಾಪಾತಕಿಯು ಬದುಕಿದ್ದಾಗಲೇ ಅವನ ಜ್ಞಾತಿಗಳು, ಸಪಿಂಡರು, ಬಾಂಧವರು ಕೂಡಿಕೊಂಡು ತಮ್ಮ ಗುರುವಿನ ಎದುರಿಗೇ ಊರಿನ ಹೊರಗೆ ರಿಕ್ತನವಮೀದಿನ ಸಂಜೆಯಲ್ಲಿ ಅವನಿಗೆ ತಿಲೋದಕ ಕ್ರಿಯೆಗಳನ್ನು ಮಾಡಿ ಬಿಡಬೇಕು.

(ನೀರು ತುಂಬಿದ ಗಡಿಗೆಯನ್ನು ದಾಸಿಯು ಕಾಲಿನಿಂದ ಒದೆಯ ಬೇಕು. ಆ ರಾತ್ರಿ ಸಪಿಂಡರು ಆಶೌಚ ಉಪವಾಸಗಳನ್ನು ಆಚರಿಸಬೇಕು. "ಘಟಸ್ಫೋಟ"ವೆಂಬ ಈ ಕರ್ಮದಿಂದ ನೆಂಟರು ಆ ಪಾತಕಿಯ ದೇಹದ ಈ ಲೋಕದ ಋಣಾನುಬಂಧವನ್ನು ಕಳೆದುಕೊಳ್ಳುತ್ತಾರೆ.)

**ನಿವರ್ತೇರಂಶ್ಚ ತಸ್ಮಾತ್ತು ಸಂಭಾಷಣಸಹಾಸನೇ ।**
**ದಾಯಾದ್ಯಸ್ಯ ಪ್ರದಾನಂ ಚ ಯಾತ್ರಾ ಚೈವ ಹಿ ಲೌಕಿಕೀ ॥ ೨೫**

ಪತಿತನ ಜ್ಞಾತಿಗಳು ಅವನೊಡನೆ ಸಂಭಾಷಣೆ, ಒಂದೇ ಕಡೆ ಕೂಡುವುದು, ಆಸ್ತಿಯಲ್ಲಿ ಪಾಲುಕೊಡುವುದು, (ಹಬ್ಬ ಹುಣ್ಣಿಮೆಗಳಲ್ಲಿ) ಲೌಕಿಕಾಚಾರವಾದ ಹೋಗಿಬರುವಿಕೆ, ಮುಂತಾದುವನ್ನೆಲ್ಲ ನಿಲ್ಲಿಸಬೇಕು.

**ಏತದೇವ ವಿಧಿಂ ಕುರ್ಯಾದ್ಯೋಷಿತ್ಸು ಪತಿತಾಸ್ವಪಿ ।**
**ವಸ್ತ್ರಾನ್ನಪಾನಂ ದೇಯಂ ತು ವಸೇಯುಶ್ಚ ಗೃಹಾಂತಿಕೇ ॥ ೨೬**

ಪತಿತಪುರುಷನಿಗೆ ಮಾಡಿದಂತೆಯೇ ಪತಿತಸ್ತ್ರೀಗೂ ಉದಕ ವಿಸರ್ಜನೆ ಮಾಡಿಬಿಡಬೇಕು. ಆದರೆ ಅವಳಿಗೆ ಮನೆಯ ಸಮೀಪದಲ್ಲಿ ವಾಸಮಾಡಲು ಗುಡಿಸಲು ಮುಂತಾದ ಸ್ಥಳಗಳನ್ನು ಕಲ್ಪಿಸಿಕೊಟ್ಟು ಅನ್ನ ವಸ್ತ್ರಗಳನ್ನು ಕೊಡುತ್ತಿರಬೇಕು.

**ಏನಸ್ವಿಭಿರನಿರ್ಣಿಕ್ತೈರ್ನಾರ್ಥಂ ಕಿಂಚಿತ್ಸಹಾಚರೇತ್ ।**
**ಕೃತನಿರ್ಣೇಜನಾಂಶ್ಚೈವ ನ ಜುಗುಪ್ಸೇತ ಕರ್ಹಿಚಿತ್ ॥ ೨೭**

*

ಪಾಪಮಾಡಿ ಪ್ರಾಯಶ್ಚಿತ್ತಮಾಡಿಕೊಳ್ಳದವರಿಂದ ದಾನಪ್ರತಿಗ್ರಹಾದಿ ದ್ರವ್ಯವ್ಯಾಪಾರಗಳನ್ನು ಮಾಡಿಸಬಾರದು. ಆದರೆ ಅವರು ಪ್ರಾಯಶ್ಚಿತ್ತ ಮಾಡಿಕೊಂಡಮೇಲೆ ಯಾವಾಗಲೂ (ಅವರ ಪೂರ್ವದ ಪಾಪಕರ್ಮಗಳನ್ನು ಕೆದಕಿ ನೆನಪಿಗೆ ತಂದುಕೊಂಡು) ನಿಂದಿಸಬಾರದು. (ಹಿಂದಿನಂತೆಯೇ ನಡೆದು ಕೊಳ್ಳಬೇಕು.)

**ಬಾಲಘ್ನಾಂಶ್ಚ ಕೃತಘ್ನಾಂಶ್ಚ ವಿಶುದ್ಧಾನಪಿ ಧರ್ಮತಃ ।**
**ಶರಣಾಗತಹಂತೄಂಶ್ಚ ಸ್ತ್ರೀಹಂತೄಂಶ್ಚ ನ ಸಂವಸೇತ್ ॥** ೨೮

ಆದರೆ ಧರ್ಮದೃಷ್ಟಿಯಿಂದ ಪ್ರಾಯಶ್ಚಿತ್ತಮಾಡಿಕೊಂಡು ಶುದ್ಧ ರಾಗಿದ್ದರೂ ಮಕ್ಕಳನ್ನು ಕೊಂದವರು, ಉಪಕಾರಕ್ಕೆ ಬದಲಾಗಿ ಅಪಕಾರ ಮಾಡಿದವರು, ಶರಣಾಗತರಾದವರನ್ನು ಕೊಂದವರು, ಸ್ತ್ರೀಹತ್ಯೆಯನ್ನು ಮಾಡಿದವರು—ಇವರೊಡನೆ ಸಹವಾಸಮಾಡಬಾರದು.

**ಯದ್ಗರ್ಹಿತೇನಾರ್ಜಯಂತಿ ಕರ್ಮಣಾ ಬ್ರಾಹ್ಮಣಾ ಧನಮ್ ।**
**ತಸ್ಯೋತ್ಸರ್ಗೇಣ ಶುದ್ಧ್ಯಂತಿ ಜಪ್ಯೇನ ತಪಸೈವ ಚ ॥** ೨೯

ನಿಂದ್ಯವಾದ (ದುಷ್ಟಪ್ರತಿಗ್ರಹಾದಿ) ಕರ್ಮಗಳಿಂದ ಬ್ರಾಹ್ಮಣರು ಯಾವ ಹಣವನ್ನು ಸಂಪಾದಿಸುತ್ತಾರೆಯೋ ಅದನ್ನು ಬಿಟ್ಟುಬಿಡುವುದ ರಿಂದಲೂ, ಜಪ ತಪಸ್ಸುಗಳನ್ನು ಮಾಡುವುದರಿಂದಲೂ ಅವರು ಶುದ್ಧರಾಗುವರು.

**ಜಪಿತ್ವಾ ತ್ರೀಣಿ ಸಾವಿತ್ರ್ಯಾಃ ಸಹಸ್ರಾಣಿ ಸಮಾಹಿತಃ ।**
**ಮಾಸಂ ಗೋಷ್ಠೇ ಪಯಃ ಪೀತ್ವಾ ಮುಚ್ಯತೇಽಸತ್ಪ್ರತಿಗ್ರಹಾತ್ ॥**

ಮೂರು ಸಾವಿರ ಗಾಯತ್ರೀ ಜಪವನ್ನು ಸಮಾಧಾನಚಿತ್ತದಿಂದ ಮಾಡಿ, ಒಂದು ತಿಂಗಳಕಾಲ ದನದ ಕೊಟ್ಟಿಗೆಯಲ್ಲಿ ವಾಸಮಾಡುತ್ತಾ, ಹಾಲನ್ನು ಮಾತ್ರ ಕುಡಿಯುತ್ತಿದ್ದರೆ, ದುಷ್ಟಪ್ರತಿಗ್ರಹದಿಂದ ಬಂದ ಪಾಪಕ್ಕೆ ಪ್ರಾಯಶ್ಚಿತ್ತವಾಗುವುದು.

**ಶರಣಾಗತಂ ಪರಿತ್ಯಜ್ಯ ವೇದಂ ವಿಪ್ಲಾವ್ಯ ಚ ದ್ವಿಜಃ ।**
**ಸಂವತ್ಸರಂ ಯವಾಹಾರಸ್ತತ್ಪಾಪಮಪಸೇಧತಿ ॥** ೩೦

ಶರಣಾಗತನಾದವನನ್ನು ಸಂರಕ್ಷಿಸದೆ ಬಿಟ್ಟುಕೊಟ್ಟು, ಹೇಳಬಾರದವನಿಗೆ ವೇದವನ್ನು ಹೇಳಿ ಪಾಪಹೊಂದಿದ ಬ್ರಾಹ್ಮಣನು ಒಂದು ವರ್ಷದ ವರೆಗೆ ಯವಧಾನ್ಯವನ್ನೇ ತಿನ್ನುತ್ತಿದ್ದು, ಆ ಪಾಪದಿಂದ ಮುಕ್ತನಾಗುವನು.

**ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ ।**
**ತ್ರ್ಯಹಂ ಪರಂ ಚ ನಾಶ್ನೀಯಾತ್ ಪ್ರಾಜಾಪತ್ಯಂ ಚರನ್ ದ್ವಿಜಃ ॥**

ಪ್ರಾಜಾಪತ್ಯವೆಂಬ ಕೃಚ್ಛ್ರವನ್ನು ಪ್ರಾಯಶ್ಚಿತ್ತಕ್ಕಾಗಿ ಮಾಡುವವನು ಮೊದಲು ಮೂರು ದಿನಗಳಲ್ಲಿ ಹಗಲು ಮಾತ್ರ ಊಟಮಾಡಬೇಕು, ಮುಂದಿನ ಮೂರು ದಿನಗಳಲ್ಲಿ ರಾತ್ರಿ ಮಾತ್ರ, ಮುಂದೆ ಮೂರು ದಿನಗಳು ಅಯಾಚಿತವ್ರತ (ಬೇಡದೆಯೇ ಸಿಕ್ಕಿದುದನ್ನು ತಿನ್ನುವುದು), ಕೊನೆಯ ಮೂರು ದಿನಗಳಲ್ಲಿ ಉಪವಾಸಮಾಡಬೇಕು. ಹೀಗೆ ಹನ್ನೆರಡು ದಿವಸಗಳ ವ್ರತ.

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಮ್।**
**ಏಕರಾತ್ರೋಪವಾಸಶ್ಚ ಕೃಚ್ಛ್ರಂ ಸಾಂತಪನಂ ಸ್ಮೃತಮ್ ॥** ೩೩

ಗೋಮೂತ್ರ, ಸಗಣಿ, ಹಾಲು, ಮೊಸರು, ತುಪ್ಪ ಇವುಗಳೊಡನೆ ದರ್ಭೆಯಿಂದ ಪ್ರೋಕ್ಷಿತವಾದ ನೀರನ್ನು ಬೆರಸಿ, ಒಂದು ದಿನ ಕುಡಿದು, ಮರುದಿನ ಉಪವಾಸಮಾಡಿದರೆ ಅದು ಸಾಂತಪನವೆಂಬ ಕೃಚ್ಛ್ರವಾಗುವುದು.

(ಈ ಆರು ಪದಾರ್ಥಗಳನ್ನೂ ಪ್ರತ್ಯೇಕವಾಗಿ ಆರು ದಿನಗಳವರೆಗೆ ಸೇವಿಸಿ, ಏಳನೆಯ ದಿನ ಉಪವಾಸಮಾಡಿದರೆ ಅದು ಮಹಾಸಾಂತಪನವೆಂಬ ಕೃಚ್ಛ್ರವಾಗುವುದು.)

**ಖ್ಯಾಪನೇನಾನುತಾಪೇನ ತಪಸಾಧ್ಯಯನೇನ ಚ ।**
**ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥** ೩೪

ತಾನು ಮಾಡಿದ ಪಾಪಗಳನ್ನು (ಹಿರಿಯರೊಡನೆ) ಹೇಳಿಕೊಳ್ಳುವುದರಿಂದಲೂ, ಅದಕ್ಕಾಗಿ ಪಶ್ಚಾತ್ತಾಪಪಡುವುದರಿಂದಲೂ, ವಿಶೇಷ ಗಾಯತ್ರೀ ಜಪ ಮುಂತಾದ ತಪಸ್ಸಿನಿಂದಲೂ, ವೇದಾಧ್ಯಯನ ಮಾಡುವುದರಿಂದಲೂ, ದಾನಮಾಡುವುದರಿಂದಲೂ ಪಾಪವನ್ನು ಕಳೆದುಕೊಳ್ಳಬಹುದು.

**ಅಜ್ಞಾನಾದ್ಯದಿ ವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಮ್ ।**
**ತಸ್ಮಾದ್ವಿಮುಕ್ತಿಮನ್ವಿಚ್ಛನ್ದ್ವಿತೀಯಂ ನ ಸಮಾಚರೇತ್ ॥** ೩೫

ಪ್ರಮಾದವಶನಾಗಿಯೋ ಅಥವಾ ತಿಳಿದೇ ಬೇಕೆಂದೋ ನಿಂದ್ಯವಾದ ಕರ್ಮವನ್ನು ಮಾಡಿ, ಆ ಪಾಪದಿಂದ ಬಿಡುಗಡೆ ಹೊಂದಬೇಕೆಂದಿರುವವನು ಮತ್ತೆ ಎರಡನೆಯ ಸಲ ಆ ಪಾಪಕರ್ಮವನ್ನು ಮಾಡಬಾರದು.

(ಎರಡನೆಯ ಸಲ ಮಾಡಿದ ದುಷ್ಕೃತ್ಯಕ್ಕೆ ದ್ವಿಗುಣವಾದ ಅಥವಾ ಅಧಿಕವಾದ ಪ್ರಾಯಶ್ಚಿತ್ತ.)

**ಬ್ರಾಹ್ಮಣಸ್ಯ ತಪೋ ಜ್ಞಾನಂ ತಪಃ ಕ್ಷತ್ರಸ್ಯ ರಕ್ಷಣಮ್ ।**
**ವೈಶ್ಯಸ್ಯ ತು ತಪೋ ವಾರ್ತಾ ತಪಃ ಶೂದ್ರಸ್ಯ ಸೇವನಮ್ ॥** ೩೬

ಬ್ರಾಹ್ಮಣನಿಗೆ ಬ್ರಹ್ಮಚರ್ಯದಿಂದ ವೇದಾಧ್ಯಯನವನ್ನು ಮಾಡಿ ಜ್ಞಾನವನ್ನು ಪಡೆಯುವುದೇ ತಪಸ್ಸು. ಕ್ಷತ್ರಿಯನಿಗೆ ಪರರಕ್ಷಣೆಯೇ ತಪಸ್ಸು. ಕೃಷಿಪಶುಪಾಲನೆಗಳು ವೈಶ್ಯನಿಗೆ ತಪಸ್ಸು. ಸೇವೆಯೇ ಶೂದ್ರನ ತಪಸ್ಸು.

## XII ಅಧ್ಯಾಯ

# ಗುಣತ್ರಯಗಳು, ಮೋಕ್ಷೋಪಾಯ

**ಶುಭಾಶುಭಫಲಂ ಕರ್ಮ ಮನೋವಾಗ್ದೇಹಸಂಭವಮ್ ।**
**ಕರ್ಮಜಾ ಗತಯೋ ನೄಣಾಮುತ್ತಮಾಧಮಮಧ್ಯಮಾಃ ॥** ೧

ಮನಸ್ಸು, ವಾಕ್ ಅಥವಾ ದೇಹದಿಂದ ಹುಟ್ಟಿದ ಕರ್ಮವು (ಕರ್ಮಾನುಸಾರವಾಗಿ) ಶುಭ ಅಥವಾ ಅಶುಭವಾದ ಫಲಗಳನ್ನು ಕೊಡುತ್ತದೆ. ಆದರಿಂದ ಉತ್ತಮ, ಮಧ್ಯಮ, ಅಧಮ ಗತಿಗಳು, ಜನ್ಮಾಂತರ ಪ್ರಾಪ್ತಿಗಳು ಆಗುತ್ತವೆ.

**ತಸ್ಯೇಹ ತ್ರಿವಿಧಸ್ಯಾಪಿ ತ್ರ್ಯಧಿಷ್ಠಾನಸ್ಯ ದೇಹಿನಃ ।**
**ದಶಲಕ್ಷಣಯುಕ್ತಸ್ಯ ಮನೋ ವಿದ್ಯಾತ್ಪ್ರವರ್ತಕಮ್ ॥** ೨

ಜೀವನ ಉತ್ತಮಾಧಮ ಮಧ್ಯಮವೆಂಬ ಮೂರು ಬಗೆಯ, ಮನೋವಾಗ್ದೇಹಗಳೆಂಬ ಮೂರು ಅಧಿಷ್ಠಾನ (ಆಶ್ರಯ) ವುಳ್ಳ, ಮತ್ತೆ ಮುಂದೆ ಹೇಳುವ ಹತ್ತು ಲಕ್ಷಣಗಳುಳ್ಳ ಕರ್ಮಕ್ಕೆ ಮನಸ್ಸೇ ಸಂಕಲ್ಪಾದಿಗಳಿಂದ ಪ್ರವರ್ತಕವಾದುದೆಂದು ತಿಳಿಯಬೇಕು.

**ಪರದ್ರವ್ಯೇಷ್ವಭಿಧ್ಯಾನಂ ಮನಸಾಽನಿಷ್ಟಚಿಂತನಮ್ ।**
**ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮ ಮಾನಸಮ್ ॥** ೩

ಪರರ ದ್ರವ್ಯವನ್ನು ಅಕ್ರಮವಾಗಿ ಪಡೆಯುವ ಚಿಂತೆ, ಮನಸ್ಸಿನಲ್ಲಿಯೇ ಮತ್ತೊಬ್ಬರಿಗೆ ಹಿಂಸೆಮಾಡುವ ಯೋಚನೆ, "ಪರಲೋಕವಿಲ್ಲ. ದೇಹವೇ ಶಾಶ್ವತ" ಎಂಬಂತಹ ತಪ್ಪು ಅಭಿಪ್ರಾಯಗಳನ್ನು ಸಮರ್ಥನೆ ಮಾಡುವುದು—ಈ ಮೂರೂ ಮಾನಸಿಕ ದುಷ್ಕರ್ಮಗಳು. (ಇವಕ್ಕೆ ವಿರುದ್ಧವಾದುವು ಶುಭ ಕರ್ಮಗಳು.)

**ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।**
**ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ॥** ೪

ಅಪ್ರಿಯವಾದ ಮತ್ತು ಕಟುವಾದ ನುಡಿ, ಸುಳ್ಳುಹೇಳುವುದು, ಚಾಡಿಮಾತು, ಸಂಬಂಧವಿಲ್ಲದ ವಿಷಯಗಳಮೇಲೆ ಹರಟೆ—ಈ ನಾಲ್ಕೂ ವಾಙ್ಮಯದುಷ್ಕರ್ಮಗಳು.

**ಅದತ್ತಾನಾಮುಪಾದಾನಂ ಹಿಂಸಾ ಚೈವಾವಿಧಾನತಃ ।**
**ಪರದಾರೋಪಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಮ್ ॥** ೫

ಪರರ ಸ್ವತ್ತನ್ನು ಅಪಹರಿಸುವುದು, ಅಶಾಸ್ತ್ರೀಯ ಹಿಂಸೆಗಳನ್ನು ಮಾಡುವುದು, ಪರಸ್ತ್ರೀ ಪ್ರಸಂಗ—ಈ ಮೂರೂ ದೈಹಿಕದುಷ್ಕರ್ಮಗಳು.

**ಯೋಽಸ್ಯಾತ್ಮನಃ ಕಾರಯಿತಾ ತಂ ಕ್ಷೇತ್ರಜ್ಞಂ ಪ್ರಚಕ್ಷತೇ ।**
**ಯಃ ಕರೋತಿ ತು ಕರ್ಮಾಣಿ ಸ ಭೂತಾತ್ಮೋಚ್ಯತೇ ಬುಧೈಃ ॥** ೬

ಈ ಶರೀರದಿಂದ ಯಾವನು ಕರ್ಮವನ್ನು ಮಾಡಿಸುತ್ತಾನೆಯೋ ಅವನನ್ನು ಕ್ಷೇತ್ರಜ್ಞನೆಂದೂ, ಕರ್ಮವನ್ನು ಯಾವನು ಮಾಡುತ್ತಾನೆಯೋ ಅವನನ್ನು ಭೂತಾತ್ಮಾ ಎಂದೂ ವಿದ್ವಾಂಸರು ಕರೆಯುವರು.

**ಯದ್ಯಾಚರತಿ ಧರ್ಮಂ ಸ ಪ್ರಾಯಶೋಽಧರ್ಮಮಲ್ಪಶಃ ।**
**ತೈರೇವ ಚಾವೃತೋ ಭೂತೈಃ ಸ್ವರ್ಗೇ ಸುಖಮುಪಾಶ್ನುತೇ ॥ ೭**

ಜೀವನು ಮನುಷ್ಯಶರೀರದಲ್ಲಿರುವಾಗ ಹೆಚ್ಚಾಗಿ ಧರ್ಮವನ್ನು ಆಚರಿಸಿ, ಸ್ವಲ್ಪ ಮಾತ್ರ ಅಧರ್ಮವನ್ನು ಮಾಡಿದರೆ, ಅವನು ಪೃಥಿವ್ಯಾದಿ ಭೂತಗಳಿಂದ ಆವರಿಸಲ್ಪಟ್ಟು (ಸ್ಥೂಲಶರೀರವನ್ನು ಹೊಂದಿ) ಸ್ವರ್ಗದಲ್ಲಿ ಸುಖವನ್ನು ಹೊಂದುತ್ತಾನೆ.

**ಯದಿ ತು ಪ್ರಾಯಶೋಽಧರ್ಮಂ ಸೇವತೇ ಧರ್ಮಮಲ್ಪಶಃ ।**
**ತೈರ್ಭೂತೈಃ ಸ ಪರಿತ್ಯಕ್ತೋ ಯಾಮೀಃ ಪ್ರಾಪ್ನೋತಿ ಯಾತನಾಃ ॥**

ಹೆಚ್ಚಾಗಿ ಅಧರ್ಮವನ್ನೂ ಸ್ವಲ್ಪಮಾತ್ರ ಧರ್ಮವನ್ನೂ ಮಾಡಿದವನು ಆ ಪಂಚಭೂತಗಳಿಂದ ಪರಿತ್ಯಕ್ತನಾಗಿ (ಮೃತನಾದಮೇಲೆ) ಯಮಯಾತನೆಗಳನ್ನು ಹೊಂದುವನು.

**ಸತ್ತ್ವಂ ಜ್ಞಾನಂ ತಮೋಽಜ್ಞಾನಂ ರಾಗದ್ವೇಷೌ ರಜಃ ಸ್ಮೃತಮ್ ।**
**ಏತದ್ವ್ಯಾಪ್ತಿಮದೇತೇಷಾಂ ಸರ್ವಭೂತಾಶ್ರಿತಂ ವಪುಃ ॥ ೯**

ಯಥಾರ್ಥಜ್ಞಾನವು ಸತ್ತ್ವಗುಣಲಕ್ಷಣ; ಯಥಾರ್ಥವಲ್ಲದ ಅಜ್ಞಾನವೇ ತಮಸ್ಸು; ರಾಗದ್ವೇಷಗಳು ರಜಸ್ಸು ಎಂದು ಹೇಳಲ್ಪಟ್ಟಿವೆ. ಈ ಸತ್ತ್ವರಜಸ್ತಮೋಗುಣಗಳಿಗೆ, ಸರ್ವಪ್ರಾಣಿಗಳನ್ನೂ ವ್ಯಾಪಿಸಿರುವ ಈ ಜ್ಞಾನಾಜ್ಞಾನಾದಿಗಳೇ ಲಕ್ಷಣ.

**ತತ್ರ ಯತ್ಪ್ರೀತಿಸಂಯುಕ್ತಂ ಕಿಂಚಿದಾತ್ಮನಿ ಲಕ್ಷಯೇತ್ ।**
**ಪ್ರಶಾಂತಮಿವ ಶುದ್ಧಾಭಂ ಸತ್ತ್ವಂ ತದುಪಧಾರಯೇತ್ ॥ ೧೦**

ಆ ಆತ್ಮನಲ್ಲಿ ಯಾವ ಜ್ಞಾನವು ಪ್ರೀತಿಯಿಂದ ಕೂಡಿ ಪ್ರಶಾಂತವೂ ಶುದ್ಧವೂ ಆಗಿರುವಂತೆ ಕಾಣುವುದೋ, ಅದನ್ನು ಸತ್ತ್ವವೆಂದು ಅರಿಯಬೇಕು.

**ಯತ್ತು ದುಃಖಸಮಾಯುಕ್ತಮಪ್ರೀತಿಕರಮಾತ್ಮನಃ ।**
**ತದ್ರಜೋ ಪ್ರತಿಪಂ ವಿದ್ಯಾತ್ಸತತಂ ಹಾರಿ ದೇಹಿನಾಮ್ ॥ ೧೧**

ಆತ್ಮನ ಯಾವ ಸಂವೇದನೆಯು (ತಿಳಿವು) ದುಃಖದಿಂದ ಕೂಡಿ ತನಗೆ

ಪ್ರೀತಿಯನ್ನು ಉಂಟುಮಾಡಲಾರದೋ ಮತ್ತು ದೇಹಿಗಳಿಗೆ ಯಾವಾಗಲೂ ವಿಷಯಗಳಲ್ಲಿ ಆಸೆಯನ್ನು ಉಂಟುಮಾಡುವುದೋ ಅದು ಸತ್ತ್ವಕ್ಕೆ ವಿರುದ್ಧವಾದ ರಜಸ್ಸೆಂದು ತಿಳಿಯಬೇಕು.

**ಯತ್ತು ಸ್ಯಾನ್ಮೋಹಸಂಯುಕ್ತಮವ್ಯಕ್ತಂ ವಿಷಯಾತ್ಮಕಮ್ ।**
**ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರಯೇತ್ ॥ ೧೨**

ಯಾವುದು ಮೋಹದಿಂದ ಕೂಡಿ, ಅಸ್ಪಷ್ಟವಾಗಿಯೂ ವಿಷಯಾತ್ಮಕವಾಗಿಯೂ ಇದ್ದು, ಅದರ ಸ್ವಭಾವವನ್ನು ಅಂತಃಕರಣ ಬಹಿಃಕರಣಗಳಿಂದ ಊಹಿಸಲು ಮತ್ತು ತಿಳಿಯಲು ಸಾಧ್ಯವಿಲ್ಲವೋ ಅದನ್ನು ತಾಮಸವೆಂದು ತಿಳಿಯಬೇಕು.

**ವೇದಾಭ್ಯಾಸಸ್ತಪೋ ಜ್ಞಾನಂ ಶೌಚಮಿಂದ್ರಿಯನಿಗ್ರಹಃ ।**
**ಧರ್ಮಕ್ರಿಯಾತ್ಮಚಿಂತಾ ಚ ಸಾತ್ತ್ವಿಕಂ ಗುಣಲಕ್ಷಣಮ್ ॥ ೧೩**

ವೇದಾಭ್ಯಾಸ, ತಪಸ್ಸು, ಶಾಸ್ತ್ರಗಳ ನಿಷ್ಕೃಷ್ಟಜ್ಞಾನ, ಶುಚಿತ್ವ, ಇಂದ್ರಿಯನಿಗ್ರಹ, ದಾನಾದಿ ಧರ್ಮಕಾರ್ಯಗಳು ಮತ್ತು ಆತ್ಮವಿಷಯಕವಾದ ಚಿಂತೆ, ಇವು ಸತ್ತ್ವಗುಣಲಕ್ಷಣಗಳನ್ನು ಸೂಚಿಸುವ ಕಾರ್ಯಗಳು.

**ಆರಂಭರುಚಿತಾಧೈರ್ಯಮಸತ್ಕಾರ್ಯಪರಿಗ್ರಹಃ ।**
**ವಿಷಯೋಪಸೇವಾ ಚಾಜಸ್ರಂ ರಾಜಸಂ ಗುಣಲಕ್ಷಣಂ ॥ ೧೪**

ರಜೋಗುಣಲಕ್ಷಣಗಳೆಂದರೆ, ಆರಂಭ ಮಾತ್ರದಲ್ಲಿ ಮನೋಹರವಾಗಿರುವುದು, ಅಧೈರ್ಯ, ನಿಷಿದ್ಧಕಾರ್ಯಾಚರಣೆ ಮತ್ತು ಯಾವಾಗಲೂ ವಿಷಯೋಪಭೋಗ.

**ಲೋಭಃ ಸ್ವಪ್ನೋಽಧೃತಿಃ ಕ್ರೌರ್ಯಂ ನಾಸ್ತಿಕ್ಯಂ ಭಿನ್ನವೃತ್ತಿತಾ ।**
**ಯಾಚಿಷ್ಣುತಾ ಪ್ರಮಾದಶ್ಚ ತಾಮಸಂ ಗುಣಲಕ್ಷಣಮ್ ॥ ೧೫**

ಅಧಿಕ ಧನಪ್ರಾಪ್ತಿಯಲ್ಲಿ ಆಸೆ, ವಿಶೇಷವಾಗಿ ನಿದ್ರಾಸಕ್ತಿ, ಅತೃಪ್ತಿ, ಕ್ರೌರ್ಯ, ನಾಸ್ತಿಕತೆ, ಆಚಾರಲೋಪ, ಭಿಕ್ಷೆಬೇಡುವ ಮನೋಭಾವ, ಅಜಾಗರೂಕತೆ—ಇವು ತಾಮಸಗುಣದ ಲಕ್ಷಣಗಳು.

**ಯತ್ಕರ್ಮ ಕೃತ್ವಾ ಕುರ್ವಂಶ್ಚ ಕರಿಷ್ಯಂಶ್ಚೈವ ಲಜ್ಜತಿ |**
**ತತ್ ಜ್ಞೇಯಂ ವಿದುಷಾ ಸರ್ವಂ ತಾಮಸಂ ಗುಣಲಕ್ಷಣಮ್ || ೧೭**

ಯಾವ ಕೆಲಸವನ್ನು ಮಾಡಿದಮೇಲೆ, ಮಾಡುತ್ತಿರುವಾಗ ಅಥವಾ ಮಾಡಬೇಕೆಂದಿರುವಾಗ ನಾಚಿಕೆ (ಹೇಸಿಗೆ) ಹುಟ್ಟುತ್ತದೆಯೋ ಅದೆಲ್ಲ ತಾಮಸಗುಣಲಕ್ಷಣವುಳ್ಳುದೆಂದು ವಿದ್ವಾಂಸನು ತಿಳಿಯಬೇಕು.

**ಯೇನಾಸ್ಮಿನ್ಕರ್ಮಣಾ ಲೋಕೇ ಖ್ಯಾತಿಮಿಚ್ಛತಿ ಪುಷ್ಕಲಾಮ್ |**
**ನ ಚ ಶೋಚತ್ಯಸಂಪತ್ತೌ ತದ್ವಿಜ್ಞೇಯಂ ತು ರಾಜಸಮ್ || ೧೭**

ಯಾವ ಕಾರ್ಯವನ್ನು ಮಾಡುವವನು, ಅದರಿಂದ ವಿಶೇಷ ಯಶಸ್ಸನ್ನು ಲೋಕದಲ್ಲಿ ಪಡೆಯಲು ಅಪೇಕ್ಷಿಸಿ, ಅದು ದೊರೆಯದೆ ಹೋದಾಗ ದುಃಖ ಪಡುತ್ತಾನೆಯೋ ಅದು ರಾಜಸಲಕ್ಷಣವುಳ್ಳದುದು.

**ಯತ್ಸರ್ವೇಣೇಚ್ಛತಿ ಜ್ಞಾತುಂ ಯನ್ನಲಜ್ಜತಿ ಚಾಚರನ್ |**
**ಯೇನ ತುಷ್ಯತಿ ಚಾತ್ಮಾಸ್ಯ ತತ್ಸತ್ತ್ವಗುಣಲಕ್ಷಣಮ್ || ೧೮**

ಯಾವುದನ್ನು ಮಾಡಿ ಜ್ಞಾನವನ್ನು ಪಡೆಯಲು ಅಪೇಕ್ಷಿಸುತ್ತಾನೆಯೋ, ಯಾವುದನ್ನು ಮಾಡಿ ನಾಚಿಕೆಪಟ್ಟುಕೊಳ್ಳುವುದಿಲ್ಲವೋ, ಯಾವ ಕಾರ್ಯದಿಂದ ಆತ್ಮತೃಪ್ತಿಯಾಗುವುದೋ ಅದನ್ನು ಸಾತ್ವಿಕವೆಂದು ತಿಳಿಯಬೇಕು.

**ತಮಸೋ ಲಕ್ಷಣಂ ಕಾಮೋ ರಜಸಸ್ತ್ವರ್ಥ ಉಚ್ಯತೇ |**
**ಸತ್ತ್ವಸ್ಯ ಲಕ್ಷಣಂ ಧರ್ಮಃ ಶ್ರೈಷ್ಠ್ಯಮೇಷಾಂ ಯಥೋತ್ತರಮ್ ||**

ತಮಸ್ಸು ಕಾಮಪ್ರಧಾನವಾದುದು, ರಜಸ್ಸು ಅರ್ಥಪ್ರಧಾನವಾದುದು, ಸತ್ತ್ವವು ಧರ್ಮಪ್ರಧಾನವಾದ ಗುಣವುಳ್ಳುದುದು; ಹೀಗೆ ಉತ್ತರೋತ್ತರವಾದುವು ಉತ್ತಮವಾಗಿರುವುವು.

**ವೇದಾಭ್ಯಾಸಸ್ತಪೋಜ್ಞಾನಮಿಂದ್ರಿಯಾಣಾಂ ಚ ಸಂಯಮಃ |**
**ಅಹಿಂಸಾ ಗುರುಸೇವಾ ಚ ನಿಃಶ್ರೇಯಸಕರಂ ಪರಮ್ || ೨೦**

ವೇದಾಭ್ಯಾಸ, ತಪಸ್ಸು, ಜ್ಞಾನ, ಇಂದ್ರಿಯನಿಗ್ರಹ, ಅಹಿಂಸೆ, ಗುರುಸೇವೆ ಇವು ಉತ್ತಮವಾದ ಮೋಕ್ಷಸಾಧನೆಗಳು.

('ವೇದಾಭ್ಯಾಸ' ಶಬ್ದದಿಂದ ಷಡಂಗಸಹಿತವಾದ ವೇದವನ್ನು ಕಲಿಯಬೇಕೆಂದೂ, 'ಜ್ಞಾನ' ಶಬ್ದದಿಂದ ಬ್ರಹ್ಮಜ್ಞಾನವನ್ನು ಪಡೆಯಬೇಕೆಂದೂ ಅರ್ಥವಾಗುವುದು.)

**ಸರ್ವೇಷಾಮಪಿ ಚೈತೇಷಾಮಾತ್ಮಜ್ಞಾನಂ ಪರಂ ಸ್ಮೃತಮ್ ।**
**ತದ್ಧ್ಯಗ್ರ್ಯಂ ಸರ್ವವಿದ್ಯಾನಾಂ ಪ್ರಾಪ್ಯತೇ ಹ್ಯಮೃತಂ ತತಃ ॥ ೨೧**

ಮೇಲೆ ಹೇಳಿದ ಎಲ್ಲ ಸಾಧನೆಗಳಲ್ಲಿ ಆತ್ಮಜ್ಞಾನವನ್ನು ಪಡೆಯುವುದೇ ಶ್ರೇಷ್ಠವಾದುದು. ಎಲ್ಲ ವಿದ್ಯೆಗಳಿಗಿಂತ ಆತ್ಮವಿದ್ಯೆಯೇ ಹೆಚ್ಚಿನದು. ಅದನ್ನು ಪಡೆದಮೇಲೆ ಮೋಕ್ಷವು ಪ್ರಾಪ್ತವಾಗುತ್ತದೆ.

**ಸುಖಾಭ್ಯುದಯಿಕಂ ಚೈವ ನೈಃಶ್ರೇಯಿಸಿಕಮೇವ ಚ ।**
**ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್ ॥ ೨೨**

ವೇದೋಕ್ತ ಕರ್ಮಗಳಲ್ಲಿ ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡುವುದರಿಂದ ಸ್ವರ್ಗಾದಿ ಸುಖಗಳನ್ನು ಸಂಪಾದಿಸಿಕೊಡತಕ್ಕಂಥವು ಕೆಲವು; ಇವನ್ನು ಪ್ರವೃತ್ತಕರ್ಮಗಳೆನ್ನುತ್ತಾರೆ. ಮತ್ತೆ ಕೆಲವು ಮೋಕ್ಷಸಂಪಾದನೆಯನ್ನು ಮಾಡಿಕೊಡುವ ಉಪಾಸನಾದಿ ಕರ್ಮಗಳು; ಇವನ್ನು ನಿವೃತ್ತಕರ್ಮಗಳೆನ್ನುತ್ತಾರೆ.

**ಇಹ ಚಾಮುತ್ರ ವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ ।**
**ನಿಷ್ಕಾಮಂ ಜ್ಞಾನಪೂರ್ವಂತು ನಿವೃತ್ತಮುಪದಿಶ್ಯತೇ ॥ ೨೩**

ಇಹಪರಗಳಲ್ಲಿ ಕಾಮಸಾಧನೆ ಮಾಡಿಕೊಡುವ ಕರ್ಮವು ಪ್ರವೃತ್ತವೆನಿಸುವುದು. ಜ್ಞಾನಪೂರ್ವಕವಾದ ನಿಷ್ಕಾಮಕರ್ಮವು (ಮೋಕ್ಷಸಾಧಕವಾಗಿ) ನಿವೃತ್ತವೆನಿಸುವುದು.

**ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥ ೨೪**

ಸರ್ವಭೂತಗಳಲ್ಲಿಯೂ ಪರಮಾತ್ಮನನ್ನೂ ಪರಮಾತ್ಮನಲ್ಲಿ ಸರ್ವಭೂತಗಳನ್ನೂ ಸಮವಾಗಿ ಕಂಡು, ಪರಮಾತ್ಮನನ್ನು ಪೂಜಿಸುವವನು ಮೋಕ್ಷವನ್ನು ಪಡೆಯುವನು.

**ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ।**
**ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ॥**

ವೇದಗಳಿಗೆ ವಿರುದ್ಧವಾದ ಅಭಿಪ್ರಾಯಗಳನ್ನು ಕೊಡುವ ಸ್ಮೃತಿಗಳಾಗಲಿ, ಚಾರ್ವಾಕಾದಿ ಯಾವುದೇ ಒಂದು ಕುದರ್ಶನವೇ ಆಗಲಿ ತಮಃ-ಪ್ರಧಾನವಾದವು ; ಪರಲೋಕದಲ್ಲಿ ಅವುಗಳಿಂದ ಏನೂ ಫಲ ಬರುವುದಿಲ್ಲ.

**ಉತ್ಪದ್ಯಂತೇ ಚ್ಯವಂತೇ ಚ ಯಾನ್ಯತೋಽನ್ಯಾನಿ ಕಾನಿಚಿತ್ ।**
**ತಾನ್ಯರ್ವಾಕ್ಕಾಲಿಕತಯಾ ನಿಷ್ಫಲಾನ್ಯನೃತಾನಿ ಚ ॥ ೨೬**

ವೇದವಿರುದ್ಧವಾದ ಹಲಕೆಲವು ಸ್ಮೃತಿದರ್ಶನಗಳು ಹುಟ್ಟುತ್ತವೆ ಮತ್ತೆ ನಾಶಹೊಂದುತ್ತವೆ. ಅವು ಇತ್ತೀಚಿನ ಕಾಲದಲ್ಲಿ ರಚಿತವಾಗಿರುವುದರಿಂದ ನಿಷ್ಫಲವೂ ಅಸತ್ಯವೂ ಆಗಿರುವುವು.

(ಅನಾದಿ, ಅಪೌರುಷೇಯಗಳಾದ ವೇದಗಳನ್ನು ಅನುಸರಿಸುವ ಸ್ಮೃತಿಗಳೇ ಪ್ರಮಾಣ.)

**ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಮ್ ।**
**ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ ॥ ೨೭**

ಶುದ್ಧವಾದ ಧರ್ಮವನ್ನು ಅಪೇಕ್ಷಿಸುವವನು ಪ್ರತ್ಯಕ್ಷ, ಅನುಮಾನ ಮತ್ತು ವೇದಮೂಲಗಳಾದ ಸ್ಮೃತ್ಯಾದಿ ಶಾಸ್ತ್ರಗಳು ಈ ಮೂರನ್ನೂ ಚೆನ್ನಾಗಿ ತಿಳಿದುಕೊಳ್ಳಬೇಕು

(ಉಪಮಾನ, ಅರ್ಥವಾದ ಮುಂತಾದುವು ಅನುಮಾನವೆಂಬ ತರ್ಕದೊಳಗೇ ಸೇರುವುವು.)

**ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥ ೨೮**

ಋಷಿಪ್ರೋಕ್ತವಾದ ಧರ್ಮೋಪದೇಶವನ್ನು ಶ್ರುತಿಸ್ಮೃತಿಗಳಿಗೆ ಅನುಸಾರವಾದ ಮೀಮಾಂಸಾನ್ಯಾಯಗಳಿಂದ ಯಾವನು ವಿಮರ್ಶೆಮಾಡಿಕೊಳ್ಳುತ್ತಾನೆಯೋ ಅವನೇ ಧರ್ಮದ ಸ್ವರೂಪವನ್ನು ತಿಳಿಯಬಲ್ಲನು ; ಬೇರೊಬ್ಬನಿಂದ ಅದು ಸಾಧ್ಯವಿಲ್ಲ.

**ಅನಾಮ್ನಾತೇಷು ಧರ್ಮೇಷು ಕಥಂ ಸ್ಯಾದಿತಿ ಚೇದ್ಭವೇತ್ ।**
**ಯಂ ಶಿಷ್ಟಾ ಬ್ರಾಹ್ಮಣಾ ಬ್ರೂಯುಃ ಸ ಧರ್ಮಃ ಸ್ಯಾದಶಂಕಿತಃ ॥೨೯**

ಸಾಮಾನ್ಯವಿಧಿಗಳಲ್ಲಿ ಕೆಲವನ್ನು ವೇದಶಾಸ್ತ್ರಗಳು ವಿಶದವಾಗಿ ಹೇಳಿರದೆ ಇರಬಹುದು; ಆಗ ಧರ್ಮಸ್ವರೂಪವನ್ನು ನಿಶ್ಚಯಿಸುವುದು ಹೇಗೆ? ಆಗ ಶಿಷ್ಟಾಚಾರವುಳ್ಳ ಬ್ರಾಹ್ಮಣರು ಯಾವುದನ್ನು ಧರ್ಮವೆಂದು ಹೇಳುವರೋ ಅದೇ ಧರ್ಮವೆಂದು ಸಂದೇಹವಿಲ್ಲದೆ ತಿಳಿಯತಕ್ಕದ್ದು.

(ತೈತ್ತರೀಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿಯೂ ಇದನ್ನೇ "ಅಥ ಯದಿ ತೇ ಧರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್, ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ, ಯುಕ್ತಾ ಆಯುಃಕ್ತಾಃ, ಅಲೂಕ್ಷಾ ಧರ್ಮಕಾಮಾಃ ಸ್ಯುಃ, ಯಥಾ ತತ್ರ ವರ್ತೇರನ್ ತತ್ರ ವರ್ತೇಥಾಃ" ಎಂದು ಸ್ಪಷ್ಟವಾಗಿ ಶಿಷ್ಯನಿಗೆ ಉಪದೇಶಮಾಡಲಾಗಿದೆ. ಇದರಿಂದಲೇ ತಾತ ಮುತ್ತಾತಂದಿರಿಂದಲೂ ನಡೆಸಲ್ಪಟ್ಟ ಹಿರಿಯರ ಶಿಷ್ಟಾಚಾರವು ಪ್ರಾಬಲ್ಯವನ್ನು ಪಡೆದಿದೆ.)

**ದಶಾವರಾ ವಾ ಪರಿಷದ್ಯಂ ಧರ್ಮಂ ಪರಿಕಲ್ಪಯೇತ್ ।**
**ತ್ರ್ಯವರಾ ವಾಪಿ ವೃತ್ತಸ್ಥಾ ತಂ ಧರ್ಮಂ ನ ವಿಚಾಲಯೇತ್ ॥ ೩೦**

(ಸದಾಚಾರಿಗಳಾದ ಬ್ರಾಹ್ಮಣರಿಂದಲೇ ಧರ್ಮವು ನಿಶ್ಚಿತವಾಗದಿದ್ದರೆ) ಹತ್ತಕ್ಕಿಂತ ಕಡಿಮೆಯಿಲ್ಲದ ಬ್ರಾಹ್ಮಣರಿಂದ ಕೂಡಿದ 'ದಶಾವರಾ' ಎಂಬ ಸಭೆಯಾಗಲಿ, ಅದೂ ಸಾಧ್ಯವಿಲ್ಲದಿದ್ದಲ್ಲಿ ಮೂವರು ಸದಾಚಾರಿಗಳಾದ ಬ್ರಾಹ್ಮಣರಿಗಿಂತ ಕಡಿಮೆಯಿಲ್ಲದ 'ತ್ರ್ಯವರಾ' ಎಂಬ ಸಭೆಯಾಗಲಿ, ಯಾವುದನ್ನು ಧರ್ಮವೆಂದು ನಿಶ್ಚಯಿಸುವುದೋ ಅದನ್ನೇ ಸ್ವೀಕರಿಸಬೇಕು, ಬಿಡಬಾರದು.

**ತ್ರೈವಿದ್ಯೋ ಹೇತುಕಸ್ತರ್ಕೀ ನೈರುಕ್ತೋ ಧರ್ಮಪಾಠಕಃ ।**
**ತ್ರಯಶ್ಚಾಶ್ರಮಿಣಃ ಪೂರ್ವೇ ಪರಿಷತ್ಸ್ಯಾದ್ದಶಾವರಾ ॥ ೩೧**

ವೇದಗಳ ಋಗ್ಯಜುಃಸಾಮವೆಂಬ ಮೂರು ಶಾಖೆಗಳನ್ನು ಚೆನ್ನಾಗಿ ಅಧ್ಯಯನಮಾಡಿದವರು, ಶ್ರುತಿಸ್ಮೃತ್ಯನುಸಾರಿಯಾದ ನ್ಯಾಯಶಾಸ್ತ್ರಗಳನ್ನು ತಿಳಿದವರು, ಮೀಮಾಂಸಾಶಾಸ್ತ್ರದ ತರ್ಕವನ್ನು ಬಲ್ಲವರು,

ನಿರುಕ್ತವೆಂಬ ವೇದಾಂಗವನ್ನು ಕಲಿತವರು, ಮನ್ವಾದಿ ಧರ್ಮಶಾಸ್ತ್ರಜ್ಞರು, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥರೆಂಬ ಮೂರು ಆಶ್ರಮದಲ್ಲಿನ ವಿಪ್ರರು ಇವರುಳ್ಳ ಸಭೆಯೇ 'ದಶಾವರಾ'.

**ಋಗ್ವೇದವಿದ್ಯಜುರ್ವಿಚ್ಚ ಸಾಮವೇದವಿದೇವ ಚ ।**
**ತ್ರ್ಯವರಾ ಪರಿಷಜ್ಜ್ಞೇಯಾ ಧರ್ಮಸಂಶಯನಿರ್ಣಯೇ ॥ ೩೨**

ಧರ್ಮಸಂಶಯದ ನಿವಾರಣೆಗಾಗಿ, ಋಗ್ಯಜುಃಸಾಮವೇದಗಳನ್ನು ಅರಿತು, ಸದಾಚಾರಿಗಳಾಗಿರುವ ಮೂವರು ಬ್ರಾಹ್ಮಣರಿಗಿಂತ ಕಡಿಮೆ ಇಲ್ಲದ ಸಭೆಗೆ 'ತ್ರ್ಯವರಾ' ಎಂದು ಹೆಸರು.

**ಅವ್ರತಾನಾಮಮಂತ್ರಾಣಾಂ ಜಾತಿಮಾತ್ರೋಪಜೀವಿನಾಮ್ ।**
**ಸಹಸ್ರಶಃ ಸಮೇತಾನಾಂ ಪರಿಷತ್ತ್ವಂ ನ ವಿದ್ಯತೇ ॥ ೩೩**

ಬ್ರಹ್ಮಚರ್ಯಾದಿ ವ್ರತಗಳನ್ನು ಆಚರಿಸದೆ, ಮಂತ್ರ ವೇದಾಧ್ಯಯನಗಳಿಲ್ಲದೆ, ಬರೇ ತಮ್ಮ (ಬ್ರಾಹ್ಮಣ) ಜಾತಿಯೊಂದನ್ನೇ ಅವಲಂಬಿಸಿರುವ ಸಾವಿರಾರು ಜನರು ಒಂದುಕಡೆ ಸೇರಿದರೂ ಅದು ಸಭೆಯಾಗಲಾರದು.

**ಇತ್ಯೇತನ್ಮಾನವಂ ಶಾಸ್ತ್ರಂ ಭೃಗುಪ್ರೋಕ್ತಂ ಪಠನ್ ದ್ವಿಜಃ ।**
**ಭವತ್ಯಾಚಾರವಾನ್ನಿತ್ಯಂ ಯಥೇಷ್ಟಾಂ ಪ್ರಾಪ್ನುಯಾದ್ಗತಿಮ್ ॥ ೩೪**

ಇದು ಫಲಶ್ರುತಿ—

ಹೀಗೆ ಭೃಗುಮಹರ್ಷಿಯು ಹೇಳಿರುವ 'ಮನುಸ್ಮೃತಿ'ಯನ್ನು ನಿತ್ಯವೂ ಓದುವ ದ್ವಿಜನು ಸದಾಚಾರಿಯಾಗುವನು ಮತ್ತು ಮುಂದೆ ತನಗೆ ಅಪೇಕ್ಷಿತವಾದ ಸ್ವರ್ಗಾಪವರ್ಗಗಳೆಂಬ ಸದ್ಗತಿಯನ್ನೂ ಹೊಂದುವನು.



ಪ್ರಭಾ ಮುದ್ರಣಾಲಯ, ಬಸವನಗುಡಿ, ಬೆಂಗಳೂರು-4

ಇದೇ ಲೇಖಕರಿಂದ

## ಶ್ರೀಮನ್ಮಧ್ವಮತ ಪ್ರಸಾರ

ಶ್ರೀಮದಾನಂದತೀರ್ಥರಿಂದ ಸಮರ್ಥಿಸಲ್ಪಟ್ಟಿರುವ ಪ್ರಾಚೀನ ಸ್ವತಂತ್ರಸಿದ್ಧಾಂತ, ಗುರುಗಳ ಜೀವನ ಚರಿತ್ರೆ, ಪೂರ್ಣಪ್ರಜ್ಞ ಮತವನ್ನು ಸಂಚಾರ, ಉಪನ್ಯಾಸ, ಗ್ರಂಥರಚನೆಗಳಿಂದ ಪ್ರಸಾರ ಮಾಡಿ ಕೀರ್ತಿ ಪಡೆದ ಮಹನೀಯರ ಕಾರ್ಯಗಳು ಎಂಬ ಮೂರು ವಿಭಾಗಗಳುಳ್ಳ ಈ ಗ್ರಂಥದಲ್ಲಿ ಪ್ರತಿಯೊಬ್ಬ ಮಾಧ್ವನೂ ಅವಶ್ಯವಾಗಿ ತಿಳಿದುಕೊಳ್ಳಬೇಕಾದ ಮುಖ್ಯ ವಿಷಯಗಳು ಸಂಗ್ರಹಿಸಲ್ಪಟ್ಟಿವೆ.

ಬೆಲೆ : ರೂ. 4–00 ಅಂಚೆವೆಚ್ಚ ಪ್ರತ್ಯೇಕ.

## ಪೂರ್ಣಪ್ರಜ್ಞಭಾರತೀ

ಪರಮಾತ್ಮ, ಜೀವ, ಪೂಜೆ, ಭಕ್ತಿ, ಉಪಾಸನೆ ಮುಂತಾದ ವಿಷಯಗಳಲ್ಲಿ ಶ್ರೀಮನ್ಮಧ್ವಾಚಾರ್ಯರ ನುಡಿಮುತ್ತುಗಳನ್ನು ಅವರ ನಾನಾ ಗ್ರಂಥಗಳಿಂದ ಆರಿಸಿ ಕನ್ನಡ ಭಾವಾನುವಾದದೊಡನೆ ಕೊಡಲಾಗಿದೆ. ಮೂಲಶ್ಲೋಕಗಳು ಕಂಠಪಾಠ ಮಾಡಿಕೊಳ್ಳಲು ಸಹಕಾರಿಯಾಗಿವೆ.

ಬೆಲೆ : 80 ಪೈಸೆ. ಅಂಚೆವೆಚ್ಚ ಪ್ರತ್ಯೇಕ.

---

ಪ್ರಭಾ ಮುದ್ರಣಾಲಯ
22–A, ಡಾ॥ ಡಿ. ವಿ. ಗುಂಡಪ್ಪ ರಸ್ತೆ, ಬೆಂಗಳೂರು–೪